# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು


ಭಗವದ್ಗೀತೆ : ಒಂದು ಅವಲೋಕನ
೭ : ಕರ್ಮಯೋಗ — ಜಿ. ರಾಮಕೃಷ್ಣ ... ೯

ಜಾತಿ ಮತ್ತು ಲಿಂಗ ಸಮ್ಮಿಲನದ ಶೋಷಣೆಯನ್ನು ತೆರೆದಿಟ್ಟ ಶರ್ಮಿಳಾ ರೇಗೆ — ಯರ‍್ರಿಸ್ವಾಮಿ ಈ. ... ೧೯

ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಅಪೂರ್ಣ — ದು. ಸರಸ್ವತಿ ... ೨೩

ಖೋತಿ ವಿರುದ್ಧದ ಹೋರಾಟ — ಜಿ. ರಾಮಕೃಷ್ಣ ... ೧೩

ಪರಿಶಿಷ್ಟರ ಪದತಲದಿಂದ ಅಭಿವೃದ್ಧಿಯ ಆರಂಭ — ಡಾ॥ ಟಿ. ಆರ್. ಚಂದ್ರಶೇಖರ ... ೩೯

ಕಾವ್ಯಲೋಕ — ೧೦, ೪೦, ೫೩, ೫೭

ಡಾ॥ ಅಂಬೇಡ್ಕರ್ ಮತ್ತು ಧಾರವಾಡ — ಸದಾಶಿವ ಮರ್ಜಿ ... ೩೫
ಅಂಬೇಡ್ಕರ ಓದಿನ ಹಸಿವು ಮತ್ತು ಜಾತಿ ! — ವಿಷ್ಣು ನಾಯ್ಕ ... ೧೨
ಅಂಬೇಡ್ಕರ್ ಮತ್ತು ಪತ್ರಿಕೋದ್ಯಮ — ಜಿ. ಎನ್. ಮೋಹನ್ ... ೪೯
ಇದು ಬಾಬಾ ಸಾಹೇಬರು ನಡೆದುಬಂದ ಹಾದಿ — ಸನತ್‌ಕುಮಾರ ಬೆಳಗಲಿ ... ೫೯

ಮಲದ ಗುಂಡಿಯಲ್ಲಿ ಉಸಿರು ಸಿಕ್ಕಿಸಿಕೊಂಡು... — ಕಿನ್ನರಿ ಬೊಮ್ಮಯ್ಯ ... ೫೫

ಮಹಾಡ್ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಕರ್ಮಭೂಮಿ — ಡಾ॥ ಎನ್. ಗಾಯತ್ರಿ ... ೩೧

‘ಭಾರತ ಭಾಗ್ಯ ವಿಧಾತ’ – ಎಲ್ಲರಿಗೂ ಸಲ್ಲುವ ಅಂಬೇಡ್ಕರ್ — ಬಿ. ಯು. ಸುಮಾ ... ೫೧
ಡಾ॥ ಅಂಬೇಡ್ಕರ್ : ಭಾರತದ ಮಹಿಳೆ ಮತ್ತು ಹಿಂದೂ ಕೋಡ್‌ಬಿಲ್ — ಡಾ॥ ಅನಸೂಯ ಕಾಂಬಳೆ ... ೪೫

ಪ್ರೀತಿಯ ರಾಜಕಾರಣದ ಸಂದೇಶ ಬೀರಿದ ಮಹಿಳಾ ದಿನ ... ೪೩

ನಾನು ಓದಿದ ಪುಸ್ತಕ : ‘ಕರ್ನಾಟಕದ ಸಮಗ್ರ ದಲಿತ ಚರಿತ್ರೆ’ –
ಸಕಾಲಿಕ ಅಧ್ಯಯನ — ಡಾ॥ ಎಚ್. ಎಸ್. ಗೋಪಾಲ ರಾವ್ ... ೨೮
ವಿಶ್ವವೀಕ್ಷಣೆ : ಟ್ರಂಪ್ ನೀತಿಯಿಂದ ಪ್ಯಾಲಸ್ತೀನಿಯನ್ನರಿಗೆ ದ್ರೋಹ — ಸೀಯಾರ್ಕೆ ... ೬೨
ನಭಾವಲೋಕನ : ಮುಂಜಾವಿನಲ್ಲಿ ಶುಕ್ರ — ಡಾ॥ ಬಿ. ಎಸ್. ಶೈಲಜಾ ... ೫೪
ಹೊಸ ಓದು — ಡಾ॥ ಎಂ. ವೆಂಕಟಸ್ವಾಮಿ, ಶ್ರೀಸುಮಿತ್ರಾಸುತ ... ೫೮



**ಚಿತ್ರಗಳು :** ಕಮಲಂ ಅರಸು, ವಿ. ಗೋಪಾಲ್, ನಾಮದೇವ ಕಾಗದಗಾರ
ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ಮಳ್ಳಿ

**ಮುಖಪುಟ ಚಿತ್ರ :** ಮಹಾಡ್ ಕೆರೆ ಪ್ರವೇಶ ಸನ್ನಿವೇಶದ ಉಬ್ಬು ಚಿತ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ





ಮಾಧ್ಯಮಗಳ ಸಮೀಕ್ಷೆಯನ್ನೆಲ್ಲ ಉಲ್ಟಾ ಮಾಡಿ ಐದು ರಾಜ್ಯಗಳ ಚುನಾವಣಾ ಫಲಿತಾಂಶ ಹೊರಬಿದ್ದಿದೆ. ಉತ್ತರ ಪ್ರದೇಶದಲ್ಲಿ ಎಲ್ಲ ನಿರೀಕ್ಷೆಗಳಂತೆ ಅತಂತ್ರ ಪರಿಸ್ಥಿತಿ ಇಲ್ಲದೆ ಭಾಜಪ ಭಾರಿ ಬಹುಮತದಿಂದ ಗೆಲುವು ಸಾಧಿಸಿದೆ. ಗೋವಾ, ಮಣಿಪುರಗಳಲ್ಲಿ ಕಾಂಗ್ರೆಸ್ ದೊಡ್ಡ ಪಕ್ಷವಾಗಿ ಹೊಮ್ಮಿದರೂ ಸರಕಾರ ರಚಿಸುವುದರಲ್ಲಿ ಹಿಂದೆ ಬಿತ್ತು. ಭಾಜಪ ಕಾಂಗ್ರೆಸ್ಸಿನ ಪರಂಪರೆಯನ್ನೇ ಅನುಸರಿಸಿ ರಾಜ್ಯಪಾಲರನ್ನು ಚೆನ್ನಾಗಿ ಬಳಸಿಕೊಂಡು ತರಾತುರಿಯಲ್ಲಿ ಸರಕಾರ ಸ್ಥಾಪಿಸಿ ತಿರುಗೇಟು ನೀಡಿತು. ಮನೋಹರ ಪರಿಕರ್ ಅವರನ್ನು ರಕ್ಷಣಾ ಸಚಿವ ಸ್ಥಾನದಿಂದ ಇಳಿಸಿ ಗೋವಾದ ಮುಖ್ಯಮಂತ್ರಿಯಾಗಿಸಿ ಕೈತೊಳೆದುಕೊಂಡರು ನರೇಂದ್ರ ಮೋದಿ. ಕೇಂದ್ರ ಸಂಪುಟದಲ್ಲಿ ಆತ ಮುಂದುವರಿಯುವುದು ಇರುಸು ಮುರುಸಾಗಿತ್ತು ಪ್ರಧಾನಿ ಮೋದಿಗೆ. ಇದೂ ಕೂಡ ಹಿಂದಿನಿಂದ ಕಾಂಗ್ರೆಸ್ ಅನುಸರಿಸುತ್ತ ಬಂದಿರುವ ತಂತ್ರವೇ. ೧೯೫೨ರ ಮೊದಲ ಚುನಾವಣೆಯಲ್ಲೇ ಆಗಿನ ಮದರಾಸು ಪ್ರಾಂತದಲ್ಲಿ ಸಿ. ರಾಜಗೋಪಾಲಾಚಾರಿ ಅವರನ್ನು ತಂದು ಕಾಂಗ್ರೆಸ್ ಬಹುಮತ ಪಡೆದುಕೊಂಡದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈಗ ಮಾತ್ರ ಕಾಂಗ್ರೆಸ್ ನಾಯಕರು ರಾಜ್ಯಪಾಲರನ್ನು ಭಾಜಪ ಬಳಸಿಕೊಂಡಿತು ಎಂದು ಆಪಾದಿಸುವುದರಲ್ಲಿ ಅರ್ಥವೇನಿದೆ? ಹುದ್ದೆಯನ್ನು ನಿರ್ಮಿಸಿದ್ದೇ ಆಡಳಿತಾರೂಢ ಪಕ್ಷದ ಉಪಯೋಗಕ್ಕೆ ಅಲ್ಲವೆ. “ಮಾಡಿದ್ದುಣ್ಣೋ ಮಹರಾಯ” ಎಂಬ ನಾಣ್ಣುಡಿ ಒಪ್ಪುತ್ತದೆಯಷ್ಟೆ.

ಪಂಜಾಬಿನಲ್ಲಿ ಕಾಂಗ್ರೆಸ್ ತಲೆ ಎತ್ತಿರುವುದೊಂದೇ ಅದಕ್ಕೆ ಸಮಾಧಾನದ ಸಂಗತಿ. ಪಂಚ ರಾಜ್ಯಗಳ ನಂತರವೂ ಕಾಂಗ್ರೆಸ್ ಇನ್ನೂ ಪಾಠ ಕಲಿಯದಿದ್ದರೆ, ಬದಲಾಗದಿದ್ದರೆ ಧೂಳೀಪಟವಾಗುವುದು ಖಚಿತ. ಮೋದಿ ಅಲೆ ಅದನ್ನು ಮೂಲೆಗೊತ್ತುವುದರಲ್ಲಿ ಕಿಂಚಿತ್ತೂ ಸಂದೇಹವಿಲ್ಲ. ನೋಟು ರದ್ದತಿಯ ಅವಾಂತರದಿಂದೇನೂ ಬೇಳೆ ಬೇಯಲಿಲ್ಲ. ಮೋದಿ ಕ್ರಮದಿಂದ ಜನ ತೊಂದರೆಗೊಳಗಾದರೂ ಸಹಿಷ್ಣುಗಳಾಗಿದ್ದಾರೆ ಎನ್ನುವುದನ್ನು ಚುನಾವಣಾ ಫಲಿತಾಂಶ ತೋರ್ಪಡಿಸಿದೆ. ಉತ್ತರ ಪ್ರದೇಶ, ಉತ್ತರಾಖಂಡಗಳಲ್ಲಿನ ಜಯ ಮುಂದೆ ರಾಜ್ಯಸಭೆಯಲ್ಲಿ ಭಾಜಪಗೆ ಅಗತ್ಯ ಬಹುಮತ ದೊರೆತೀತು. ಮೋದಿ–ಅಮಿತ್‌ಷಾ ಜೋಡಿಯ ಓಟಕ್ಕೆ ಸದ್ಯಕ್ಕಂತೂ ಲಗಾಮು ಹಾಕುವುದು ದುಸ್ಸಾಧ್ಯ ಎನಿಸುತ್ತಿದೆ. ಇದು ಬಲಪಂಥೀಯರ ಮೇಲುಗೈಯುಗ ಎಂದು ತೋರುತ್ತಿದೆ. ಇಪ್ಪತ್ತನೇ ಶತಮಾನದ ಎರಡನೇ ದಶಕದಲ್ಲಿ ರಷ್ಯಾದಲ್ಲಿ ಕ್ರಾಂತಿಯಾಗಿ ಎಡಪಂಥೀಯ ರಾಜಕಾರಣ ಮುಂದೆ ಬಂತು, ಇಪ್ಪತ್ತೊಂದನೇ ಶತಮಾನದ ಎರಡನೇ ದಶಕದಲ್ಲಿ ಬಲಪಂಥೀಯರ ಪ್ರಾಬಲ್ಯ ಮುಂದಿದೆ ಪ್ರಪಂಚದಲ್ಲಿ. ಇತ್ತ ಮೋದಿ, ಅತ್ತ ಟ್ರಂಪ್ ಉದಾಹರಣೆ. ಎಡಪಂಥದ ಹೆಸರೇ ಇಲ್ಲವಾಗಿದೆ ಈಗ.

✳ ✳ ✳

ಕೆಲ ದಿನಗಳ ಹಿಂದೆ ಕರ್ನಾಟಕ ರಾಜ್ಯದ ಮಂಗಳೂರಿನಲ್ಲಿ ಮೋಜಿನ ಮೇಜವಾನಿ ನಡೆಸುತ್ತಿದ್ದವರ ಮೇಲೆ ಹಿಂದೂ ಮತಾಂಧರು ಹಲ್ಲೆ ನಡೆಸಿದ್ದು ‘ಮಂಗಳೂರು ಪ್ರಕರಣ’ ಎಂದೇ ದಾಖಲಾಗಿದೆ. ಹಿಂದೂ ಧರ್ಮದ ಉದ್ಧಾರಕರು ಪಾರ್ಟಿಯಲ್ಲಿ ಭಾಗವಹಿಸಿದ ಯುವಕರು ಮತ್ತು ಯುವತಿಯರನ್ನು ಎಳೆದಾಡಿ ಚೆನ್ನಾಗಿ ಥಳಿಸಿದ್ದರು. ಆಗ ಹುಟ್ಟಿಕೊಂಡ ಪದಗುಚ್ಛವೇ ‘ನೈತಿಕ ಪೊಲೀಸುಗಿರಿ’. ಅಂದರೆ ಧರ್ಮದ ಹೆಸರಿನಲ್ಲಿ ನಡೆಸುವ ಗೂಂಡಾಗಿರಿ. ಇದು ಮೋದಿ ಅಲೆ ಸುಳಿದಾಡಿ ಕೇಂದ್ರದಲ್ಲಿ ಅಧಿಕಾರ ಸ್ಥಾಪನೆಯಾದ ಮೇಲೆ ವಿಪರೀತಕ್ಕೆ ಹೋಗಿದೆ. ಗೋರಕ್ಷಣೆ, ಗೋಮಾಂಸ ಭಕ್ಷಣೆ ಇತ್ಯಾದಿ, ಇತ್ಯಾದಿ ಹೆಸರಿನಲ್ಲಿ ದೇಶದ ನಾನಾ ಕಡೆಗಳಲ್ಲಿ ದಾಂಧಲೆ, ದುಂಡಾವೃತ್ತಿ ನಡೆಯುತ್ತಲೇ ಇದೆ. ಇದರ ಹಿಂದೆ ಆರೆಸ್ಸೆಸ್‌ನ ನಾನಾ ಬಗೆಯ ಹಿಂದೂ ಸಂಘಟನೆಗಳ ಕೈವಾಡವೇ ಹೆಚ್ಚು. ಇದು ದೇಶದಲ್ಲಿ ಅಧಿಕಗೊಳ್ಳುತ್ತಿರುವ ಅಸಹನೆಯ ಸಂಕೇತ ಎನ್ನಬಹುದು. ಈಗ ಈ ಬಗೆಯ ದಾದಾಗಿರಿ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ (ಎಬಿವಿಪಿ) ಎಂಬ ಸಂಘಟನೆಯ ಮೂಲಕವಾಗಿ ವಿಶ್ವವಿದ್ಯಾನಿಲಯಗಳ ಕ್ಯಾಂಪಸ್‌ಗೆ ಹರಡಿದೆ. ಜವಹರಲಾಲ್ ವಿಶ್ವವಿದ್ಯಾನಿಲಯ, ಹೈದರಾಬಾದ್


*(೬ನೇ ಪುಟಕ್ಕೆ )*






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೮ ಸಂಚಿಕೆ–೯ ಏಪ್ರಿಲ್ ೨೦೧೭

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

ಶ್ರೀ ವಿನಾಯಕ ಪ್ರಿಂಟರ್ಸ್

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ: ೨೨೧೬೧೯೧೧, ೨೨೧೬೧೯೧೨



**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


# ಸಂಪಾದಕೀಯ

## ಡಾ॥ ಅಂಬೇಡ್ಕರ್ ಅವರ ಅಪಹರಣ ಮತ್ತು ಖಾಸಗೀಕರಣ

ಪ್ರಸ್ತುತ ಭಾರತೀಯ ಸಾಮಾಜಿಕ ಮತ್ತು ರಾಜಕೀಯ ವಾತಾವರಣದಲ್ಲಿ ಸಂಕ್ರಮಣ ಸ್ಥಿತಿಯಲ್ಲಿರುವುದು ಡಾ॥ ಬಿ. ಆರ್. ಅಂಬೇಡ್ಕರ್ ಅವರ ಪ್ರತಿಮೆ ಮತ್ತು ಚಿಂತನೆಗಳು. ಯಾವ ಅಂಬೇಡ್ಕರ್ ಅವರು ಕೊನೆಯುಸಿರಿರುವ ವರೆಗೂ ಮನುವಾದದ ವಿರುದ್ಧ, ಶ್ರೇಣೀಕೃತ ವ್ಯವಸ್ಥೆಯ ವಿರುದ್ಧ ಹೋರಾಡಿದರೋ ಅದೇ ಮನುವಾದಿಗಳು ಮತ್ತು ವರ್ಣವ್ಯವಸ್ಥೆಯ ಪ್ರತಿಪಾದಕರು ಅಂಬೇಡ್ಕರ್ ಅವರನ್ನು ಅಪ್ಪಿಕೊಳ್ಳುವ ನಾಟಕ ಶುರುಮಾಡಿದ್ದಾರೆ. ಇದು ವ್ಯಕ್ತಿಯನ್ನು ಅಪ್ಪಿಕೊಂಡು ವ್ಯಕ್ತಿತ್ವವನ್ನು ನಾಶಮಾಡುವ ಅಪಾಯಕಾರಿ ಪ್ರಕ್ರಿಯೆ. ಇದು ಇಂದಿನ ಮನುವಾದಿಗಳ ತಂತ್ರವಲ್ಲ, ಇತಿಹಾಸದುದ್ದಕ್ಕೂ ಪುರೋಹಿತಶಾಹಿ ತನಗೆದುರಾದವರನ್ನು ನಾಶಮಾಡುವ ಯತ್ನಗಳನ್ನು ಮಾಡುತ್ತಲೇ ಬಂದಿದೆ. ಬ್ರಾಹ್ಮಣ್ಯ ವ್ಯವಸ್ಥೆಗೆ ಎದುರಾದ ಪ್ರತಿ ಸಿದ್ಧಾಂತವನ್ನು ದಮನಿಸಲು ನೋಡುತ್ತದೆ; ದಮನಿಸಲು ಅಸಾಧ್ಯವಾದಾಗ ಅಪ್ಪಿಕೊಂಡು ಸಾಯಿಸುತ್ತದೆ. ಇಂದು ಪ್ರಧಾನಿ ಮೋದಿಯವರ ಪಕ್ಷ, ಸಂಘಪರಿವಾರ, ದಲಿತ, ದಮನಿತರ ಮೇಲೆ ನಿರಂತರ ದಾಳಿ, ಹಲ್ಲೆ, ಕೊಲೆ ನಡೆಸುತ್ತಿದ್ದರೆ, ಇನ್ನೊಂದೆಡೆ ದಲಿತರ ಜಾಗೃತಿಗೆ ಕಾರಣರಾದ ಅಂಬೇಡ್ಕರ್ ಅವರ ಹೆಸರಿನಲ್ಲಿ ಕಾರ್ಯಕ್ರಮ ರೂಪಿಸುತ್ತಿದೆ. ಇದು ವ್ಯಕ್ತಿಯನ್ನು ಅಪ್ಪಿಕೊಂಡಂತೆ ಮಾಡಿ ಆ ವ್ಯಕ್ತಿಯ ಚಿಂತನೆಗಳನ್ನು ನಾಶಮಾಡುವ ಹುನ್ನಾರ. ಅಂಬೇಡ್ಕರ್ ಅವರ ಹೆಸರು ಮತ್ತು ಪ್ರತಿಮೆಗಳನ್ನು ಬಳಸಿಕೊಂಡು ಪ್ರಚಾರ ಪಡೆಯುತ್ತಿರುವ ಮೋದಿ ಪಡೆ ಅಂಬೇಡ್ಕರ್ ಅವರ ಜನಾಂಗವನ್ನು ಮತ್ತು ಅಂಬೇಡ್ಕರ್ ವಾದಿಗಳನ್ನು ಸದೆಬಡಿಯುತ್ತಿದೆ. ರೋಹಿತ ವೇಮುಲನ ಸಾಂಸ್ಥಿಕ ಕೊಲೆ, ಜಿಗ್ನೇಶನ ಬಂಧನ, ದೇಶಾದ್ಯಂತ ದಲಿತರ ಮೇಲಿನ ದಾಳಿ, ಬೆತ್ತಲೆ ಮೆರವಣಿಗೆ ಮಾಡಿದ ಶಕ್ತಿಗಳೇ ಇಂದು ಅಂಬೇಡ್ಕರ್ ದಿನಾಚರಣೆಯನ್ನು ಅದ್ದೂರಿಯಾಗಿ ಮಾಡುವ ಯೋಜನೆ ರೂಪಿಸುತ್ತಿವೆ. ಅಲ್ಲಿಗೆ ಅಂಬೇಡ್ಕರ್ ಅವರ ಅಪಹರಣದ ಅಪಾಯಕಾರಿ ನೀಲಿನಕ್ಷೆ ಸಿದ್ಧವಾಗಿದೆ.

ಸ್ವತಂತ್ರ ಭಾರತದ ಸಂವಿಧಾನ ಶಿಲ್ಪಿ ಅಂಬೇಡ್ಕರ್ ಅವರ ಮೊದಲ ಆದ್ಯತೆ ಜಾತಿ ವಿನಾಶ, ಅಸ್ಪೃಶ್ಯರ ವಿಮೋಚನೆ ಯಾಗಿದ್ದರೂ ಸ್ವತಂತ್ರ ಭಾರತದ ಧ್ಯೇಯ ಸ್ವಾತಂತ್ರ್ಯ, ಸಮಾನತೆ, ಸಹೋದರತೆಗಳಾಗಿರಬೇಕು ಎಂದು ಬಯಸಿದವರು. ಅವರ ಬದುಕಿನುದ್ದಕ್ಕೂ ದೇಶದ ದಮನಿತ ಜನತೆಯ ವಿಮೋಚನೆಗಾಗಿ ಹೋರಾಡಿದರೂ ಸಂವಿಧಾನ ರಚನಾ ಸಂದರ್ಭದಲ್ಲಿ, ಸಂವಿಧಾನದ ಲೋಕಾರ್ಪಣೆ ಮಾಡುವ ಸಂದರ್ಭದಲ್ಲಿ ಅಂಬೇಡ್ಕರ್ ದೇಶವನ್ನು, ದೇಶದ ಪ್ರತಿಯೊಬ್ಬ ಪ್ರಜೆಯನ್ನು ಪ್ರೀತಿಸುವ ಮಹಾನ್ ನೇತಾರರಾಗಿದ್ದರು. ೨೫ ನವೆಂಬರ್ ೧೯೪೯ರಂದು ಭಾರತದ ಕಾನ್ಸ್ಟಿಟುಯೆಂಟ್ ಅಸೆಂಬ್ಲಿಯಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಅವರು ಮಾಡಿದ ಭಾಷಣ ಅವರೊಳಗಿನ ಸರ್ವಜನತೆಯ ನಾಯಕನ ಕಳಕಳಿಯನ್ನು ತೋರಿಸುತ್ತದೆ. ೨೬ ಜನವರಿ, ೧೯೫೦ರಂದು ಘೋಷಣೆಯಾಗಲಿರುವ ಸ್ವತಂತ್ರ ಭಾರತ ಗಣರಾಜ್ಯ ಹೇಗಿರ ಬೇಕೆಂದು ಅವರು ಆಡಿದ ಮಾತುಗಳು ಅಂದಿಗಿಂತಲೂ ಇಂದು ಹೆಚ್ಚು ಪ್ರಸ್ತುತವಾಗಿವೆ. ಫ್ರಾನ್ಸ್ ಕ್ರಾಂತಿಯ ಘೋಷ ವಾಕ್ಯಗಳಾದ, 'ಸ್ವಾತಂತ್ರ್ಯ, ಸಮಾನತೆ, ಸಹೋದರತೆ'ಗಳನ್ನು ತಮ್ಮ ಉಸಿರಿನ ಜೊತೆ ಬೆರೆಸಿಕೊಂಡಿದ್ದರು ಬಾಬಾ ಸಾಹೇಬ. ಆ ಘೋಷಣೆ ಸ್ವತಂತ್ರ ಭಾರತದ ಧ್ಯೇಯವಾಗಬೇಕೆಂದು ಬಯಸಿದ್ದರು ಮತ್ತು ಇಂಥ ಮಹಾನ್ ಧ್ಯೇಯವನ್ನು ಬರಲಿರುವ ಭಾರತದ ಪ್ರಭುತ್ವ ಜಾರಿಗೆ ತರಬೇಕೆಂದು ಬಯಸಿದ್ದರು. ಅಂಬೇಡ್ಕರ್ ಅವರಿಗೆ 'ಪ್ರಭುತ್ವ ಸಮಾಜವಾದ'ದ ಬಗೆಗೆ ಅಪಾರವಾದ ನಂಬಿಕೆ ಇತ್ತು. ಆದರೆ ಇಂದಿನ ಪ್ರಭುತ್ವ 'ಸ್ವಾತಂತ್ರ್ಯ, ಸಮಾನತೆ, ಸಹೋದರತೆ'ಗಳನ್ನು ಯಾವ ಸ್ಥಿತಿಯಲ್ಲಿಟ್ಟಿದೆ ಎಂಬುದನ್ನು ವಿವರಿಸುವ ಅಗತ್ಯವಿಲ್ಲ. ಈ ಮೂರು ಘನವಾದ ಘೋಷಣೆಗಳನ್ನು ಛಿದ್ರಮಾಡುವ ಪ್ರಭುತ್ವ ನಮ್ಮ ಮುಂದಿದೆ ಮತ್ತು ಅದು ಅಂಬೇಡ್ಕರ್ ಅವರನ್ನೇ ತನ್ನ ಐಕಾನ್ ಮಾಡಿಕೊಳ್ಳಲು ಹೊರಟಿದೆ. ಬಹುಶಃ ಅಂಬೇಡ್ಕರ್ ಅವರಷ್ಟು ದುರುಪಯೋಗವಾದ ರಾಜಕಾರಣಿ, ಚಿಂತಕ ಈ ದೇಶದಲ್ಲಿ ಇನ್ನೊಬ್ಬರಿಲ್ಲ.

ತಮ್ಮ ಚಿಂತನೆ, ಕ್ರಿಯಾಶೀಲತೆಯಿಂದ ರಾಷ್ಟ್ರನಾಯಕರ ಸ್ಥಾನದಲ್ಲಿರಬೇಕಾದ ಅಂಬೇಡ್ಕರ್ ಅವರನ್ನು ಜಾತಿಗೆ ಸೀಮಿತಗೊಳಿಸಿ ಖಾಸಗೀಕರಣಗೊಳಿಸುವ ಹುನ್ನಾರ ಅಪ್ರಜ್ಞಾಪೂರಕವಾಗಿ ಆದದ್ದಲ್ಲ. ಜಾತಿ ವಿನಾಶದ ಮೂಲಕ ಸಹೋದರತೆಯನ್ನು ತರಬಯಸಿದ್ದ ವ್ಯಕ್ತಿಯನ್ನು ಜಾತಿವಾದಿಗಳು ತಮ್ಮವನಲ್ಲ ಎಂದರು. ಜಾತಿ ವಿನಾಶ ಚಳುವಳಿಯ ನಾಯಕತ್ವ ವಹಿಸಬೇಕಾಗಿದ್ದ ದಲಿತರು ಅಂಬೇಡ್ಕರ್ ಪ್ರತಿಮೆಗೆ, ಭಾವಚಿತ್ರಕ್ಕೆ ಕೊಟ್ಟಷ್ಟು ಮಹತ್ವವನ್ನು ಅವರ ಚಿಂತನೆಗೆ ಕೊಡಲಿಲ್ಲ. ಅವರ ಚಿಂತನೆಗಳ ವಿಸ್ತರಣೆಯ ಮೂಲಕ ಅವರ ನೈಜ ವ್ಯಕ್ತಿತ್ವವನ್ನು ಬಿಂಬಿಸಿ ಎಲ್ಲ ದಮನಿತ ವರ್ಗದ ನಾಯಕರನ್ನಾಗಿಸುವ ಬದಲು ಒಂದು ಜಾತಿಗೆ ಸೀಮಿತಗೊಳಿಸಿ ಖಾಸಗೀಕರಣಗೊಳಿಸುವ ಪ್ರಕ್ರಿಯೆ ನಡೆದಿದೆ. ಅಂಬೇಡ್ಕರ್‌ವಾದದ ವಿಕಾಸ ಅವರನ್ನು ಎಲ್ಲ ಕೆಳವರ್ಣ ಮತ್ತು ಕೆಳವರ್ಗಗಳ ಹೋರಾಟದ ಸಂಕೇತವಾಗಿ ರೂಪಿಸಬೇಕಿತ್ತು. ಆದರೆ ದಲಿತರಲ್ಲಿಯೇ ಬಣಗಳಾಗಿ ಅವರನ್ನು ಒಂದು ಬಣಕ್ಕೆ ಸೀಮಿತಗೊಳಿಸ ಲಾಗಿದೆ. ಪರಿಣಾಮವಾಗಿ ಕೆಲವು ದಲಿತ ಬಣಗಳು ಮನುವಾದಿ ರಾಜಕೀಯ ಬಣದ ಭಾಗಗಳಾಗಿವೆ.

ಅಂಬೇಡ್ಕರ್ ಅವರು ಅಸ್ಪೃಶ್ಯರಿಗೆ ಅಸ್ಪೃಶ್ಯತೆ ನಿವಾರಣೆಗಾಗಿ ರಾಜಕೀಯ ಅಧಿಕಾರ ಒಂದು ಬೀಗದ ಕೈ ಎಂದು ಹೇಳಿದ್ದರು. ಅದನ್ನೇ ತಮ್ಮ ಸಮಯ ಸಾಧಕತೆಗೆ ಬಳಸಿಕೊಂಡ ಕೆಲವು ದಲಿತ ನಾಯಕರು, ದಲಿತ ಬಣಗಳು ಮನುವಾದಿ ರಾಜಕೀಯ ಪಕ್ಷದ ಭಾಗವಾಗಿವೆ. ಇದು ಅಂಬೇಡ್ಕರ್ ಅವರಿಗೆ, ಅವರ ಚಿಂತನೆಗೆ, ಪರಿಶ್ರಮಕ್ಕೆ ಮಾಡುತ್ತಿರುವ ದ್ರೋಹ.

ರಾಜಕೀಯ ಅಧಿಕಾರ ಪಡೆಯಬೇಕೆಂದು ಹೇಳಿದ ಅಂಬೇಡ್ಕರ್ ಅವರು ಸ್ವತಃ ಸ್ವತಂತ್ರ ಕಾರ್ಮಿಕ ಪಕ್ಷ, ಶೆಡ್ಯೂಲ್ ಕಾಸ್ಟ್ ಫೆಡರೇಶನ್ ಮತ್ತು ಕೊನೆಯ ದಿನಗಳಲ್ಲಿ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಸ್ಥಾಪಿಸಿದ್ದರು. ದಲಿತ, ಶೋಷಿತ ಪ್ರಜ್ಞೆಯನ್ನೂ, ನಿರ್ದಿಷ್ಟ ಕಾರ್ಯಕ್ರಮವನ್ನೂ ಒಳಗೊಂಡ ರಾಜಕಾರಣ ಅವರ ಗುರಿಯಾಗಿತ್ತು. ಅವರ ಜೀವಿತಾವಧಿಯಲ್ಲಿ ಅಂಥ ಗುರಿ ಸಾಧಿಸಲು ಕೇವಲ ತಮ್ಮ ಪಕ್ಷದಿಂದ ಸಾಧ್ಯವಾಗುವುದಿಲ್ಲ ಎಂಬುದನ್ನು ಮನಗಂಡು ಸಮಾಜವಾದಿಗಳ ಜೊತೆ ಚುನಾವಣಾ ಹೊಂದಾಣಿಕೆಯನ್ನೂ ಮಾಡಿಕೊಂಡಿದ್ದರು. ಒಂದು ಸತ್ಯವೆಂದರೆ ಅಂಬೇಡ್ಕರ್ ಅವರು ಕಮ್ಯುನಿಸ್ಟ್ ಪಕ್ಷದ ಜೊತೆ ಹೊಂದಾಣಿಕೆ ಮಾಡಿಕೊಂಡಿರಲಿಲ್ಲ. ಕಾರಣ ಸಮಕಾಲಿನ ಕಮ್ಯುನಿಸ್ಟ್ ನಾಯಕರ ಜೊತೆ ಅವರಿಗೆ ಭಿನ್ನಾಭಿಪ್ರಾಯಗಳಿದ್ದವು. ಮಾರ್ಕ್ಸ್‌ವಾದದ ಮುಖ್ಯ ಅಂಶಗಳನ್ನು ಒಪ್ಪಿದ್ದರು ಕೂಡ. ತಮ್ಮ 'ಬುದ್ಧ ಅಥವಾ ಮಾರ್ಕ್ಸ್' ಕೃತಿಯಲ್ಲಿ ಅದನ್ನು ಹೇಳಿದ್ದಾರೆ. ಮೊದಲು ವರ್ಗ ಸಂಘರ್ಷದ ಮೂಲಕ ಸಮಾಜವಾದಿ ಪ್ರಭುತ್ವ ಸಾಧಿಸಿ ಆ ಪ್ರಭುತ್ವದಿಂದಲೇ ಜಾತಿ ವಿನಾಶ ಮಾಡುವುದು ಅಂದಿನ ಕಮ್ಯುನಿಸ್ಟ್ ಪಕ್ಷದ ನಾಯಕರ ಧೋರಣೆಯಾಗಿತ್ತು. ಅದನ್ನು ಅಂಬೇಡ್ಕರ್ ಅವರು ಒಪ್ಪಿರಲಿಲ್ಲ. ಇದು ಅಂಬೇಡ್ಕರ್ ಸಿದ್ಧಾಂತವನ್ನೇ ಒಪ್ಪಿಕೊಂಡ ಎರಡು ದಲಿತ ಸಂಘಟನೆಗಳ ನಡುವಿನ ಭಿನ್ನಾಭಿಪ್ರಾಯದಂತಿತ್ತು. ಅದು ಅಂದಿನ ಸಂಘಟನಾ ಸಮಸ್ಯೆಯಾಗಿತ್ತೇ ಹೊರತು ಪರಿಹರಿಸಲಸಾಧ್ಯವಾದ ಸೈದ್ಧಾಂತಿಕ ಭಿನ್ನಾಭಿಪ್ರಾಯವಾಗಿರಲಿಲ್ಲ. ಅದರ ಮಧ್ಯೆಯೂ ಹಲವಾರು ಹೋರಾಟಗಳಲ್ಲಿ, ಸಂಯುಕ್ತ ಮಹಾರಾಷ್ಟ್ರ ಚಳುವಳಿಯಲ್ಲಿ ಅಂಬೇಡ್ಕರ್ ಮತ್ತು ಕಮ್ಯುನಿಸ್ಟರು ಜೊತೆಗೂಡಿದ್ದರು ಎನ್ನುವುದನ್ನು ಗಮನಿಸಬೇಕು. ಅಂದು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದ, ಕನಿಷ್ಠ ಕಲ್ಯಾಣ ರಾಜ್ಯದ ಪರಿಕಲ್ಪನೆಗಳನ್ನು ತನ್ನ ಕಾರ್ಯಕ್ರಮದ ಭಾಗವಾಗಿಸಿಕೊಂಡಿದ್ದ 'ಅಂದಿನ' ಕಾಂಗ್ರೆಸ್ ಅಧಿಕಾರದಲ್ಲಿತ್ತು. ಇಂದು ಕಾರ್ಪೊರೇಟ್ ಹಿತಾಸಕ್ತಿಗಾಗಿ ಫ್ಯಾಸಿಸಂನ್ನು ಉಸಿರಾಡುವ ಬಿ.ಜೆ.ಪಿ. ಅಧಿಕಾರದಲ್ಲಿದೆ. ಅಂಬೇಡ್ಕರ್ ಅವರು ಇಂದು ಈ ಫ್ಯಾಸಿಸ್ಟ್ ಪ್ರಭುತ್ವದ ಸಂದರ್ಭದಲ್ಲಿ ಇದ್ದಿದ್ದರೆ ಖಂಡಿತ ಅವರು 'ಪ್ರಭುತ್ವ ಸಮಾಜವಾದ'ವನ್ನು ಪ್ರತಿಪಾದಿಸುತ್ತಿರಲಿಲ್ಲ. ಅಂಬೇಡ್ಕರ್‌ವಾದದ ವಿಕಾಸವನ್ನು ಈ ಹಿನ್ನೆಲೆಯಲ್ಲಿ ನೋಡಿ ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಸಮುದಾಯಗಳು, ರೈತ, ಕಾರ್ಮಿಕ, ಎಲ್ಲ ಜನಪರ ಚಳುವಳಿಗಳು ಸಮಾನ, ಸಾಮಾನ್ಯ ಕಾರ್ಯಕ್ರಮದಡಿಯಲ್ಲಿ ಒಂದಾಗಬೇಕಿದೆ. ಅಂದಾಗ ಮಾತ್ರ ಅಂಬೇಡ್ಕರ್ ಅಪಹರಣವನ್ನೂ, ಖಾಸಗೀಕರಣವನ್ನೂ ತಡೆಯಬಹುದು. ಅಂಬೇಡ್ಕರ್ ಅವರ ಕನಸಾದ ದಲಿತ, ದಮನಿತರ, ಒಟ್ಟಾರೆ ಶೋಷಿತ ವರ್ಗದ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಬಹುದು.

ಸಿದ್ದನಗೌಡ ಪಾಟೀಲ

## ಪ್ರಜಾಪ್ರಭುತ್ವವಾದಿಗಳಿಗೆ ಎಚ್ಚರಿಕೆ ಗಂಟೆ

ಚುನಾವಣೆಗಳು ನಡೆದ ಐದು ರಾಜ್ಯಗಳ ಪೈಕಿ ನಾಲ್ಕರಲ್ಲಿ ಭಾಜಪ ಸರಕಾರ ರಚಿಸುವುದರಲ್ಲಿ ಸಫಲಗೊಂಡರೆ, ಕಾಂಗ್ರೆಸ್ ಒಂದಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಎರಡು ರಾಜ್ಯಗಳಲ್ಲಿ – ಗೋವಾ, ಮಣಿಪುರ – ಎರಡನೇ ಸ್ಥಾನ ಪಡೆದುಕೊಂಡರೂ, ರಾಜ್ಯಪಾಲರುಗಳನ್ನು ಉಪಯೋಗಿಸಿಕೊಂಡು, ಚಿಲ್ಲರೆ ಪಕ್ಷಗಳನ್ನು, ಸ್ವತಂತ್ರರನ್ನು ಕೊಂಡು ಸರಕಾರ ಸ್ಥಾಪಿಸಿತು ಆತುರಾತುರವಾಗಿ. ಇದು ನಮ್ಮ ದೇಶದ ರಾಜಕೀಯದಲ್ಲಿ ಹೊಸದೇನಲ್ಲ. ಆಡಳಿತದಲ್ಲಿದ್ದಾಗ ಕಾಂಗ್ರೆಸ್ ತುಳಿದ ಹಾದಿಯನ್ನೇ ಭಾಜಪ ಅನುಸರಿಸಿದೆ. ಉತ್ತರಾಖಂಡದಲ್ಲಿ ಭಾಜಪ ಬಹುಮತ ನಿರೀಕ್ಷಿತ. ಉತ್ತರಪ್ರದೇಶದ ೪೦೩ ಸ್ಥಾನಗಳಲ್ಲಿ ೩೧೨ ಸ್ಥಾನಗಳನ್ನು ಗೆದ್ದದ್ದು ಅನಿರೀಕ್ಷಿತ.

ಒಂದು ವಾರ ಕಳೆದ ಮೇಲೆ ಉತ್ತರಪ್ರದೇಶದಲ್ಲಿ ಕಟ್ಟಾ ಹಿಂದುತ್ವವಾದಿ ಪಾರ್ಲಿಮೆಂಟ್ ಸದಸ್ಯ ಯೋಗಿ ಆದಿತ್ಯನಾಥ್‌ಗೆ ಮುಖ್ಯಮಂತ್ರಿ ಪಟ್ಟ ಕಟ್ಟಿದ್ದಾರೆ ಶಾಸನ ಸಭಾ ಸದಸ್ಯರನ್ನು ಬಿಟ್ಟು. ತೀವ್ರ ಪೈಪೋಟಿ ಇದ್ದುದರಿಂದ ಎಮ್ಮೆಲ್ಲೆಗಳನ್ನು ಬಿಟ್ಟು ಕೇಶವಪ್ರಸಾದ್ ಮೌರ್ಯ ಹಾಗೂ ದಿನೇಶ್ ಶರ್ಮಾ ಇವರನ್ನು ಉಪಮುಖ್ಯಮಂತ್ರಿಗಳಾಗಿ ಮಾಡಿದ್ದಾರೆ ತೇಪೆ ಹಾಕಿ ಹೊರಗಿನಿಂದ ತಂದು.

ಫಲಿತಾಂಶಗಳು ಚುನಾವಣಾ ಸಮೀಕ್ಷೆಗಳನ್ನು ತಲೆಕೆಳಗೆ ಮಾಡಿದವು, ೨೦೧೪ರ ಲೋಕಸಭಾ ಚುನಾವಣೆಗಳಂತೆಯೇ. ಇದು ದೇಶದಲ್ಲಿ ಬಲಪಂಥೀಯ, ಮತೀಯ ರಾಜಕಾರಣ ಬೇರೂರುತ್ತಿರುವುದಕ್ಕೆ ದ್ಯೋತಕ. ಅದೇ ಸಮಯದಲ್ಲಿ ಎಡಪಂಥೀಯ ಪಕ್ಷಗಳು ಮೂಲೆಗುಂಪಾಗುತ್ತಿರುವುದಕ್ಕೂ ಸೂಚಕ. ದಕ್ಷಿಣ ಭಾರತದಲ್ಲಿ ಕೇರಳ ರಾಜ್ಯವೊಂದನ್ನು ಬಿಟ್ಟು ಎಡಪಕ್ಷಗಳು ಬೇರೆಲ್ಲೆಡೆ ನಾಮಾವಶೇಷವಾಗಿವೆ. ಈ ಬೆಳವಣಿಗೆಗೆ ಕಾರಣಗಳನ್ನು ಅರಸುವುದು ಜರೂರು ಅಗತ್ಯ. ಒಂದು ಕಾಲಘಟ್ಟದಲ್ಲಿ ಕಾಂಗ್ರೆಸ್ಸಿಗೆ ಪರ್ಯಾಯವೋ ಎನಿಸಿದ್ದ ಎಡಪಕ್ಷಗಳು ಸೊರಗುತ್ತಿರುವುದೀಗ ಯೋಚಿಸಬೇಕಾದ ಸಂಗತಿ.

ಸೋತುಗೆದ್ದ ಎಲ್ಲ ಪಕ್ಷಗಳೂ ಚುನಾವಣೆ ಮುಗಿದ ಮೇಲೆ ಲೆಕ್ಕಾಚಾರ ಮಾಡುವುದು ಸಹಜ. ಆತ್ಮಾವಲೋಕನದ ಸಮಯವೂ ಹೌದು. ಆದರೆ ಒಂದು ಮಾತ್ರ ಗಟ್ಟಿ, ಮೋದಿ ಪ್ರಭಾವ ಇನ್ನೂ ಕುಗ್ಗಿಲ್ಲ ಎನ್ನುವುದು. ಜನಸಾಮಾನ್ಯರಿಗೆ ಏನೇ ತೊಂದರೆಗಳಾದರೂ ಜನ ನೋಟುರದ್ದತಿ ಕ್ರಮವನ್ನು ಅಂಗೀಕರಿಸಿದ್ದಾರೆ. ಉತ್ತರಪ್ರದೇಶದ ಅಸೆಂಬ್ಲಿ ಚುನಾವಣೆ ಹಾಗೂ ಮಹಾರಾಷ್ಟ್ರದಲ್ಲಿನ ಮುನಿಸಿಪಲ್ ಚುನಾವಣೆಗಳು ಅದನ್ನು ತೋರಿಸಿವೆ. ಬಹುದೊಡ್ಡ ರಾಜ್ಯವಾಗಿರುವ ಉತ್ತರಪ್ರದೇಶದಲ್ಲಿ ಜಯ ಎಂದರೆ ದೆಹಲಿ ಗದ್ದುಗೆ ಲಭಿಸಿದಂತೆಯೇ ಎಂಬ ನಂಬುಗೆ ಇದೆ. ಅದು ಎಷ್ಟು ಮಟ್ಟಿಗೆ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ನಿಜ ಎನ್ನುವುದು ೨೦೧೯ರಲ್ಲಿ ಗೊತ್ತಾಗುತ್ತದೇನೋ! ಅಂತೂ ಶೇ.೩೯ರಷ್ಟು ಮತ ಗಳಿಸಿದ್ದಾಗ್ಯೂ ಭಾಜಪ ಅತ್ಯಧಿಕ ಸ್ಥಾನಗಳನ್ನು ಗಳಿಸಿದೆ. ಉತ್ತರಪ್ರದೇಶದಲ್ಲಿ ಭಾಜಪ ಕಳೆದ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ಭದ್ರವಾದ ನೆಲೆಯನ್ನು ಪಡೆದು ಕೊಂಡಿದೆ. ೨೦೧೭ರ ಈ ಚುನಾವಣೆಗಳಲ್ಲಿ ಜಾತಿ ರಾಜಕಾರಣ, ಅಲ್ಪಸಂಖ್ಯಾತರ ಮೇಲೆ ಒತ್ತಡ, ಭೀತಿಯ ವಾತಾವರಣ ಮೇಲುಗೈ ಪಡೆದಿರುವುದು ಅಚ್ಚರಿಯೇನಲ್ಲ. ಅವು ಯಾವತ್ತೂ ಇದ್ದದ್ದೆ. ಸಮಾಜವಾದಿ ಪಾರ್ಟಿ ಅಧಿಕಾರಾರೂಢ ಪಕ್ಷವಾಗಿದ್ದರೂ ಚುನಾವಣೆಗೆ ಮುನ್ನ ಅಪ್ಪಮಗನ ಜಗಳ ಮತದಾರರ ಮೇಲೆ ಸಾಕಷ್ಟು ಪರಿಣಾಮ ಉಂಟುಮಾಡಿದೆ. ಬಿಹಾರ ಮಾದರಿಯಲ್ಲಿ ಎಲ್ಲ ಪ್ರತಿಪಕ್ಷಗಳು ಒಂದಾಗಿ ಭಾಜಪ ಎದುರಿಸದೇ ಹೋದದ್ದೂ ಸೋಲಿಗೆ ಒಂದು ಕಾರಣ. ಮಾಯಾವತಿ ನೇತೃತ್ವದ ದಲಿತ ಸಮುದಾಯದ ರಾಜಕಾರಣ ಮನ್ನಣೆ ಪಡೆಯಲಿಲ್ಲ. ಅದು ಪಡೆದ ಮತಗಳನ್ನು ಗಮನಿಸಿದರೆ, ಪ್ರತಿಪಕ್ಷಗಳ ಮತದ ಛಿದ್ರೀಕರಣ ಅರಿವಾಗುತ್ತದೆ. ಅವೆಲ್ಲ ಏನೇ ಇರಲಿ, ಜನಾಭಿಪ್ರಾಯಕ್ಕೆ ಮಾನ್ಯ.

ಚುನಾವಣೆಗಳಲ್ಲಿ ವೈಫಲ್ಯವನ್ನೇ ಕಾಣುತ್ತಿರುವ ಕಾಂಗ್ರೆಸ್ ಹಾಗೂ ಎಡಪಕ್ಷಗಳು ಪರಿಸ್ಥಿತಿಯನ್ನು ಗಂಭೀರವಾಗಿ ಪರಿಗಣಿಸಬೇಕು. ಮುಂಬರುವ ಪಾರ್ಲಿಮೆಂಟರಿ ಚುನಾವಣೆಗಳನ್ನು (೨೦೧೯) ಗಮನದಲ್ಲಿರಿಸಿಕೊಂಡು ಅಗತ್ಯವಾದ ತಂತ್ರ ರೂಪಿಸಬೇಕು. ೨೦೧೮ರಲ್ಲಿ ಕರ್ನಾಟಕ ರಾಜ್ಯದ ಶಾಸನಸಭೆಗೆ ಚುನಾವಣೆಗಳು ನಡೆಯಲಿವೆ. ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಪಕ್ಷಕ್ಕೆ ಐದು ರಾಜ್ಯಗಳ ಚುನಾವಣಾ ಫಲಿತಾಂಶ ಎಚ್ಚರಿಕೆ ಗಂಟೆ. ಈಗಾಗಲೇ ಗೆದ್ದೆತ್ತಿನ ಬಾಲ ಹಿಡಿಯುವುದು ಎಂಬಂತೆ ಕಾಂಗ್ರೆಸ್ಸಿನಿಂದ ಭಾಜಪ ಕಡೆಗೆ ವಲಸೆ ಪ್ರಾರಂಭವಾಗಿದೆ. ಸದ್ಯದಲ್ಲೇ ಜರುಗಲಿರುವ ಉಪಚುನಾವಣೆ ಫಲಿತಾಂಶ ಮುನ್ಸೂಚನೆಯಾಗಲಿದೆ. ಈಗಾಗಲೇ ಭಾರತೀಯ ಜನತಾ ಪಕ್ಷ ರಾಜ್ಯದಲ್ಲಿ ಅಧಿಕಾರ ಹಿಡಿಯುವ ಹವಣಿಕೆಯಲ್ಲಿದೆ. ಸಿದ್ದರಾಮಯ್ಯ ಸರಕಾರ ಯಾವುದೇ 'ಭಾಗ್ಯ' ನೀಡಿದರೂ ಪ್ರಯೋಜನವಾಗದು. ಸಾಮಾನ್ಯ ಕಾರ್ಯಕರ್ತರನ್ನು ಜಾಗೃತಗೊಳಿಸದೆ. ಭಾಜಪದ ಮಾತೃಸಂಸ್ಥೆ ಆರೆಸ್ಸೆಸ್ ಈಗಾಗಲೇ ಹಿಂದುತ್ವವಾದಿ ಸಂಘಟನೆಗಳು ಮತ್ತು ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ಮೂಲಕ ದಾಂಧಲೆ ಪ್ರಾರಂಭಿಸಿದೆ. ಉತ್ತರ ಪ್ರದೇಶದ ಚುನಾವಣಾ ಫಲಿತಾಂಶ ಮೂರು ದಶಕಗಳಿಂದ ನೆನೆಗುದಿಗೆ ಬಿದ್ದಿರುವ ರಾಮಮಂದಿರ ನಿರ್ಮಾಣದ ಪ್ರಶ್ನೆಯನ್ನು ಮುಂದೊಡ್ಡೀತು. ಒಟ್ಟಿನಲ್ಲಿ ದೇಶದಲ್ಲಿ ಸರ್ವಾಧಿಕಾರ ಪಡೆದುಕೊಳ್ಳುತ್ತಿರುವ ಮೋದಿ–ಅಮಿತ್‌ಷಾ ಜೋಡಿ ಫಾಸಿಸ್ಟ್ ಹಾದಿ ತುಳಿಯದಂತೆ ಮಾಡಲು ದೇಶದ ಪ್ರಜಾಪ್ರಭುತ್ವ ಶಕ್ತಿಗಳು ಒಂದುಗೂಡುವ ಕಾಲ ಸನ್ನಿಹಿತವಾಗಿದೆ.

---

*(ಈ ತಿಂಗಳು ೩ನೇ ಪುಟದಿಂದ)*

ಹಾಗೂ ದೆಹಲಿ ವಿಶ್ವವಿದ್ಯಾನಿಲಯದ ಕ್ಯಾಂಪಸ್‌ನ ಘಟನೆಗಳು ಅದಕ್ಕೆ ಸಾಕ್ಷಿ. ನಮ್ಮ ರಾಜ್ಯದ, ಮುಖ್ಯವಾಗಿ ಬೆಂಗಳೂರು, ಮೈಸೂರಿನ ವಿದ್ಯಾರ್ಥಿಗಳು ಈ ಘಟನೆಗಳ ಬಗ್ಗೆ ಏನೂ ಪ್ರತಿಕ್ರಿಯೆ, ಪ್ರತಿಭಟನೆ ತೋರದಿರುವುದು ನಿಜಕ್ಕೂ ಆಶ್ಚರ್ಯಕರ, ಶೋಚನೀಯ. ತುಮಕೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಮೇಲೆ ಎಬಿವಿಪಿ ನಡೆಸಿದ ಹಲ್ಲೆ ಕೂಡ ಯಾವ ಪ್ರಚಾರವೂ ಇಲ್ಲದೆ ತಣ್ಣಗಾಯಿತು.

ಇಷ್ಟೆಲ್ಲ ಹೇಳುತ್ತಿರುವುದಕ್ಕೆ ಕಾರಣ ಈಚೆಗೆ ಕಾನೂನನ್ನು ಕೈಗೆತ್ತಿಕೊಂಡು ಆರೋಪಿಗಳನ್ನು ಚೆನ್ನಾಗಿ ಥಳಿಸುವ ಪ್ರವೃತ್ತಿ ಸಾರ್ವಜನಿಕರಲ್ಲಿ ಹೆಚ್ಚಾಗುತ್ತಿದೆ. ಇದು ನಾನಾ ಬಗೆಯಲ್ಲಿ ವ್ಯಕ್ತವಾಗುತ್ತಿದೆ. ವೈದ್ಯರು ಅಲಕ್ಷ್ಯ ತೋರಿದರು ಎಂದು ದಾಂಧಲೆ, ಅತ್ಯಾಚಾರಿಗಳ ಮೇಲೆ ಹಲ್ಲೆ ಮುಂತಾದವು ದಿನೇ ದಿನೇ ಹೆಚ್ಚಾಗುತ್ತಿದೆ. ಇದು ಪೊಲೀಸರ ನಿಷ್ಕ್ರಿಯೆಯೆ? ನ್ಯಾಯಾಲಯಗಳ ವೈಫಲ್ಯವೇ? ಪರಿಣತರು ವಿವೇಚಿಸಬೇಕಾದ ಸಂಗತಿ ಇದು. ಇಂಥ ಘಟನೆಗಳಿಗೆ ಅನೇಕ ಉದಾಹರಣೆಗಳನ್ನು ಕೊಡಬಹುದು. ಸರಕಾರ ಎಚ್ಚೆತ್ತುಗೊಂಡು ಇಂಥ ಪ್ರಕರಣಗಳನ್ನು ತಡೆಯಲು ಕ್ರಮ ವಹಿಸಬೇಕು.

✶ ✶ ✶

ಈಗ ಎಲ್ಲ ವ್ಯವಹಾರಗಳೂ ಕೂಡ ಸಾವಿರಾರು ಕೋಟಿ ರೂ.ಗಳಲ್ಲಿಯೇ. ಕೋಟಿ ಎನ್ನುವುದಕ್ಕೆ ಬೆಲೆಯೇ ಇಲ್ಲವಾಗಿದೆ. ರಾಜ್ಯದ ಮುಖ್ಯಮಂತ್ರಿ ಸಿದ್ದರಾಮಯ್ಯ ತಮ್ಮ ಆಡಳಿತದ ಕೊನೆಯ ಬಜೆಟ್ಟಿನ ಅಂಕಿ–ಅಂಶಗಳನ್ನು ಪರಾಮರ್ಶಿಸಿದರೆ ಅದು ಸ್ಪಷ್ಟವಾಗಿದೆ. ರಾಜ್ಯದ ತೆರಿಗೆ ಆದಾಯವೇ ಹೆಚ್ಚು ಕಡಿಮೆ ೬೦ ಸಾವಿರ ಕೋಟಿ ರೂ.ಗಳು. ಮುಂದೆ ಇದು ಇನ್ನೂ ಹೆಚ್ಚಾಗುತ್ತಾ ಹೋಗುತ್ತದೆ. ವರಮಾನವನ್ನೆಲ್ಲ ಮುಖ್ಯಮಂತ್ರಿಗಳು ಹಂಚಿ ಹಾಕಿಬಿಟ್ಟಿದ್ದಾರೆ. ೨೦೧೮ರಲ್ಲಿ ಚುನಾವಣೆ ಎದುರಿಸಬೇಕಾಗಿರುವ ಹಿನ್ನೆಲೆಯಲ್ಲಿ ಕಾಂಗ್ರೆಸ್ ಸರಕಾರ ಹಲವು ಜನಪ್ರಿಯ ಕಾರ್ಯಕ್ರಮಗಳನ್ನು ಘೋಷಿಸಿದೆ. ನೆರೆಯ ಚೆನ್ನೈ ಮಾದರಿ 'ಅಮ್ಮ ಕ್ಯಾಂಟೀನ್' ಅನುಸರಿಸಿ 'ನಮ್ಮ ಕ್ಯಾಂಟೀನ್' ಸ್ಥಾಪಿಸಲು ಹೊರಟಿದೆ. ಹೊಸ ಚಿಂತನೆ ಸಾಧ್ಯವಾಗದಾಗ ಅನುಕರಣೆಯೇ ಸೂಕ್ತ ಎಂದು ತೋರುತ್ತದೆ ಸರಕಾರಕ್ಕೆ. ಇನ್ನು ಮೇಲೆ ರೂ. ೫ಕ್ಕೆ ಬೆಳಗಿನ ಉಪಾಹಾರ, ೧೦ ರೂ.ಗೆ ಊಟ, ಯಾರು ಬೇಕಾದರೂ ಸವಿಯಿರಿ ಸಿದ್ದರಾಮಯ್ಯ ಕೃಪಾಪೋಷಿತ ಹೋಟೆಲಿನಲ್ಲಿ. ಹಾಗೆಯೇ ವಿವಿಧ ಇಲಾಖೆಗಳಿಗೂ ಉದಾರವಾಗಿ ಕೋಟಿಗಟ್ಟಳೆ ಹಣ ಮೀಸಲಾಗಿರಿಸಿದ್ದಾರೆ. ಇದರಲ್ಲಿ ಎಷ್ಟು ವಿನಿಯೋಗವಾಗುತ್ತದೋ ಯಾರಿಗೂ ಗೊತ್ತಾಗುವುದಿಲ್ಲ ಈಗಲೆ. ಆ ಭಾಗ್ಯ, ಈ ಭಾಗ್ಯ ಯೋಜನೆಗಳನ್ನು ಘೋಷಿಸುವುದರಲ್ಲಿ ಸಿದ್ದರಾಮಯ್ಯ ನಿಸ್ಸೀಮರಾಗಿದ್ದಾರೆ. ಉಪಚುನಾವಣೆ, ಮುಂಬರುವ ಮಹಾ ಚುನಾವಣೆ ಮುಂದಿರಿಸಿಕೊಂಡು ಮಂಡಿಸಿರುವ ಬಜೆಟ್‌ನಲ್ಲಿ ಹೊಸ ತೆರಿಗೆಯ ಹೊರೆ ಏನೂ ಇಲ್ಲದಿರುವುದೀಗ ಅಚ್ಚರಿಯ ಸಂಗತಿ ಏನಲ್ಲ. ಹೊಸದಾಗಿ ತಾಲ್ಲೂಕುಗಳ ನಿರ್ಮಾಣದಿಂದ ಹೊರೆ ಹೆಚ್ಚಾಗುವುದಿಲ್ಲವೆ? ಬಜೆಟ್‌ನಲ್ಲಿ ಕೊಡುಗೆಗಳ ಆಶ್ವಾಸನೆ ಧಾರಾಳವಾಗಿದ್ದಾಗ್ಯೂ, ಉದ್ಯೋಗಸೃಷ್ಟಿಯ ಕುರಿತು ಸೊಲ್ಲೆತ್ತಿಲ್ಲ. ಉದ್ಯೋಗದ ಭರವಸೆ ಇಲ್ಲದೆ ಯಾವ ಭಾಗ್ಯ ಯೋಜನೆಯೂ ಹೆಚ್ಚು ದಿನ ಬಾಳದು.

✶ ✶ ✶

ಉತ್ತರ ಪ್ರದೇಶದ ಚುನಾವಣಾ ಫಲಿತಾಂಶದ ಪ್ರಕಟಣೆಯ ನಂತರ ಕೇಂದ್ರ ಸಚಿವ ವೆಂಕಯ್ಯ ನಾಯ್ಡು ಒಂದು ಲೇಖನದಲ್ಲಿ ಹೇಳಿದ್ದಿದು : "ಈವರೆಗೆ ನಮ್ಮ ಪಕ್ಷ ರಾಷ್ಟ್ರೀಯತೆಯ ಪಕ್ಷವಾಗಿತ್ತು, ಈಗ ರಾಷ್ಟ್ರದ ಪಕ್ಷವೂ ಆಯಿತು." ಎರಡು ಮಾತುಗಳೂ ಅಬದ್ಧವೇ ಸರಿ. ಚುನಾವಣಾ ಆಯೋಗವು ಪಕ್ಷಗಳಿಗೆ ರಾಷ್ಟ್ರವ್ಯಾಪ್ತಿಗೆ ಅನುಗುಣವಾಗಿ 'ರಾಷ್ಟ್ರದ ಪಕ್ಷಗಳು' ಎಂಬ ಹೆಸರು ನೀಡುತ್ತದೆ. ರಾಷ್ಟ್ರದ ಎಷ್ಟು ರಾಜ್ಯಗಳಲ್ಲಿ ಪಕ್ಷ ಸಕ್ರಿಯವಾಗಿದೆ, ಎಷ್ಟು ರಾಜ್ಯಗಳಲ್ಲಿ ಎಷ್ಟು ಶೇಕಡ ಪ್ರಮಾಣ ಮತಗಳನ್ನು ಗಳಿಸಿತು, ಮುಂತಾದುವನ್ನು ಗಣನೆಗೆ ತೆಗೆದುಕೊಂಡು 'ರಾಷ್ಟ್ರ ಪಕ್ಷ' ಎಂಬ ಮನ್ನಣೆ ನೀಡಲಾಗುತ್ತದೆ. ವೆಂಕಯ್ಯನವರ ಪಕ್ಷಕ್ಕೆ ಈ ನಾಮಧೇಯ ಹಲವು ವರ್ಷಗಳಿಂದ ಇದೆ. ಉತ್ತರ ಪ್ರದೇಶದ ಚುನಾವಣಾ ಫಲಿತಾಂಶವು ಹೊಸದಾಗಿ ಆ ಪಕ್ಷಕ್ಕೆ ಮನ್ನಣೆ ಕೊಡಿಸಲಿಲ್ಲ. ವೆಂಕಯ್ಯನವರ ಎರಡನೆಯ ಮಾತು "ಮೊದಲಿಗೆ ತಮ್ಮ ಪಕ್ಷ ರಾಷ್ಟ್ರೀಯತೆಯ ಪಕ್ಷವಾಗಿತ್ತು" ಎಂಬುದು. ರಾಷ್ಟ್ರೀಯತೆಯ ಪಕ್ಷ ಎಂದರೇನು? ರಾಷ್ಟ್ರೀಯತೆಗೆ ವಿರುದ್ಧ ನೆಲೆಯಲ್ಲಿ ನಿಲ್ಲುವ ರಾಜಕೀಯ ಪಕ್ಷಗಳು ನಮ್ಮಲ್ಲಿವೆಯೆ? ಹಾಗೇನಾದರೂ ಇದ್ದರೆ ಅವಕ್ಕೆ ಅಧಿಕೃತವಾದ ರಾಜಕೀಯ ಮಾನ್ಯತೆ ಉಂಟೆ? (ಅ) ಒಂದು ಪಕ್ಷವು ರಾಷ್ಟ್ರೀಯತೆಗೆ ಬದ್ಧವಾಗಬೇಕಾದರೆ ಸುಮ್ಮನೆ ಹುರಿದುಂಬಿಸುವ ಇಲ್ಲವೆ ಹಾದಿ ತಪ್ಪಿಸುವ ಘೋಷಣೆ ಕೊಡುತ್ತಿದ್ದರೆ ಸಾಲದು. ಜನತೆಯನ್ನು ಹೇಗೆ ನಡೆಸಿಕೊಳ್ಳಲಾಗುತ್ತಿದೆಯೆಂಬುದು ಬಹುಮುಖ್ಯ ಪ್ರಶ್ನೆ. ಅನ್ಯಾಕ್ರಮಣಶೀಲತೆ ಮತ್ತು ಅಬ್ಬರದ ದೇಶಾಭಿಮಾನಿ ಕೂಗಾಟಗಳು ನೈಜ ರಾಷ್ಟ್ರೀಯತೆಯ ಲಕ್ಷಣಗಳಲ್ಲ. "ಪಾಕಿಸ್ತಾನಕ್ಕೆ ಹೋಗಿ, ಇಲ್ಲವೆ ಸ್ಮಶಾನಕ್ಕೆ ಸಾಗಿಹೋಗಿ" ಎಂದು ದೇಶದ ಯಾವುದೇ ಜನವಿಭಾಗಕ್ಕೆ ಹೇಳಿದರೂ ಅದು ದೇಶದ ಜನತೆಯ ವಿರುದ್ಧದ ನಿಲುವು. ಚುನಾವಣಾ ಪ್ರಚಾರದಲ್ಲಿ ಪ್ರಧಾನಿ ಮೋದಿ ಆ ಮಾತನ್ನು ಉಚ್ಚರಿಸಿದ್ದರು. ಅದು ರಾಷ್ಟ್ರೀಯತೆಗೆ ಮಸಿ ಬಳಿಯುವ ಕೆಲಸ. ಈ ಅರ್ಥದಲ್ಲಿ ವೆಂಕಯ್ಯನವರ ಪಕ್ಷವು ರಾಷ್ಟ್ರೀಯತೆಯನ್ನು ಎತ್ತಿಹಿಡಿಯುವ ಪಕ್ಷವಲ್ಲ. ಹಳ್ಳಿಗಳ ಜನರು ನಗದು ವಹಿವಾಟು ಕಡಿಮೆಗೊಳಿಸಿ ಮೊಬೈಲ್ ಮೂಲಕ ವ್ಯವಹಾರ ನಡೆಸಬೇಕೆಂದು ಸೂಚಿಸುವ ಪ್ರಧಾನಿ ವಿದೇಶಿ ಕಂಪನಿಗಳಿಗೆ ನಮ್ಮ ಜನರಿಂದ ಸುಂಕ ಕೊಡಿಸ ಹೊರಟಿದೆ. ನಮ್ಮದೇ ಒಂದು ಕಂಪನಿಗೆ ಆ ವ್ಯವಹಾರದ ಜವಾಬ್ದಾರಿ ಸಹ ಅವರು ನೀಡಲು ತಯಾರಿಲ್ಲ. ರಾಷ್ಟ್ರೀಯ ಸ್ವಾವಲಂಬನೆಯನ್ನು ಪೋಷಿಸದಿರುವುದು ರಾಷ್ಟ್ರೀಯತೆ ಆಗುವುದಿಲ್ಲ. ದಿನ ಬೆಳಗಾದರೆ ಪ್ರಧಾನಿ

ವಿದೇಶಿ ಬಂಡವಾಳ ಹೂಡಿಕೆಯ ಮಾತಾಡುತ್ತಾರೆ, ಸ್ವಂತದ ಉದ್ಯಮಗಳನ್ನು ಹಾಳುಗೆಡಹುವಂತಹ ನೀತಿ ಅನುಸರಿಸುತ್ತಾರೆ. ಅದು ರಾಷ್ಟ್ರೀಯತೆಯನ್ನು ಧಿಕ್ಕರಿಸುವ ನಿಲುವು. ಸಂಸ್ಕೃತಿಯ ರಕ್ಷಕರೆಂಬ ಸೋಗಿನಲ್ಲಿ ವೆಂಕಯ್ಯನವರ ಪಕ್ಷದ ಕಾರ್ಯಕರ್ತರು ಸಾಮಾನ್ಯ ಜನರನ್ನು ಬಡಿಯುತ್ತಾರೆ; ಅದು ಗೂಂಡಾಗಿರಿಯೇ ವಿನಾ ರಾಷ್ಟ್ರೀಯತೆಯಲ್ಲ. ಮಂಗಳೂರಿನಲ್ಲಿ ಆಗಾಗ್ಗೆ ಕಾಣಬರುವ ಹೀನ ನಡತೆಯು ರಾಷ್ಟ್ರೀಯತೆಗೆ ಮಾರಕವಾದ್ದು. ಆದ್ದರಿಂದ ಮಾನ್ಯ ವೆಂಕಯ್ಯ ನಾಯ್ಡು ಅವರ ಎರಡು ಮಾತುಗಳೂ ಶುದ್ಧ ಸುಳ್ಳೇ ಆಗಿವೆ.

ನಮ್ಮ ರಾಜ್ಯದ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯನ್ನು ಮಾರಾಟಕ್ಕೆ ಇಡಲಾಗಿದೆ. ಅದೂ ವೆಂಕಯ್ಯನವರ ರಾಷ್ಟ್ರೀಯತೆಯ ಒಂದು ಭಾಗ ! ಜನತೆಯ ಸಂಪತ್ತನ್ನು ಬೇಕಾಬಿಟ್ಟಿ ಖಾಸಗಿ ಲೂಟಿಗೆ ಗುರಿಯಾಗಿಸುವ ರಾಷ್ಟ್ರೀಯತೆ ನಮಗೆ ಬೇಡ. ಅದು ದೇಶವಿರೋಧಿ ಮತ್ತು ಜನವಿರೋಧಿ ನಡೆ. ಸನ್ಮಾನ್ಯ ಎಂ. ವಿಶ್ವೇಶ್ವರಯ್ಯನವರ ಹೆಸರಿನ ಕಾರ್ಖಾನೆಯನ್ನು ಮಾರುವ ಅಧೋಗತಿಗೆ ನಾವಿಳಿದಿರುವುದು ನಾಚಿಕೆಯ ಮತ್ತು ಖಂಡನೀಯ ವಿಷಯ. ೧೮೫೦–೬೦ರ ಸುಮಾರಿನಲ್ಲಿ ಇಂಗ್ಲಿಷಿನಲ್ಲಿ ಅವರ ಕನ್ನಡ ಹೆಸರನ್ನು 'ವಿಶ್ವೇಶ್ವರಾಯ' ಎಂದು ಇಂಗ್ಲಿಷ್‌ನವರು ಬರೆಯುತ್ತಿದ್ದರು. ಭದ್ರಾವತಿ ಕಾರ್ಖಾನೆಗೆ 'ವಿಶ್ವೇಶ್ವರಾಯ' ಕಾರ್ಖಾನೆ ಎಂಬ ಹೆಸರಿಟ್ಟಿದ್ದಾರೆ ! 'ವಿಶ್ವೇಶ್ವರಾಯ' ಎಂಬುದು ಎಂತಹ ಹೆಸರು, ಯಾವ ಕನ್ನಡದ ಪದ ಎಂಬ ಯೋಚನೆಯೂ ಇಲ್ಲ. ಮೊದಲಿಗೆ ಕೆಮ್ಮಣ್ಣುಗುಂಡಿಯಿಂದ ಕಬ್ಬಿಣದ ಅದಿರನ್ನು ಭದ್ರಾವತಿಗೆ ಸಾಗಿಸುತ್ತಿದ್ದರು. ಅಲ್ಲಿ ಈಗ ಅದುರಿಲ್ಲ, ಆದರೆ ಹೊಸಪೇಟೆಯ ಸುತ್ತಮುತ್ತಲ ಬೆಟ್ಟಗಳನ್ನು ಚೀನಾಕ್ಕೆ ಸ್ಥಳಾಂತರಿಸಿದ ನಮ್ಮ ದೇಶ ಭದ್ರಾವತಿಗೆ ಅದಿರು ಕೊಡಲು ಅಸಮರ್ಥವಾಗಿತ್ತೆ ? ಕಾರ್ಖಾನೆಯನ್ನು ಹಾಳುಮಾಡಿ ಅದನ್ನು ಮುಚ್ಚಬೇಕು, ಅದನ್ನು ಅಗ್ಗದಲ್ಲಿ ಖಾಸಗಿಯ ಅದಾನಿಗೋ ಅಂಬಾನಿಗೋ ಮಾರಬೇಕು. ಇದು ವೆಂಕಯ್ಯನವರ ರಾಷ್ಟ್ರೀಯತೆ. ಮಾಧ್ಯಮಗಳಲ್ಲಿ ಕಾಗೆ–ಗೂಬೆ ಚರ್ಚೆಗಳು ನಡೆಯುತ್ತವೆ, ಆದರೆ ಸಹಸ್ರಾರು ಕೋಟಿ ಬೆಲೆಯ ಸಂಪತ್ತು ದೋಚಲಾಗುತ್ತಿರುವ ವಿಷಯ ಚರ್ಚೆಗೆ ಬರುವುದಿಲ್ಲ. ಹೀಗಿದೆ ನಮ್ಮ ರಾಷ್ಟ್ರದ ಮತ್ತು ರಾಷ್ಟ್ರೀಯತೆಯ ಬಾಳು !

* * *

ರಾಷ್ಟ್ರೀಯ ಮಹಿಳಾ ಆಯೋಗದ ಸದಸ್ಯೆ ರೇಖಾ ಶರ್ಮ ಅವರ ಅಣಿಮುತ್ತುಗಳು ಈಗಾಗಲೇ ಚರ್ಚೆಗೆ ಬಂದಿವೆ. ಅವರದ್ದು ಇನ್ನೊಂದು ರೀತಿಯ ರಾಷ್ಟ್ರೀಯತೆ ! ಕನ್ನಡವನ್ನು ಗುಂಡಿಯಲ್ಲಿ ಮುಚ್ಚಿ ಹಿಂದಿಗೆ ಬಣ್ಣ ಹಚ್ಚುವ ನೀತಿ ಆಕೆಯದು. ಕರ್ನಾಟಕದ ಪೊಲೀಸರು ಹಿಂದಿ ಕಲಿತು ನಮ್ಮ ರಾಜ್ಯದಲ್ಲಿರುವ ಅನ್ಯಭಾಷಿಕರಿಗೆ ರಕ್ಷಣೆ ನೀಡಲು ಆ ಭಾಷೆಯಲ್ಲಿ ವಿಚಾರಣೆ ನಡೆಸಿ ಸಹಾಯ ನೀಡಬೇಕೆಂದು ರೇಖಾ ಶರ್ಮ ಹೇಳಿದ್ದಾರೆ. ರಾಷ್ಟ್ರೀಯ ಮಹಿಳಾ ಆಯೋಗದ ಸದಸ್ಯತ್ವದಿಂದ ಅವರನ್ನು ಕಿತ್ತುಹಾಕಲು ಇದೊಂದು ಕಾರಣವೇ ಸಾಕು. ಅನ್ಯಭಾಷಿಕರು ನಮ್ಮ ರಾಜ್ಯದ ಭಾಷೆ ಕಲಿಯಬೇಕೆಂದು ಹೇಳಲು ಶ್ರೀಮತಿ ರೇಖಾ ಅವರಿಗೆ ತೋಚಲಿಲ್ಲ. ಅಂತಹ ಕಟ್ಟಾ ರಾಷ್ಟ್ರೀಯತೆ ಅವರದು. ಸಾಮಾನ್ಯವಾಗಿ ಇಲಿ–ಹುಲಿ ಎಂದೆಲ್ಲಾ ಹೇಳಿಕೆ ನೀಡುವ ನಮ್ಮ ಖ್ಯಾತ ಸಂಶೋಧಕರು ಶ್ರೀಮತಿ ಶರ್ಮಾ ಅವರ ಹೇಳಿಕೆಗೆ ಪ್ರತಿಕ್ರಿಯಿಸಲಿಲ್ಲ. ಕಾರಣದ ಸಂಶೋಧನೆ ಅನಗತ್ಯ. ಮಾನ್ಯ ಮೋದಿಯವರ ಪಕ್ಷದ ಬಗೆಗಿನ ಅವರ ಒಲವು ಕನ್ನಡವನ್ನು ಕದದ ಹಿಂದಕ್ಕೆ ನೂಕಿದೆ.

ಈ ಸಂದರ್ಭದಲ್ಲಿ ಇನ್ನೊಂದು ವಿಚಾರ ನೆನಪಿಸಿಕೊಳ್ಳೋಣ: ಸಂಸ್ಕೃತ ವಿಶ್ವವಿದ್ಯಾನಿಲಯವನ್ನು ನಮ್ಮ ರಾಜ್ಯದಲ್ಲಿ ಸ್ಥಾಪಿಸಬೇಕೆಂದು ಆಗ್ರಹಿಸುವ ಸಂದರ್ಭದಲ್ಲಿ ನಮ್ಮ ಸಂಶೋಧಕರೂ ಸೇರಿದಂತೆ ಹಲವು ಖ್ಯಾತ ಸಾಹಿತಿಗಳು ಮುಂತಾದವರು ಒಂದು ತಿಂಗಳ ಕಾಲ 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಲೇಖನಗಳನ್ನು ಬರೆದರು. ಸಂಸ್ಕೃತ ವಿಶ್ವವಿದ್ಯಾನಿಲಯದ ಸ್ಥಾಪನೆಯಾದರೆ ಕನ್ನಡಕ್ಕೆ ಬಹಳ ದೊಡ್ಡ ಪ್ರಯೋಜನಗಳಾಗಲಿವೆ, ಎಂಬುದು ಸಾಮಾನ್ಯವಾಗಿ ಅವರೆಲ್ಲರ ವಾದವಾಗಿತ್ತು. ಸಂಸ್ಕೃತ ವಿ.ವಿ. ಸ್ಥಾಪನೆಯಾಗಿ ಎಷ್ಟೋ ವರ್ಷಗಳು ಉರುಳಿವೆ. ಯಾರಾದರೂ "ಸಂಶೋಧನೆ" ನಡೆಸಿ ಸಂಸ್ಕೃತ ವಿಶ್ವವಿದ್ಯಾನಿಲಯದಿಂದ ಕನ್ನಡಕ್ಕೆ ಎಂತೆಂತಹ ಮಹದುಪಕಾರಗಳಾಗಿವೆ ಎಂಬುದನ್ನು ತಿಳಿಸಿಕೊಟ್ಟರೆ ಉಪಕಾರವಾದೀತು !

* * *

ಬ್ರೆಜಿಲ್‌ನಲ್ಲಿ ಊಲಾ ಮತ್ತು ರೂಸೆಫ್ ಅಧ್ಯಕ್ಷರಾಗಿದ್ದಾಗ ಅವರನ್ನು "ಪ್ರಜಾಪ್ರಭುತ್ವ ರೀತ್ಯಾ" (!!) ಕೆಳಗಿಳಿಸಲಾಯಿತು. ಆ ಷಡ್ಯಂತ್ರದ ನಾಯಕರಲ್ಲಿ ಒಬ್ಬರಾದ ಮಿಶೆಲ್ ಟೆಮೆರ್ ಈಗ ಅಧ್ಯಕ್ಷ. ಆತನ ವಯಸ್ಸು ೭೬, ಆತನ ಪತ್ನಿ ಮಾರ್ಸೆಲಾ ವಯಸ್ಸು ೩೩ ಎಂದು ವರದಿಯಾಗಿದೆ. ಅವರಿಬ್ಬರಿಗೂ ರಾಷ್ಟ್ರಪತಿ ಭವನವು ಒಗ್ಗುತ್ತಿಲ್ಲ; ನಿದ್ದೆ ಇಲ್ಲ, ಏನೋ ಭಯ. "ಈ ಭವನದಲ್ಲಿ ದೆವ್ವಗಳಿವೆ" ಎಂದು ಹೇಳಿ ಇಬ್ಬರೂ ಬೇರೆಲ್ಲೋ ವಾಸಿಸುತ್ತಿದ್ದಾರೆ. ದೆವ್ವಗಳು ಸ್ವತಃ ಮಿಶೆಲ್ ಟೆಮೆರ್ ಅಲ್ಲಿರುವಾಗ ತಮಗಿನ್ನೇನು ಕೆಲಸ ಎಂದೋ ಏನೋ ರಾಷ್ಟ್ರಪತಿ ಭವನದಿಂದ ದೂರವೇ ಉಳಿದು ಈ ಕುಖ್ಯಾತ ದಂಪತಿಗಳ ದುರ್ಗತಿಯನ್ನು ಕಂಡು ಗಹಗಹಿಸಿ ನಗುತ್ತಿವೆಯಂತೆ ! ಇದು ಬ್ರೆಜಿಲ್‌ನ ದುಷ್ಟ ರಾಜಕೀಯಕ್ಕೆ ಒಂದು ದೃಷ್ಟಾಂತ, ಅಷ್ಟೆ.

* * *

ಇಂದು ದೇಶದ ಹಲವಾರು ವಿಶ್ವವಿದ್ಯಾನಿಲಯಗಳಲ್ಲಿ ವಿಷಪೂರಿತ ವಾತಾವರಣ ತಾಂಡವವಾಡುತ್ತಿದೆ. ಒಂದೆಡೆ ಪ್ರಧಾನಿ ಮೋದಿಯವರು ಉತ್ತರಪ್ರದೇಶದ ಚುನಾವಣೆಗಳ ಅಂತಿಮ ಘಟ್ಟದ ಸಂದರ್ಭದಲ್ಲಿ ತಮ್ಮ ಎಂದಿನ ಶೈಲಿಯಲ್ಲಿ ತೀವ್ರವಾದಿ ಕೋಮು ಆಧಾರಿತ ಪ್ರಚಾರಕ್ಕೆ ಮೊರೆಹೋದರೆ, ಇನ್ನೊಂದೆಡೆ ಭಾರತೀಯ ಜನತಾ ಪಕ್ಷದ ವಿದ್ಯಾರ್ಥಿ ಘಟಕ ಎಬಿವಿಪಿ ಮಾಡುತ್ತಿರುವುದೇನು? ಪ್ರಜಾಪ್ರಭುತ್ವವಾದಿ ಮತ್ತು ಧರ್ಮ ನಿರಪೇಕ್ಷ ಗುರಿಯನ್ನಿಟ್ಟುಕೊಂಡು ವಿದ್ಯಾರ್ಥಿಗಳನ್ನು ಸಂಘಟಿಸುತ್ತಿರುವ ತನ್ನ ಎದುರಾಳಿ ಸಂಘಟನೆಗಳ ವಿರುದ್ಧ ಆಕ್ರಮಣಕಾರಿ ಚಟುವಟಿಕೆಗಳಲ್ಲಿ ತೊಡಗುತ್ತಿದೆ. ಅದು ಕೊಲೆ ಮತ್ತು ಹಿಂಸಾತ್ಮಕ ಕೃತ್ಯಗಳಲ್ಲೂ ತೊಡಗಲು ಹೇಸುವುದಿಲ್ಲ ಎಂಬ ಅನೇಕ ದೃಷ್ಟಾಂತಗಳು ಈಗಾಗಲೇ ಜನರ ಅನುಭವಕ್ಕೆ ಬಂದಿವೆ. ಎಬಿವಿಪಿ ಅಜೆಂಡಾದಲ್ಲಿ ಇವೆಲ್ಲ ಮಾಮೂಲಿನ ಸಂಗತಿಗಳೇ.

ಇತ್ತೀಚೆಗೆ, ಈ ಪುಂಡರ ಬೆದರಿಕೆಗೆ ಗುರಿಯಾದ ವ್ಯಕ್ತಿ ದೆಹಲಿಯ ಲೇಡಿ ಶ್ರೀರಾಮ್ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯ ಕುರಿತು ವ್ಯಾಸಂಗ ಮಾಡುತ್ತಿರುವ ೨೦ರ ಹರೆಯದ ಓರ್ವ ಮುಗ್ಧ ವಿದ್ಯಾರ್ಥಿನಿ. ಆಕೆ ತನ್ನ ಫೇಸ್‌ಬುಕ್‌ನಲ್ಲಿ 'ನಾನು ದೆಹಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿ. ಎಬಿವಿಪಿ ಬಗ್ಗೆ ಯಾವ ಭಯವೂ ಇಲ್ಲ' ಎಂಬ ಸಂದೇಶವುಳ್ಳ ಭಿತ್ತಿಪತ್ರವೊಂದನ್ನು ಹಿಡಿದು ಪ್ರದರ್ಶಿಸಿದ್ದಳು. ಅಷ್ಟು ಸಾಕಾಯಿತು ಈ ವಿಧ್ವಂಸಕಾರಿ ಎಬಿವಿಪಿ ಕಾರ್ಯಕರ್ತರಿಗೆ. ಆ ವಿದ್ಯಾರ್ಥಿನಿ ಹಾಗೆ ಮಾಡಿದ್ದು ಅವರ ದೃಷ್ಟಿಯಲ್ಲಿ ಅಕ್ಷಮ್ಯ ಅಪರಾಧವಂತೆ. ತನ್ನ ತಂದೆ ಕಾಶ್ಮೀರದ ಗಡಿಯಲ್ಲಿ ಉಗ್ರಗಾಮಿ ಆಕ್ರಮಣಕಾರಿಗಳ ವಿರುದ್ಧ ಜರುಗಿದ ಸಂಘರ್ಷದಲ್ಲಿ ಅಸು ನೀಗಿದ್ದು ಆಕೆಯ ರಕ್ಷಣೆಗೆ ಬರಲೇಇಲ್ಲ. ಆ ವಿದ್ಯಾರ್ಥಿನಿ ತಾನು ಪ್ರದರ್ಶಿಸಿದ್ದ ಭಿತ್ತಿ ಪತ್ರದಲ್ಲಿ ಎಬಿವಿಪಿಯನ್ನೇನೂ ದೂಷಿಸಿರಲಿಲ್ಲ. ಆ ಸಂಘಟನೆಯ ಬಗ್ಗೆ ತನಗೇನೂ ಭಯವಿಲ್ಲ ಎಂದು ಹೇಳಿದ್ದಳಷ್ಟೆ. ಇಂಡಿಯನ್ ಎಕ್ಸಪ್ರೆಸ್ ಪತ್ರಿಕೆ ವರದಿ ಮಾಡಿರುವಂತೆ "ನಿನಗೆ ನಿರ್ಭಯಾಳಿಗೆ (೨೦೧೨ರ ಡಿಸೆಂಬರ್‌ನಲ್ಲಿ ಸಾಮೂಹಿಕ ಅತ್ಯಾಚಾರಕ್ಕೆ ಗುರಿಯಾಗಿದ್ದ ನತದೃಷ್ಟೆ) ಆದ ಗತಿಗಿಂತಲೂ ಉಗ್ರವಾದ ಶಿಕ್ಷೆ ಕಾದಿದೆ. ಎಚ್ಚರ !", "ನೀನು ಈ ಕೂಡಲೇ ಸಾಯಿ" ಎಂಬಂತಹ ಆಘಾತಕಾರಿ ಸಂದೇಶಗಳು ಸಾಮಾಜಿಕ ಜಾಲತಾಣಗಳಲ್ಲಿ ಹರಿದಾಡುತ್ತಿವೆ.

ಇವು ಸಾಲದೆಂಬಂತೆ, ಗುರ್‌ಮೆಹರ್ ಕೌರ್ ಎಂಬ ವಿದ್ಯಾರ್ಥಿನಿಯೂ ಇಂತಹುದೇ ಬೆದರಿಕೆಗಳಿಗೆ ತುತ್ತಾಗಿದ್ದಾಳೆ. ಇದಕ್ಕೆ ಕಾರಣ ಆಕೆ ಕಳೆದ ವರ್ಷ ಭಾರತ ಮತ್ತು ಪಾಕಿಸ್ತಾನ ಯಾಕೆ ಪರಸ್ಪರ ಸ್ನೇಹ ಸಂಬಂಧಗಳನ್ನಿಟ್ಟುಕೊಳ್ಳಬಾರದು ಎಂಬ ಸದಾಶಯವನ್ನು ವ್ಯಕ್ತಪಡಿಸಿದ್ದರು, ಅಷ್ಟೆ. ದಾವುದ್ ಇಬ್ರಾಹಿಂ ಸಹ ತನ್ನ ರಾಷ್ಟ್ರ ವಿರೋಧಿ ನಿಲುವನ್ನು ಸಮರ್ಥಿಸಿಕೊಳ್ಳಲು ತನ್ನ ತಂದೆಯ ಹೆಸರನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ಆದರೆ ಈಕೆ ಎಂಥವಳು !" ಎಂಬ ಉದ್ಧಟತನದ ಟೀಕೆಗಳನ್ನು ಹರಿಬಿಡಲು ಬಿಜೆಪಿಯ ಸಂಸತ್ ಸದಸ್ಯ ಪ್ರತಾಪ್ ಸಿಂಹ ಎಂಬ ವ್ಯಕ್ತಿಗೆ ಯಾವ ಹಿಂಜರಿಕೆಯೂ ಇಲ್ಲ. ಕೇಂದ್ರ ಸರ್ಕಾರದ ರಾಜ್ಯ ಗೃಹಮಂತ್ರಿ, "ಈ ವಿದ್ಯಾರ್ಥಿಯ ಮನಸ್ಸನ್ನು ಯಾರೋ ಹಾಳುಗೆಡುವುತ್ತಿದ್ದಾರೆ," ಎಂದು ಟ್ವೀಟ್ ಮಾಡಿದ್ದಾರೆ. ಇಂತಹ ಸಣ್ಣಪುಟ್ಟ ಪುಢಾರಿಗಳೇ ಹೀಗೆ ಬಡಬಡಿಸುತ್ತಿರುವಾಗ, ಕೇಂದ್ರ ಸರ್ಕಾರದ ಕುಖ್ಯಾತ ಬಾಯಿಬಡುಕ ಸಚಿವ ವೆಂಕಯ್ಯ ನಾಯ್ಡು ಹಿಂದೆ ಬೀಳುವುದುಂಟೇ ! ದೇಶದಲ್ಲಿಂದು ಯುವ ಮನಸುಗಳನ್ನು ಕಲುಷಿತಗೊಳಿಸಲು ದೊಡ್ಡ ಸಂಚು ಹೂಡಲಾಗುತ್ತಿದೆ ಎಂಬ ಸಂದೇಹವನ್ನು ವ್ಯಕ್ತಪಡಿಸಿದ್ದಾರೆ ನಾಯ್ಡು.

ಈ ಆಗುಹೋಗುಗಳೆಲ್ಲವೂ ಜೆಎನ್‌ಯು ಮತ್ತು ಕೇಂದ್ರೀಯ ವಿಶ್ವವಿದ್ಯಾನಿಲಯಗಳಲ್ಲಿ ಜರುಗಿದ ದುರ್ಘಟನೆಗಳ ಮುಂದುವರಿಯುತ್ತಿರುವ ಭಾಗವಷ್ಟೆ.






✉ ಹದಿನೆಂಟನೆ ಶತಮಾನದ ಮಹಾರಾಷ್ಟ್ರದ ಪುಣೆ ಎಂಬಲ್ಲಿನ ಮಾಹಿತಿಯೊಂದರ ಅರಿವಿಗಾಗಿ ಕನ್ನಡಿ ಹಿಡಿದಂತೆ ಕಾಣಿಸಿಕೊಂಡ 'ಹೊಸತು' ವಿವರಗಳಿಗಾಗಿ ಆಸಕ್ತಿಯ ಅಲೆ ಎಬ್ಬಿಸಿದೆ ಎಂದರೆ ತಪ್ಪಾಗಲಾರದು. ಜಾತಿ ನೀತಿಗಳ ಕರ್ಮಕಾಂಡವನ್ನು ತೆರೆದಿಟ್ಟ ಈ ಲೇಖನ ಬರೆದವರು ಡಾ॥ ಎನ್. ಗಾಯತ್ರಿ ಅವರು. ಪತ್ರಿಕೆಯ ಮುಖಾವರಣದಲ್ಲಿ ರಾರಾಜಿಸಿದ ಸಾವಿತ್ರಿಬಾಯಿ ಫುಲೆ ಎಂಬುವರ ಅಚ್ಚರಿಯ ನಂದಾದೀಪವೊಂದನ್ನು ಬೆಳಗಿಸಿ ಕ್ರಾಂತಿಯ ಕಹಳೆ ಊದಿಸಿಕೊಂಡವರು. ಹೆತ್ತಮ್ಮ ಅಪ್ಪರಿಗೆ ಬೇಡವಾಗಿ ಫುಲೆ ಅವರ ಎಲ್ಲಾ ಆಶಯಗಳನ್ನು ನೆರವೇರಿಸಿಕೊಡುವ ಭರವಸೆಯಿತ್ತು ಕೈ ಹಿಡಿದು ಮದುಮಗ ಅನ್ನಿಸುವ ಮೊದಲೆ ವರನ ಅಪ್ಪ ಅಮ್ಮದಿರ ತುಚ್ಛೀಕಾರಕ್ಕೆ ಬಲಿಯಾದವರು. ಅಂದರೆ ಆ ಕಾಲದಲ್ಲಿ ಜಾತೀಯ ವಿಷಜ್ವಾಲೆ ಈ ರೀತಿಯಿದೆಯೆಂಬುದನ್ನು ಇದು ದಾಖಲೆಪಡಿಸುತ್ತದೆ. ಕೇವಲ ಒಂಭತ್ತು ವರುಷ ಪ್ರಾಯದ ಈ ಕುಮಾರಿ ಭರವಸೆ ನೀಡಿ ಮದುವೆಯೂ ಆಗಿ ಸಮಾಜದಿಂದ ಹೊರಗೆ ಬಂದ ಈ ರೋಚಕ ಕಥೆಯನ್ನು ಡಾ॥ ಗಾಯತ್ರಿಯವರು ಸಚಿತ್ರವಾಗಿ ಓದುಗರಿಗೆ ಉಣಬಡಿಸಿದ್ದಾರೆ.

ಪ್ರಧಾನಿ ನರೇಂದ್ರ ಮೋದಿಯವರಿಗೆ ಒಂದು ಬಹಿರಂಗ ಪತ್ರ ಎನ್ನುವ ಶೀರ್ಷಿಕೆಯಲ್ಲಿ ಪ್ರಕಟಗೊಂಡ ವಿಚಾರಗಳು ಓದುಗರನ್ನು ಸೆರೆಹಿಡಿದು ಆರ ಅರಿವಿಗೂ ಬಾರದಂತೆ ನೇರವಾಗಿ ರಾತ್ರೋರಾತ್ರಿ ಜಾರಿಗೊಂಡ ನೋಟು ರದ್ದತಿಯ ನಂತರದ ಸತ್ಯಗಳನ್ನು – ಜನರಿಗೆ ಆಗುವ ತೊಂದರೆಗಳನ್ನು ಒಂದೊಂದಾಗಿ ಬಿಚ್ಚಿ ತೋರಿಸಿ ಅಣಕಿಸುತ್ತಿವೆ. ಈ ಲೇಖನವನ್ನು ಯತಿನ್ ಓಝ ಎನ್ನುವವರು ಬರೆದಿದ್ದು ಎಸ್. ಸುರೇಂದ್ರ ಕನ್ನಡಕ್ಕೆ ಭಾಷಾಂತರಿಸಿ ಮಹದುಪಕಾರ ಮಾಡಿದ್ದಾರೆ. ನಗದು ರಹಿತ ಸಮಾಜ ಸಾಧ್ಯವೆ ಎಂದು ಪ್ರಶ್ನಿಸಿ ಮ. ಶ್ರೀ. ಮುರಳಿಕೃಷ್ಣ ಅವರು ಇದು ಅಕ್ಷರ ರಹಿತ ಜನರ ಸಂಖ್ಯೆ ಹೆಚ್ಚಿರುವ ನಮ್ಮಲ್ಲಿ ಕೂಡಲೆ ಸಾಧ್ಯವಾಗದ ಮಾತು ಎಂಬುದನ್ನು ವಿವರಿಸಿದ್ದಾರೆ.

ಜ್ಯೋತಿ ಎ. ಅವರ ಸುಭದ್ರ ಉದ್ಯೋಗ ಸುರಕ್ಷಿತ ಮಹಿಳೆ ಸಮಾಜದ ಪ್ರಗತಿ ಸೂಚಕಗಳು ಎಂಬ ಆಧಾರಸಹಿತ ವಿವರಿಸಿದ ನಿರೂಪಣೆ ದೈನಂದಿನ ಮಹಿಳಾ ಶೋಷಣೆಯ ವಿಧಾನದೆಡೆಗೆ ಬೆಳಕು ಚೆಲ್ಲುತ್ತದೆ.

ಸ್ಮಿತಾ ಅಮೃತರಾಜ್ ಸಂಪಾಜೆಯವರ 'ಮಳೆ ಎಂದರೆ ಬರೇ ಮಳೆಯಲ್ಲ' ಮಳೆಯೊಂದಿಗೆ ಮಲೆನಾಡಿನಲ್ಲಿ ಕಂಡುಬರುತ್ತಲೇ ಇರುವ ಸತ್ಯ ವಿಚಾರಗಳನ್ನು ನಮ್ಮೆದುರಿಗೆ ನೀಡಿ ಬರಬೇಡಿ ಇಲ್ಲಿಗೆ ಎಂಬ ಸುಳಿವನ್ನು ನೀಡಿದರೆ ಕೊಡಗಿನ ಆದಿವಾಸಿಗಳ ಮೇಲೆ ನಡೆದ ದೌರ್ಜನ್ಯದ ಕತೆ (ಸಿರಿಮನೆ ನಾಗರಾಜ್) ಈ ರೀತಿಯ ಮನೋವೃತ್ತಿಯವರು ಇರುವುದು ಸತ್ಯವೇ ಎಂದು ಕೇಳುವ ಹಾಗೆ ಮೈ ಝುಂ ಅನಿಸುತ್ತದೆ. ಸಂಚಿಕೆಯ ರೂವಾರಿಗಳೆಲ್ಲರಿಗೂ ಅಭಿನಂದನೆಗಳು.

✶ ✶ ✶

✉ 'ಹೊಸತು' ಮುಖಪುಟದಲ್ಲಿ ವಿರಾಜಿಸಿದ ವಿಶ್ವ ಮಹಿಳಾ ದಿನದ ರೂವಾರಿ ಕ್ಲಾರಾ ಜಟ್ಕಿನ್ ಅವರ ಮುಖಚಿತ್ರ ಸಮರ್ಪಕ ಅನ್ನಿಸಿಕೊಂಡಿದೆ.




ಹಾಗೆಯೇ ಡಾ॥ ಪಿ. ಆರ್. ವಿಶ್ವನಾಥ್ ಅವರ ನೊಬೆಲ್ ಪ್ರಶಸ್ತಿ ವಂಚಿತೆ – ವೇರಾ ರುಬಿನ್ ಎನ್ನುವ ಬರಹ ಚಿಂತನೆಯತ್ತ ಮನ ಹೊಂದಿದ್ದರೆ ಹೇಳದೆ ಹೋದ ಭೂಪತಿ ಎನ್ನುವ ನುಡಿ ನಮನ ಕಣ್ಣಿವೆಗಳನ್ನು ತೇವಗೊಳಿಸಿದವು.

*ಕಾಸರಗೋಡು* ***ಕೇರಿಕ್ಕಾಡು ವನಮಾಲಾ ಕೇಶವ ಭಟ್ಟ***

✉ ೨೦೧೭ರ ಮಾರ್ಚ್ ತಿಂಗಳ 'ಹೊಸತು' ಪತ್ರಿಕೆ ಮುಖಪುಟ ವರ್ಣರಂಜಿತ ಭಾವಚಿತ್ರದ ಕ್ಲಾರಾ ಜಟ್ಕಿನ್‌ಳು ಓದುಗರಿಗೆ ಆಕರ್ಷಣೆ ಪತ್ರಿಕೆಯಾಗಿದ್ದು ಶ್ರದ್ಧೆ, ಆಸಕ್ತಿ, ಉತ್ಸಾಹ ಪ್ರೇರಣೆ ನೀಡಿದ್ದಾಳೆ. ಜರ್ಮನಿಯ ಅಪ್ರತಿಮ ಕಮ್ಯುನಿಸ್ಟ್ ನಾಯಕಿ.

ಈ ತಿಂಗಳ ಶೀರ್ಷಿಕೆಯಲ್ಲಿ ನೊಬೆಲ್ ಪ್ರಶಸ್ತಿ ವಂಚಿತೆ ಮಹಿಳೆ ವಿಜ್ಞಾನಿ ವೇರಾ ರುಬಿನ್; ಅಮೆರಿಕ ಅಧ್ಯಕ್ಷ ಟ್ರಂಪ್ ದರ್ಬಾರ್, ದೇಶದೊಳಗೆ ಸ್ವಾತಂತ್ರ್ಯ ಹೇಗಿದೆ ಎಂದು ಕನ್ಹಯ್ಯ ಕುಮಾರನ ಸಂದರ್ಶನ, ನೋಟು ರದ್ದತಿಗೆ ಕಾರಣ, ನಗದು ರದ್ದತಿ ಯೋಜನೆ ಬಗ್ಗೆ, ಗಂಡು ಎಂಬ ದೊರೆಸ್ವಾಮಿ ರೇವತಿಯೆಂಬ ಹೆಣ್ಣಾಗಿ ಬದಲಾವಣೆಯ ಆತ್ಮಕಥೆ ಕೃತಿ ಬಗ್ಗೆ, ಮಹಿಳೆಯರ ರಕ್ಷಣೆಗಾಗಿ ರೆಡ್ ಬ್ರಿಗೇಡ್ ಸದಸ್ಯರ ಸಾಧನೆ, ವೀರಶೈವ–ಲಿಂಗಾಯತ ಎಂಬ ರೂಪಕದ ಗೊಂದಲ ರಂಪಾಟ ಮುಂತಾದ ಲೇಖನ ಲೇಖಕರು ಅರ್ಥಗರ್ಭಿತ ನೈಜಸ್ಥಿತಿ ವರ್ಣಿಸಿ ಓದುಗರ ಅಭಿರುಚಿಗೆ ಚೇತನ ಪ್ರೇರಣೆ ನೀಡಿದ್ದಾರೆ.

*ಚೌಡಾಪುರ* ***ಚೌಡಾಪುರ ಮರಿದೇವರ ಸಿದ್ದಪ್ಪ***

✉ ಮಾನ್ಯರೆ, 'ಹೊಸತು' ೨೦೧೭ರ ಮಾರ್ಚ್ ಸಂಚಿಕೆಯ ಪುಟ ೫೫ರಲ್ಲಿ ಎ. ರೇವತಿ ಅವರ 'A Life in Trans Activism' ಪುಸ್ತಕದ ವಿಮರ್ಶಾ ಲೇಖನದ ಆರಂಭದಲ್ಲಿ ಈ ಕೆಳಗಿನ ವಚನವನ್ನು ಉಲ್ಲೇಖಿಸಲಾಗಿದೆ :

*ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ–ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿವ ಆತ್ಮನು*
*ಗಂಡೂ ಅಲ್ಲ ಹೆಣ್ಣು ಅಲ್ಲ ಕಾಣಾ ರಾಮನಾಥ.*

ಈ ಲೇಖನದ ಲೇಖಕಿಯರು ಈ ವಚನವನ್ನು ಬರೆದವನು ದೇವರ ದಾಸಿಮಯ್ಯ ಎಂದು ಬರೆದಿದ್ದಾರೆ. ಇದು ತಪ್ಪು.

ದೇವರ ದಾಸಿಮಯ್ಯನು ೧೧ನೇ ಶತಮಾನದಲ್ಲಿದ್ದ ಶೈವಗುರು. ಬಹುಶಃ ಸಂನ್ಯಾಸಿ. ಇವನು ವಚನಕಾರನಲ್ಲ.

ಈ ಸದರಿ ವಚನವನ್ನು ಬರೆದವನು ಮುದ್ನೂರಿನ ಜೇಡರ ದಾಸಿಮಯ್ಯ. ಇವನ ಕಾಲ ೧೨ನೇ ಶತಮಾನ; ಅನುಮಾನವಿಲ್ಲ. ಆರಂಭದಲ್ಲಿ (ಅಂದರೆ ೧೯೬೦ರ ದಶಕದಲ್ಲಿ) ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಒಬ್ಬನೇ ಎಂಬ ಭಾವನೆ ಇತ್ತು. ಆದರೆ, ೧೯೭೪ರಲ್ಲಿ ಪ್ರೊ॥ ಆರ್. ರಾಚಪ್ಪ ಮತ್ತು ಎಚ್. ದೇವೀರಪ್ಪನವರು ದೇವರ ದಾಸಿಮಯ್ಯ ವಚನಕಾರನಲ್ಲ; ಜೇಡರ ದಾಸಿಮಯ್ಯನೇ ವಚನಕಾರನೆಂದು ಸಿದ್ಧಪಡಿಸಿದರು.

ನನ್ನ ಪುಸ್ತಕ 'ವಚನ ತವನಿಧಿ' (ಐ.ಬಿ.ಹೆಚ್. ಪ್ರಕಾಶನ, ೨೦೧೬ ಪುಟ. ೩೭೭–೪೨೦)ಯಲ್ಲಿ 'ದೇವರ ದಾಸಿಮಯ್ಯ' ಮತ್ತು 'ಜೇಡರ ದಾಸಿಮಯ್ಯ ಒಂದು ವಿಶ್ಲೇಷಣೆ' ಎಂಬ ಲೇಖನದಲ್ಲಿ ವಿವರವಾಗಿ ಚರ್ಚಿಸಿದ್ದೇನೆ. ಓದುಗರು ಈ ಲೇಖನವನ್ನು ಓದಬೇಕೆಂದು ವಿನಂತಿ. ಅದೂ ಅಲ್ಲದೆ ಕರ್ನಾಟಕ ಸರ್ಕಾರ ಪ್ರಕಟಿಸಿರುವ ಸಮಗ್ರ ವಚನ ಸಂಪುಟ ೭ರಲ್ಲಿ ಜೇಡರ ದಾಸಿಮಯ್ಯನ ಒಟ್ಟು ೧೭೬ ವಚನಗಳು ಪ್ರಕಟ ಗೊಂಡಿವೆ. ಸದರಿ ವಚನವು ೧೩೬ನೆಯ ವಚನವಾಗಿ ಪ್ರಕಟಗೊಂಡಿದೆ (ಪುಟ ೨೫೯). ಓದುಗರಲ್ಲಿ ತಪ್ಪುಗ್ರಹಿಕೆಯಾಗಬಾರದೆಂಬುದೇ ಈ ಪತ್ರದ ಉದ್ದೇಶ; ಯಾರೂ ಅನ್ಯಥಾ ಭಾವಿಸಬಾರದು.

*ಬೆಂಗಳೂರು* ***ಡಾ॥ ಹೆಚ್. ಚಂದ್ರಶೇಖರ***



# ಭಗವದ್ಗೀತೆ : ಒಂದು ಅವಲೋಕನ

# ೭. ಕರ್ಮಯೋಗ

ಜಿ. ರಾಮಕೃಷ್ಣ

**ಗೀತೆಯು ಒಂದು ಕಡೆ ಧರ್ಮಶಾಸ್ತ್ರದ ಕೆಲಸ ಮಾಡುತ್ತದೆ, ಇನ್ನೊಂದೆಡೆ ತತ್ತ್ವಶಾಸ್ತ್ರದ ಚಿಂತನೆ ನಡೆಸುತ್ತದೆ. ದಿನನಿತ್ಯದ ಸಾಮಾಜಿಕ ಸಂಬಂಧಗಳ ಜಂಜಾಟಗಳನ್ನು ಮೀರಿ ತಾತ್ವಿಕ ಆದರ್ಶಗಳ ಆಗರವಾಗಿ ಗೀತೆಗೆ ಮಹತ್ವದ ಸ್ಥಾನವುಂಟು. ಆದರೆ ಸಾಮಾಜಿಕ ಸಂರಚನೆಯು ಧರ್ಮಶಾಸ್ತ್ರಕಾರರ ಹೇಳಿಕೆ ಅಥವಾ ಅಪೇಕ್ಷೆಯಿಂದ ರೂಪಿತವಾಗುವುದಿಲ್ಲ. ಒಂದು ಚಾರಿತ್ರಿಕ ಸಂದರ್ಭದ ಯಥಾಸ್ಥಿತಿಯನ್ನು ಸಂರಕ್ಷಿಸುವ ಉದ್ದೇಶ ಧರ್ಮಶಾಸ್ತ್ರದ್ದು; ಅದನ್ನು ಗೀತೆಯೂ ಮಾಡುತ್ತದೆ. ಪ್ರಕೃತ ಸನ್ನಿವೇಶದಲ್ಲಿ ನಮ್ಮ ಸಂವಿಧಾನಕ್ಕೂ ಇದು ಅನ್ವಯವಾಗುತ್ತದೇನೋ : "ಅದರರ್ಥ ಇದು, ಆಶಯ ಇದು; ಅದನ್ನು ಉಲ್ಲಂಘಿಸುವಂತಿಲ್ಲ," ಎಂದು ಹೇಳುತ್ತಿರುತ್ತಾರೆ. ದೀರ್ಘಕಾಲಿಕ ಇತಿಹಾಸದ ದೃಷ್ಟಿಯಿಂದ ಪ್ರಾಯೋಗಿಕವಾಗಿ ಅದೆಷ್ಟು ಸತ್ಯ ?**

ವರ್ಣ ವಿಭಜನೆಯು ಸಮಾಜದ ವಿಕಾಸದ ಯಾವುದೋ ಹಂತದಲ್ಲಿ ಉದ್ಭವಿಸಿದ್ದು. ಅದರ ಪೂರ್ವದಲ್ಲಿ ನಮ್ಮ ಸಾಮಾಜಿಕ ಸಂರಚನೆ ಬೇರೆಯೇ ಇದ್ದಿತು. ಉದಾಹರಣೆಗೆ, ಬುಡಕಟ್ಟು ಸಮಾಜಗಳ ವ್ಯವಸ್ಥೆಯನ್ನು ಗಮನಿಸಬಹುದು. ಶ್ರೇಣೀಕರಣವು ಯಾವ ಹಂತದಲ್ಲಿ ಆವಿರ್ಭವಿಸಿತೆಂಬ ಪ್ರಶ್ನೆಗೆ ನಿಖರವಾದ ಉತ್ತರ ಕೊಡುವುದರಲ್ಲಿ ನಮ್ಮ ದೇಶದ ವಿದ್ವಾಂಸರಲ್ಲಿ ಮೊದಲಿನಿಂದಲೂ ಭಿನ್ನಾಭಿಪ್ರಾಯಗಳಿವೆ. ಋಗ್ವೇದದ ಕೊನೆಯ ಘಟ್ಟದ ವೇಳೆಗಂತೂ ಅದು ಅಸ್ತಿತ್ವಕ್ಕೆ ಬಂದಿದ್ದುದು ಸಂಶಯಾಸ್ಪದವಲ್ಲ. ಗೀತೆಯಲ್ಲಿ ಸಾಮಾಜಿಕ ಅಂಶಗಳು ಮತ್ತು ತತ್ತ್ವಶಾಸ್ತ್ರೀಯ ಪ್ರತಿಪಾದನೆಗಳು, ಹೀಗೆ ಎರಡೂ ದಾಖಲಾಗಿವೆ. ದಾರ್ಶನಿಕ ದೃಷ್ಟಿಯ ಪ್ರಖರತೆ ಏನೇ ಇರಲಿ, ಅದನ್ನು ಸಾಮಾಜಿಕ ಸಂರಚನೆಗೆ ಊರುಗೋಲನ್ನಾಗಿಸುವುದು ಇಲ್ಲವೇ ಗೌಣವಾಗಿಸುವುದು ನಾವು ನಡೆದುಬಂದಿರುವ ಹಾದಿ. ಗೀತೆಯ ಅಭ್ಯಾಸ ಮಾಡುವಾಗ ಕೇವಲ ತತ್ತ್ವಶಾಸ್ತ್ರ ಪ್ರಮೇಯಗಳನ್ನು ಗುರುತಿಸಿದರೆ ಸಾಲದು, ಯಾವ ಸಾಮಾಜಿಕ ವ್ಯವಸ್ಥೆಯನ್ನು ಸಮರ್ಥಿಸಲು ಮತ್ತು ಎತ್ತಿಹಿಡಿಯಲು ಗೀತೆಯು ಪ್ರವೃತ್ತವಾಗಿದೆಯೆಂಬುದನ್ನು ಸಹ ನಾವು ಅರಿಯಬೇಕು. ಆ ಬಗ್ಗೆ ಈಗಾಗಲೇ ನಾವು ಪ್ರಸ್ತಾಪ ಮಾಡಿದ್ದಾಗಿದೆ. ಮೂಲಭೂತವಾಗಿ ಗೀತೆಯು ವರ್ಣ ವಿಭಜನೆಯನ್ನು ಯಾವುದೇ ಕಾರಣಕ್ಕೂ ಪಲ್ಲಟಗೊಳಿಸಬಾರದೆಂಬ ನಿಲುವನ್ನು ಪ್ರಕಟಿಸಿದೆ. ಮೊದಲ ಅಧ್ಯಾಯದಲ್ಲಿ ವರ್ಣಸಂಕರವು ಒಂದು ಮಹಾನ್ ಪಿಡುಗು ಎಂಬ ಅಭಿಪ್ರಾಯ ಮತ್ತು ಆತಂಕ ವ್ಯಕ್ತವಾಗಿ ಇರುವುದನ್ನು ಈ ಮೊದಲೇ ನಾವು ತಿಳಿದಿದ್ದೇವೆ.

ಗೀತೆಯ ಈ ನಿಲುವು ನಂತರದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಯಾವ ಪ್ರಶ್ನೆಯನ್ನೂ ಎತ್ತದೆ ಅಂಗೀಕೃತವಾಗಿರುವುದು ಸಖೇದ ಆಶ್ಚರ್ಯದ ಸಂಗತಿ. ಶ್ರೇಣೀಕರಣವನ್ನು ನಿರಾಕರಿಸುವುದಿರಲಿ, ಕನಿಷ್ಠ ಅಸ್ಪೃಶ್ಯತೆಯನ್ನಾದರೂ ಅಮಾನವೀಯವೆಂದು ಬಗೆಯುವ ಪ್ರಾಚೀನ ಗ್ರಂಥಗಳುಂಟೆ ? ಸಾಹಿತ್ಯದಲ್ಲಾದರೂ ಉಂಟೆ ? ಪ್ರಾಸಂಗಿಕವಾಗಿಯಾದರೂ ಅದು ವರ್ಜ್ಯವೆಂದು ವಾದಿಸಿದ ಚಿಂತನಾಲಹರಿ ದೊರೆಯುವುದು ಬಹಳ ಅಪರೂಪ. ಅಂತಹ ಸಾಮಾಜಿಕ ದೃಷ್ಟಿಕೋನವನ್ನು ಅಭಿವ್ಯಕ್ತಿಸಿದ ತತ್ತ್ವಶಾಸ್ತ್ರೀಯ ಶಾಖೆಗಳೂ ಅವಗಣನೆಗೆ ತುತ್ತಾಗಿರುವುದು ಇತಿಹಾಸ. ಬುದ್ಧ ಮತ್ತು ಲೋಕಾಯತರು ಇವರಲ್ಲಿ ಪ್ರಮುಖರು. ವರ್ಣಗಳಿಗೆ ನಿರ್ದಿಷ್ಟವಾದ ದುಡಿಮೆಯನ್ನು ಗೀತೆಯು ಸ್ವ-ಧರ್ಮ ಎಂದು ನಿರ್ದೇಶಿಸಿರುವುದನ್ನು ಈಗಾಗಲೇ ನೋಡಿದ್ದೇವೆ. ಅದರ ಪ್ರಭಾವ ಎಷ್ಟಾಗಿತ್ತೆಂದರೆ ಒಂದು ಬಣದ ಎಲ್ಲ ದಾರ್ಶನಿಕ ಗ್ರಂಥಗಳೂ ಅದನ್ನು ಮಾನ್ಯ ಮಾಡಿಯೇ ವಾದಗಳನ್ನು ಬೆಳೆಸಿವೆ. ದೈಹಿಕ ವ್ಯಾಯಾಮ ಸಹ ಒಂದು ಭಾಗವಾಗಿರುವ ಯೋಗಾಭ್ಯಾಸವು ಕೂಡ ವರ್ಣ ವಿಭಜನೆಯ ಆಧಾರದ ಮೇಲೆ ಸೂತ್ರೀಕರಿಸಲ್ಪಟ್ಟಿದೆ! ಉದಾಹರಣೆಗೆ, ಬೃಹದ್ಯೋಗಿಯಾಜ್ಞವಲ್ಕ್ಯಸ್ಮೃತಿಯೆಂಬ ಯೋಗ ವಿಷಯಕ ಗ್ರಂಥವಿದೆ. ಅದರ ಎರಡು ಪದ್ಯಗಳನ್ನು ಗಮನಿಸೋಣ : "ವೇದಗಳನ್ನು ಬಿಟ್ಟು ದ್ವಿಜರು ಬೇರೇನನ್ನೂ ಅಧ್ಯಯನ ಮಾಡಬಾರದು. ತರ್ಕಶಾಸ್ತ್ರವು ದ್ವಿಜರ ಅಧ್ಯಯನಕ್ಕೆ ಯೋಗ್ಯವಲ್ಲ. ಹಾಗೇನಾದರೂ ಅವರು ತರ್ಕವನ್ನು ಕಲಿತರೆ ವಿದ್ವಜ್ಜನರು ಅವರನ್ನು ವೇದನಿಂದಕರಾದ ನಾಸ್ತಿಕರೆಂದು ಹೊರಹಾಕಬೇಕು (೧೨.೩೦:ಹೇತುಶಾಸ್ತ್ರಾಣಿ ಯೋಽಧೀತೇ ವೇದಬಾಹ್ಯೋ ಭವೇದ್ದ್ವಿಜಃ। ತೇನ ನಾಸ್ತಿಕ್ಯಭಾವೇನ ಸರ್ವೇ ಮನ್ಯಂತೇ ಸೋಽನ್ಯಥಾ ॥). ಇದೆಂತಹ ಜ್ಞಾನಶಿಸ್ತು ? ಅದೇ ಗ್ರಂಥವು ವರ್ಣ ಅಥವಾ ಜಾತಿಯ ವಿಂಗಡಣೆಯನ್ನು ವಿರೋಧಿಸುವ "ಅಸುರ"ರನ್ನು ಹೆಸರಿಸಿದೆ. "ಅವರು ಜನಸಮುದಾಯಕ್ಕೆ ಇರುವುದೇ ಒಂದು ಜಾತಿ ಎಂದು ಹೇಳುತ್ತಾರೆ; ವಿಂಗಡಣೆಯು ಅವರಿಗೆ ಅಮಾನ್ಯ. ಯಜ್ಞಾದಿಗಳನ್ನೂ ಅವರು ನಿರಾಕರಿಸುತ್ತಾರೆ" ಎಂದು ಹೇಳಿದೆ (೧೨.೧೬: ಜಾತಿ ಪ್ರಾಧಾನ್ಯಕಂ ನಾಸ್ತಿ ಏಕಜಾತಿ ಸಮುದ್ಭವಃ। ನ ವೇದಾ ನೈವ ಯಜ್ಞಾಶ್ಚ ನ ದಾನಂ ನ ತಪಾಂಸಿ ಚ ॥). ಗೀತೆಯು ಸಹ ಅಸುರರನ್ನು ಕುರಿತು ಕಿಡಿ ಕಾರಿದೆ. ಅದನ್ನು ಮುಂದೆ ವಿವರವಾಗಿ ನೋಡೋಣ.

ಇದನ್ನೆಲ್ಲಾ ತಿಳಿಯುವುದು ಏಕೆ ಮುಖ್ಯವೆಂದರೆ ಭಗವದ್ಗೀತೆಯು "ಸ್ವ-ಧರ್ಮ" ಎಂದು ವೈಭವೀಕರಿಸುವುದು ಕೇವಲ ವರ್ಣನಿರ್ದಿಷ್ಟ ಕರ್ಮಗಳನ್ನು ಅಥವಾ ದುಡಿಮೆಯನ್ನು. "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" (೨.೪೭) ಎಂದು ಹೇಳುವಾಗ ನಾಲ್ಕನೆಯ ವರ್ಣದವರ ದುಡಿಮೆಗೆ ಪ್ರತಿಫಲಾಪೇಕ್ಷೆ ಇರಬಾರದೆಂಬ ಸೂಚನೆಯು ಅಚ್ಚರಿಯನ್ನೇನೂ ಉಂಟುಮಾಡುವುದಿಲ್ಲ. ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳುವಾಗ ಮೊಟ್ಟಮೊದಲು ಹೇಳುವುದು "ಅವನು ಮನಸ್ಸಿಗೆ ಬರಬಹುದಾದಂತಹ ಎಲ್ಲ ಆಸೆಗಳನ್ನೂ ತ್ಯಜಿಸುತ್ತಾನೆ; ತನ್ನಲ್ಲಿ ತಾನು ಸಂತುಷ್ಟಿಯನ್ನು ಕಾಣುತ್ತಾನೆ" ಎಂದು (೨.೫೫ : ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್। ಆತ್ಮನ್ಯೇವ ಆತ್ಮನಾ ತುಷ್ಟಃ ಸ್ಥಿತಪ್ರಜ್ಞಃ ತದಾ ಉಚ್ಯತೇ ॥). ಹಾಗೆ ಎಲ್ಲ ಮನೋಗತ ಆಕಾಂಕ್ಷೆಗಳನ್ನೂ ಬಿಡಲು ಸಾಧ್ಯವಾದರೆ ಅದು ಉದಾತ್ತತ್ವದ ಲಕ್ಷಣವಾಗುತ್ತದೆ, ನಿಜ. ಆದರೆ ಅವನ್ನು ಪೂರೈಸಿಕೊಳ್ಳಲು ಯತ್ನಿಸಿದರೆ ತಪ್ಪೇನು ? ನಾಗರಿಕತೆಯ ವಿಕಾಸವು ಆಕಾಂಕ್ಷೆಗಳ ಪೂರೈಕೆಯ ಸಂದರ್ಭದಲ್ಲಿ ಘಟಿಸಿದೆ. ದಾರ್ಶನಿಕ ದೃಷ್ಟಿಯಿಂದ ಇದೊಂದು ಕಲ್ಪಿತ ಅಮೋಘ ಲಕ್ಷಣ, ಆದರೆ ಸಾಮಾಜಿಕವಾಗಿ ಅನುಷ್ಠಾನಕ್ಕೆ ಬಾರದ ಲಕ್ಷಣವೂ ಹೌದು. ಇದಾವುದನ್ನೂ ಯೋಚಿಸದೆ ನಿಷ್ಕಾಮಕರ್ಮವನ್ನು "ಆಹಾ ! ಎಷ್ಟು ಸೊಗಸಾದ ಸಂದೇಶ" ಎಂದು ಹೊಗಳುವುದು ಡಾಂಭಿಕತೆಯಾಗುತ್ತದೆ. ಕಾಮ್ಯಕರ್ಮಗಳೆಂಬ ವಿಭಾಗವೇ ನಮ್ಮಲ್ಲಿದೆ. ಸ್ಥಿತಪ್ರಜ್ಞನಾಗಬೇಕೆಂದು ಬಯಸಿ ಕಾರ್ಯ ಪ್ರವೃತ್ತವಾಗುವುದು ಸಹ ಒಂದು ಫಲಾಪೇಕ್ಷೆಯಿಂದಾಗಿಯೇ ಅಲ್ಲವೆ ? "ಅಹಂ ಬ್ರಹ್ಮಾಸ್ಮಿ" ಎಂಬ ಭಾವವನ್ನು ಪಡೆಯಬಯಸುವುದೂ ಫಲಾಪೇಕ್ಷೆಯೇ ಸರಿ. ಹಿಂದೆಯೇ ನಾವು ನೋಡಿರುವಂತೆ ಭಾರತೀಯ ದರ್ಶನಗಳಲ್ಲಿ ಒಂದಾದ ಪೂರ್ವ ಮೀಮಾಂಸಾದಲ್ಲಿ "ಸ್ವರ್ಗವನ್ನು ಪಡೆಯಲು ಜ್ಯೋತಿಷ್ಟೋಮಯಾಗ ಮಾಡು" (ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ) ಎಂಬಂತಹ ಆದೇಶಗಳನ್ನು ಗಂಭೀರವಾಗಿ ಪರಿಗಣಿಸಲಾಗಿದೆ. "ಬ್ರಹ್ಮನ್" ಕುರಿತು ತಲೆಕೆಡಿಸಿಕೊಳ್ಳದ ನ್ಯಾಯ ಮತ್ತು ವೈಶೇಷಿಕ ದರ್ಶನಗಳು ಸಹ ಅಪವರ್ಗ ಮತ್ತು ನಿಃಶ್ರೇಯಸಗಳ ಆಕಾಂಕ್ಷೆಯನ್ನು ಹೊತ್ತಿವೆ. ಸುಖಪ್ರಾಪ್ತಿ ಮತ್ತು ನಿರ್ವಾಣ

ಅನುಕ್ರಮವಾಗಿ ಲೋಕಾಯತರು ಮತ್ತು ಬುದ್ಧ ಇರಿಸಿಕೊಂಡಿದ್ದ ಅಪೇಕ್ಷೆಗಳು; ಅರ್ಹಂತನಾಗ ಬೇಕೆಂಬುದು ಜೈನ ದರ್ಶನದ ಆಶಯ. ಮನು ಆದರೆ ನೇರವಾಗಿ ಮತ್ತು ಕರ್ಕಶವಾಗಿ "ಕೂಲಿ ಕೊಟ್ಟೋ ಕೊಡದೆಯೋ, ಹೇಗೂ ಸರಿ, ಶೂದ್ರರ ದಾಸ್ಯವನ್ನು ಪಡೆಯಿರಿ" (ಶೂದ್ರಂ ತು ಕಾರಯೇತ್ ದಾಸ್ಯಂ ಕ್ರೀತಂ ಅಕ್ರೀತಮೇವ ವಾ) ಎಂದು ಬಿಡುತ್ತಾನೆ. ಗೀತೆಯು ಅಷ್ಟು ಮನಬಿಚ್ಚಿ ಅದನ್ನು ಹೇಳುವುದಿಲ್ಲ, ಅಷ್ಟೆ. ಇನ್ನೊಂದು ಅಂಶವನ್ನೂ ಗಣನೆಗೆ ತೆಗೆದುಕೊಳ್ಳಬಹುದು : ಬೌದ್ಧಿಕ ದುಡಿಮೆಯನ್ನು ಕೂಡ ಫಲಾಪೇಕ್ಷೆ ಇಲ್ಲದೆ ಮಾಡ ಬೇಕೆಂದು ಗೀತೆಯು ಬೋಧಿಸಿದೆಯೆ ? ಇಲ್ಲವಾದರೆ ಏಕೆ ? ದೈಹಿಕ ದುಡಿಮೆಯನ್ನು ನಾಲ್ಕನೆಯ ವರ್ಣ ದವರಿಗೆ ಬಳುವಳಿಯಾಗಿ ಕೊಟ್ಟುಬಿಟ್ಟಿರುವುದರಿಂದ ಅದನ್ನು ಮಾತ್ರ ಫಲಾಪೇಕ್ಷೆ ಇಲ್ಲದೆ ನಿಷ್ಠೆಯಿಂದ ಮಾಡಬೇಕೆಂಬ ಸೂಚನೆ ಇದ್ದಂತೆ ತೋರುತ್ತದೆ. ಗೀತೆಯು ರಚನೆಯಾದ ಕಾಲಕ್ಕೆ ಇದು ಉಚ್ಚ ವರ್ಗ ಗಳಿಗೆ ಬಹಳ ಪ್ರಭಾವಿ ಆಯುಧವಾಗಿದ್ದಿರಬಹುದು. ಇಂದು ಗೀತೆಯ ನಿಷ್ಕಾಮಕರ್ಮ ಬೋಧೆಗೆ ಅಷ್ಟಾಗಿ ತುಡಿತ ಇರಲಾರದು; ಏಕೆಂದರೆ ಪ್ರತಿಯೊಂದು ಕ್ರಿಯೆಯ ಸಂಬಂಧದಲ್ಲೂ ಪ್ರತಿಫಲವೇನೆಂಬ ಅಪ್ರಕಟಿತ ಪ್ರಶ್ನೆ ಇದ್ದೇ ಇದೆ. ಬೋಧನೆಯನ್ನು ನೀಡುವವರು ಸಹ ಇದೇ ಗುಂಪಿಗೆ ಸೇರಿರುತ್ತಾರೆ.

ದುಃಖದಲ್ಲಿ ಕುಗ್ಗದೆ ಮತ್ತು ಸುಖದಲ್ಲಿ ಹಿಗ್ಗದೆ ಹಾಗೂ ರಾಗ–ಭಯ–ಕ್ರೋಧಗಳಿಂದ ವ್ಯಕ್ತಿತ್ವದ ನಾಶ ಮಾಡಿಕೊಳ್ಳದಿರುವವರು ಸ್ಥಿತಪ್ರಜ್ಞರು (೨.೫೬) ಎಂಬ ಗೀತೆಯ ಮಾತಿಗೆ ಯಾವ ಆಕ್ಷೇಪವೂ ಸಾಧ್ಯ ಇಲ್ಲ. ಮಾನಸಿಕವಾಗಿ ಕ್ಲೇಶ ಅನುಭವಿಸುತ್ತಿರುವವರಿಗೆ ಚಿಕಿತ್ಸೆ ನೀಡುವಾಗ ಇದೇ ಮಾತನ್ನು ಹತ್ತು ಬೇರೆ ಬೇರೆ ರೀತಿಗಳಲ್ಲಿ ವೈದ್ಯರು ಹೇಳುವುದನ್ನು ನಾವು ಕೇಳುತ್ತಿರುತ್ತೇವೆ. "ಅಭೀಃ" (ಹೆದರದಿರು) ಎಂಬುದು ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಗಾಂಧೀಜಿ ಮತ್ತು ಭಗತ್ ಸಿಂಗ್ ಇಬ್ಬರೂ ಹೇಳುತ್ತಿದ್ದರು. ಮುಂದುವರಿದು ಗೀತೆಯು ಹೇಳುತ್ತದೆ, "ಇಂದ್ರಿಯಗಳೆಲ್ಲವನ್ನೂ ತಡೆಹಿಡಿದು ಅವನ್ನು ನನ್ನಲ್ಲಿ ಕೇಂದ್ರೀಕರಿಸುವುದು ಸ್ಥಿತಪ್ರಜ್ಞೆಯ ಲಕ್ಷಣ" ಎಂದು (೨.೬೧: ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ॥). ಗೀತೆಯಲ್ಲಿ ಮೊದಲಬಾರಿಗೆ ಶ್ರೀ ಭಗವಾನನು ತನ್ನ ದೈವತ್ವವನ್ನು ಸೂಚಿಸುವ ಪದ್ಯ ಇದು. ಮುಂದೆ ಗೀತೆಯು ವಿಸ್ತರಿಸಲಿರುವ ಭಕ್ತಿಯೋಗದ ಪ್ರಾಸ್ತಾವಿಕ ಮಾತಿದೆಂದು ಗ್ರಹಿಸಿದರೆ ತಪ್ಪಲ್ಲ. "ಭಗವಂತನೊಬ್ಬ ನಿದ್ದಾನೆ, ಅವನ (ಅವಳಲ್ಲ!) ಮೊರೆ ಹೋಗು" ಎಂಬ ಭಾವ ಇಲ್ಲಿದೆ. ಏತಕ್ಕೆ ಮೊರೆ ಹೋಗಬೇಕು ? ಅದಕ್ಕೂ ಇಂದ್ರಿಯಗಳನ್ನು ಹರಿಯಬಿಡದೆ ನಿಯಂತ್ರಿಸಿ ಕೊಳ್ಳುವುದಕ್ಕೂ ಏನು ಸಂಬಂಧ ? ಅಂದರೆ, ಮೊರೆ ಹೋಗುವುದು ಯಾವುದೋ ಅಪೇಕ್ಷೆಯನ್ನು ಸಿದ್ಧಿಸಿಕೊಳ್ಳಲೆಂದೇ ಅಲ್ಲವೇನು ? ಅಂತಹ ಅಪೇಕ್ಷೆಯು ಮಾನ್ಯ, ಆದರೆ ವರ್ಣ–ನಿಗದಿತ ಸ್ವ–ಧರ್ಮದ ಸೇವೆಗೆ ಪ್ರತಿಫಲ ನಿರೀಕ್ಷಿಸಬಾರದೆಂದು ತಾತ್ಪರ್ಯವೆ ? ಗೀತೆಯ ಓದುಗರು ತಮ್ಮ ಒಲವಿನ ಯಾವ ಉತ್ತರ ಕೊಟ್ಟುಕೊಂಡರೂ ಅಡ್ಡಿಯಿಲ್ಲ. ಇಂದ್ರಿಯಗಳು ವಿಷಯಾಸಕ್ತಿಯನ್ನು ಬೆಳೆಸಿಕೊಂಡರೆ ಸ್ಥಿತಪ್ರಜ್ಞರಾಗುವ ಹಾದಿಯನ್ನು ಕಳೆದುಕೊಂಡಂತಾಗುತ್ತದೆ ಯೆಂಬುದು ಮುಂದಿನ ಪ್ರಸ್ತಾವನೆ. ಒಂದು ವಸ್ತುವಿನಲ್ಲಿ ಆಸಕ್ತಿ ಬೆಳೆದರೆ ಅದನ್ನು ಪಡೆಯಬೇಕೆಂಬ ಆಸೆ, ಅದರಿಂದ ಕಾಮನೆಯ ಉದ್ರೇಕ, ಅದನ್ನು ಪಡೆಯ ಲಾಗದಿದ್ದರೆ ಕೋಪ, ಅದರಿಂದ ಅವಿವೇಕದ ನಡತೆ, ಕಡೆಗೆ ಬುದ್ಧಿನಾಶ ಇವು ಒಂದು ಸರಣಿಯಲ್ಲಿ ಉಂಟಾಗುವ ಪರಿಣಾಮಗಳು. ಆದ್ದರಿಂದ ಇಂದ್ರಿಯ ನಿಗ್ರಹದಿಂದ ಶಾಂತತೆಯು ಲಭಿಸುತ್ತದೆ ಎಂಬುದು ಸೂಚನೆ. ಇಲ್ಲಿ ಎರಡು ಸಾಧ್ಯತೆಗಳಿರಲು ಶಕ್ಯ: ಕರ್ಮಫಲ ಪ್ರಾಪ್ತಿ ಇಲ್ಲವೆ ಕರ್ಮಫಲದ ಅಪ್ರಾಪ್ತಿ. ಆಸಕ್ತಿಯಿಂದಾಗಿ ಮೂಡಿದ ಆಸೆಯ ಪೂರೈಕೆ ಯಾದರೆ ಸರಣಿಯಲ್ಲಿ ಮುಂದಿನದಾದ ಕೋಪಕ್ಕೆ ಅವಕಾಶವಿಲ್ಲ. ಆದರೆ ಎಲ್ಲ ಆಸೆಗಳೂ ಈಡೇರಿಯೇ ತೀರುತ್ತವೆಂದು ಹೇಳಲಾಗದಲ್ಲ ! ಆದ್ದರಿಂದ ಇಂದ್ರಿಯ ನಿಗ್ರಹವು ಮೌಲ್ಯವೆನಿಸಿಕೊಳ್ಳುತ್ತದೆ. ಆದರೆ ಬಲವಂತ ವಾಗಿ ನಿಗ್ರಹವನ್ನು ಹೇರಿಕೊಂಡರೆ ಬೇರೊಂದು ರೀತಿಯ ಮಾನಸಿಕ ಕ್ಷೋಭೆಯು ಸಾಧ್ಯ. ಮನಃಶಾಸ್ತ್ರದಲ್ಲಿ ಮನಸ್ಸನ್ನು ಅಡಗಿಸುವುದು ಅಥವಾ ನಿರೋಧಿಸುವುದು ಮತ್ತು ಮನಸ್ಸನ್ನು ಅದುಮಿ ಹಿಡಿಯುವುದು ಅಥವಾ ತುಳಿದಿಡುವುದು ಎಂಬುವನ್ನು ಪ್ರತ್ಯೇಕಿಸಲಾಗುತ್ತದೆ. ಅವನ್ನು 'ಸಪ್ರೆಶನ್' ಮತ್ತು 'ರಿಪ್ರೆಶನ್' ಎನ್ನುತ್ತಾರೆ. ಒಂದು ಆರೋಗ್ಯಕರ, ಇನ್ನೊಂದು ಅನಾರೋಗ್ಯಕರ. ಅನಾರೋಗ್ಯಕರವಾದ ನಿಯಂತ್ರಣವು ವಕ್ರತೆಗೆ (ಪರ್ವರ್ಶನ್) ಕಾರಣ ವಾಗುತ್ತದೆ. ಆದ್ದರಿಂದಲೇ 'ಚಿತ್ತ ವೃತ್ತಿ ನಿರೋಧ'ಕ್ಕೆ ಯೋಗಶಾಸ್ತ್ರವು ನಿಧಾನಗತಿಯ ಅಭ್ಯಾಸ ಮತ್ತು ಪ್ರಯತ್ನಗಳನ್ನು ಸೂಚಿಸಿದೆ. ಯೋಗ ವಾಸಿಷ್ಠದಲ್ಲಿ ಹೇಳಿರುವಂತೆ "ಮನಸ್ಸು ಒಂದು ಬಾಲಕನಿದ್ದಂತೆ, ಅದನ್ನು ಅಭ್ಯಾಸ ಮತ್ತು ಪ್ರಯತ್ನಗಳಿಂದ ಲಾಲನೆ ಮಾಡಬೇಕು" (ಅಭ್ಯಾಸೇನ ಪ್ರಯತ್ನೇನ ಲಾಲಯೇತ್ ಚಿತ್ತಬಾಲಕಂ). ಮನಸ್ಸು ಇಚ್ಛಿಸಿದಂತೆ ಅದನ್ನು ಹರಿದಾಡಲು ಬಿಟ್ಟರೆ ಗಾಳಿಯ ಹೊಡೆತಕ್ಕೆ ಸಿಲುಕಿ ನಾವೆಯು ಯದ್ವಾತದ್ವಾ ಚಲಿಸುವಂತೆ ಮನಸ್ಸಿನ ಗತಿಯು ಅಶಾಂತಿಯ ಆಗರವಾಗುತ್ತದೆ.

ಭಗವದ್ಗೀತೆಯ ಈ ಭಾಗವು ಮನೋಜ್ಞವಾದುದು. ಗೀತೆಯು ಹೇಳುವಂತೆ ನಾವು "ಬ್ರಾಹ್ಮೀ ಸ್ಥಿತಿ"ಯನ್ನು ಪಡೆಯುತ್ತೇವೋ ಇಲ್ಲವೋ, ಆದರೆ ತೀರಾ ಅನಿಯಂತ್ರಿತವಾಗಿ ಮನಸ್ಸನ್ನು ಹರಿಯ ಬಿಡದಿದ್ದಾಗಿನ ಸುಖವಂತೂ ಮೂರ್ತವಾದುದೇ ಆಗಿರುತ್ತದೆ. ಬ್ರಾಹ್ಮೀ ಸ್ಥಿತಿಯನ್ನು ಪಡೆದರಂತೂ ಹೇಳುವುದೇ ಬೇಡ. ವ್ಯಕ್ತಿತ್ವವನ್ನು ರೂಪುಗೊಳಿಸಿಕೊಳ್ಳಲು ನಿರ್ದಿಷ್ಟ

---




**ಮ**ರೆತುಬಿಡು...
ಎಷ್ಟು ಸರಾಗವಾಗಿ ಹೇಳಿಬಿಟ್ಟೆ
ಇಷ್ಟಕ್ಕೂ ನಾನು ನಿನ್ನನ್ನು ಬೇರ್ಪಡಿಸಿ ಕಂಡಿದ್ದಿಲ್ಲವೇ !
ಹೋಗಲೀ...
ನಾವಿಬ್ಬರೂ ಎಂದು ಸಹ ಹೇಳಿದ್ದು ನೆನಪಿಲ್ಲ !

ನೀನು ನಾನು ಸೇರಿ ನಾನಾಗಿದ್ದೇನೆ
ನನ್ನನ್ನು ನಾನು ಹೇಗೆ ಮರೆಯಬಲ್ಲೆ
ಇರಲಿ -
ಒಂದು ಕ್ಷಣ ನೀ ಹೇಳುವ ಹಾಗೆ
ನನ್ನನ್ನು ನಿನ್ನಿಂದ ಬೇರ್ಪಡಿಸಿ ನೋಡಿದಾಗ -

ನನ್ನ ಪ್ರೀತಿ ಕಿಲೋಗ್ರಾಮಿನ ಕಲ್ಲಿನಂತೆ ನೆಲ ತಾಕುತ್ತಿದೆ
ನಿನ್ನ ಪ್ರೀತಿ ಗ್ರಾಮುಗಳಲ್ಲಿ ಗಾಳಿಯಲ್ಲಿ ತೇಲಾಡುತ್ತಿದೆ
ನಾನು ಇನ್ನಷ್ಟು ತೂಕವ ಹೆಚ್ಚಿಸಿಕೊಂಡು
ನೆಲವನ್ನು ಸೀಳಿ ಆಳಕ್ಕೆ ಬೇರೂರಿದರೇ...!
ನೀನು ಮತ್ತಷ್ಟು ಹಗುರವಾಗಿ
ಗಗನದಲ್ಲಿ ಹತ್ತಿಯಂತೆ ಹಾರಾಡಿದೆ !
ಸರಿತೂಕವನ್ನು ತೂಗುವುದಾದರೂ ಹೇಗೆ ?!

ನಿನ್ನ ಪ್ರೀತಿಯನ್ನು ಕಿಲೋಗ್ರಾಮುಗಳಿಂದ ಹೆಚ್ಚಿಸಿ
ತೂಗಿದೆಯಾದರೇ...
ಆಗ ನಿನ್ನದು ನನ್ನದು ಅಲ್ಲದ ನಮ್ಮ ಪ್ರೀತಿ
ಸರಿದೂಗಿ -
ಪ್ರೀತಿ + ಪ್ರೀತಿ = ಪ್ರೀತಿ !!





**ರೋಹಿಣಿ ಸತ್ಯ**
ನಂ. ೩೩೦, ಸಂಪಿಗೆ ರಸ್ತೆ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩

ವಿಧಾನಗಳಿವೆ, ಹಾದಿಯಿದೆ. ಈ ಬಗ್ಗೆ ಗೀತೆಯ ನಿರ್ದೇಶನವು ಸಾರವತ್ತಾದುದೇ ಆಗಿದೆ. ಏನನ್ನು ಗಳಿಸಬೇಕೆಂಬುದನ್ನು ಸ್ಥಿತಪ್ರಜ್ಞನ ಲಕ್ಷಣಗಳ ಮೂಲಕ ಹೇಳಿದೆ; ಹೇಗೆ ಅದನ್ನು ಗಳಿಸಲು ಸಾಧ್ಯವೆಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಹೇಳಲಾಗುತ್ತದೆ. ಅದಕ್ಕೆ ವಿವಿಧ ಮಾರ್ಗಗಳುಂಟು. ಇನ್ನುಳಿದ ೧೬ ಅಧ್ಯಾಯ ಗಳಲ್ಲಿ ಕೆಲವನ್ನು ಆ ವಿವರಣೆಗೆ ಮೀಸಲಾಗಿರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, 'ಕರ್ಮಯೋಗ'ದ ವ್ಯಾಖ್ಯಾನವಿದೆ. ಹಿಂದೆ ನಾವು ಪರಿಚಯಿಸಿಕೊಂಡಂತೆ ಗೀತೆಯು ಉಪನಿಷತ್ತುಗಳನ್ನಾಧರಿಸಿ ತತ್ವ ನಿರೂಪಣೆ ಮಾಡುತ್ತದೆ. ಮುಂಡಕೋಪನಿಷತ್ತಿನ ಒಂದು ಪ್ರತಿಪಾದನೆಯು ಕರ್ಮಯೋಗದ ಸಂದರ್ಭದಲ್ಲಿ ಪ್ರಸ್ತುತವೆನಿಸುತ್ತದೆ. ಅಲ್ಲಿ ವಿದ್ಯೆಯನ್ನು ಪರಾ ಮತ್ತು ಅಪರಾ ಎಂದು ವಿಂಗಡಿಸಲಾಗಿದೆ. ಬ್ರಹ್ಮನ್ ಎಂಬ ಸದ್ವಸ್ತುವಿನ ಜ್ಞಾನವು ಅತಿ ಮಹತ್ತಾದ ವಿದ್ಯೆ; ಆದ್ದರಿಂದ ಅದು ಪರಾವಿದ್ಯೆ. ಬೇರೆ ವಿದ್ಯೆಗಳೆಲ್ಲಾ ಅದಕ್ಕೆ ಹೋಲಿಸಿದರೆ ಕಡಿಮೆ ಮಟ್ಟದವು, ಆದ್ದರಿಂದ ಅವೆಲ್ಲಾ ಅಪರಾ ವಿದ್ಯೆ ಎನಿಸಿಕೊಳ್ಳುತ್ತವೆ. ಋಗ್ವೇದದ ಹಂತದಲ್ಲಿ ಜ್ಞಾನ ಅಥವಾ ವಿದ್ಯೆಯನ್ನು ಶ್ರೇಣೀಕರಣಕ್ಕೆ ಗುರಿಯಾಗಿಸುವ ಪದ್ಧತಿ ಇಲ್ಲ. ಅಲ್ಲಿ ಬಡಗಿಯ ವಿದ್ಯೆಯೂ ವಿದ್ಯೆ, ವಿಶ್ವದ ಉಗಮವು ಹೇಗಾಯಿತೆಂದು ತಿಳಿಯುವುದೂ ವಿದ್ಯೆ. ಅಂದರೆ, ದುಡಿಯುವ ಕೈ ಮತ್ತು ಚಿಂತಿಸುವ ಮನಸ್ಸು ಸಮಾನವಾಗಿ ಗೌರವಕ್ಕೆ ಪಾತ್ರವಾಗುತ್ತವೆ. ಉಪನಿಷತ್ತುಗಳ ವೇಳೆಗೆ ದುಡಿಮೆಯ ಹಂಚಿಕೆಯಾಗಿ ಬೌದ್ಧಿಕ ದುಡಿಮೆಯು ಶ್ರೇಷ್ಠವೂ, ದೈಹಿಕ ದುಡಿಮೆಯು ಅದಕ್ಕಿಂತಲೂ ಕಡಿಮೆಯ ಸ್ಥಾನದ್ದೂ ಆಗುತ್ತವೆ. ಅಂದರೆ, ಚಿಂತಿಸುವ ಮನಸ್ಸು ಮೇಲುಗೈ ಪಡೆಯುತ್ತದೆ ಮತ್ತು ದುಡಿಯುವ ಕೈ ಹಿಂದಕ್ಕೆ ಸರಿಯುತ್ತದೆ. ಪ್ರಪಂಚದ ಬೇರೆ ದೇಶಗಳ ಸಮಾಜ ವಿಕಾಸದ ಹಂತಗಳಲ್ಲಿ ಸಹ ಇಂಥದೇ ವಿಂಗಡಣೆಯನ್ನು ಗುರುತಿಸಬಹುದು. ಗೀತೆಯ ಎರಡನೆಯ ಅಧ್ಯಾಯವನ್ನು 'ಸಾಂಖ್ಯಯೋಗ' ಎನ್ನಲಾಗಿದೆ. 'ಸಾಂಖ್ಯ' ಎಂದರೆ ಇಲ್ಲಿ ಜ್ಞಾನವೆಂಬ ಅರ್ಥವಿದೆ; ಸ್ಥಿತಪ್ರಜ್ಞತ್ವದ ಜ್ಞಾನವು ಪರಮ ಜ್ಞಾನ ವೆನ್ನುವ ಇಂಗಿತ ಅದರಲ್ಲಿದೆ. ಜ್ಞಾನವು ಹೆಚ್ಚಿನ ಸ್ಥಾನ ಪಡೆದಿದ್ದರೆ ಅದಕ್ಕಿಂತಲೂ ಹ್ರಸ್ವವಾದ ಕರ್ಮದ ಗೊಡವೆ ಏಕೆ ? ಇಲ್ಲಿ ಭಿನ್ನತೆ ಇದೆ, ಆದರೆ ಅವನ್ನು ಹೆಚ್ಚು ಅಥವಾ ಕಡಿಮೆ ಎಂದು ಶ್ರೇಣೀಕರಣಗೊಳಿಸಿಲ್ಲ ಎಂದು ಗೀತೆಯ ಕರ್ತೃ ಹೇಳಹೊರಟಿದ್ದಾನೆ. ಭಿನ್ನತೆಯ ಸ್ವರೂಪವನ್ನು ಸೂಕ್ಷ್ಮವಾಗಿ ಗುರುತಿಸಲಾಗಿದೆ : ಕರ್ಮೇಂದ್ರಿಯಗಳಿಗೆ (ಅಂದರೆ, ದೈಹಿಕ ದುಡಿಮೆಗೆ) ರಜೆ ಘೋಷಿಸಿ, ಇಂದ್ರಿಯಗಳನ್ನು ನಿಯಂತ್ರಿಸದೆ ಅವನ್ನು ಹರಿಬಿಡುತ್ತಲೇ ಇರುವುದು ಒಂದು ವಿಧಾನ; ಅದನ್ನು ಗೀತೆಯು 'ಮಿಥ್ಯಾಚಾರ' (ಅಥವಾ ಡಾಂಭಿಕತೆ) ಎನ್ನುತ್ತದೆ. ಇಂದ್ರಿಯ ನಿಗ್ರಹವನ್ನು ಸಾಧಿಸಿದವರು ಸಹ ಕರ್ಮಗಳಲ್ಲಿ ತೊಡಗುತ್ತಾರೆ; ಇಲ್ಲದಿದ್ದರೆ ಇರುವಿಕೆಗೆ ಚ್ಯುತಿಯುಂಟಾದೀತು. ಗೀತೆಯು ಹೇಳುವಂತೆ, ದೈನಂದಿನ ಜೀವನಕ್ಕೆ ಕರ್ಮವು ಅಗತ್ಯ (ಶರೀರ ಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇತ್ ಅಕರ್ಮಣಃ ॥–೩.೮).

ಕರ್ಮವನ್ನು ಎರಡು ವಿಧಗಳಲ್ಲಿ ಭಾವಿಸಬಹುದು: (ಅ) ದಿನನಿತ್ಯದ ಸಾಧಾರಣ ಕೆಲಸಗಳು, ಮತ್ತು (ಆ) ಯಜ್ಞಾದಿ ವಿಧಿಗಳ ಆಚರಣೆ. ಭೂಮಿಯನ್ನು ಉತ್ತು ಬೆಳೆ ಬೆಳೆದಾಗ ಫಲವು ಗೋಚರವಾದ್ದು; ಆದರೆ ಯಜ್ಞದ ಫಲವು ಅಗೋಚರ. ಯಜ್ಞಗಳನ್ನು ಕುರಿತ ಚಿಂತನೆಗೆ ಪೂರ್ವ ಮೀಮಾಂಸಾ ದರ್ಶನವು ಪ್ರಖ್ಯಾತವಾಗಿದೆ. ದೇವತೆಗಳಿಗೆ ಯಜ್ಞದಲ್ಲಿ ಹವಿಸ್ಸು ಅರ್ಪಿಸಲಾಗುತ್ತದೆ ಮತ್ತು ಅದನ್ನು ಮಾಡುವಾಗ ಮಂತ್ರೋಚ್ಚಾರಣವಿದೆ. ದೇವತೆಗಳಿಗೆ ಅರ್ಪಿತವಾಗುತ್ತದೆ ಈ ಹವಿಸ್ಸು ಎಂದು ಹೇಳಿದರೂ ನಿಜದಲ್ಲಿ ದೇವತೆ ಗಳಿಲ್ಲ. ಹಾಗಾದರೆ ಫಲವನ್ನು ಕೊಡುವವರು ಯಾರು? ಯಾರೂ ಇಲ್ಲ, ಫಲವು ಮಂತ್ರದ ಶಕ್ತಿಯಿಂದ ದೊರಕುತ್ತದೆ. ಇದು ಸ್ಥೂಲವಾಗಿ ಪೂರ್ವ ಮೀಮಾಂಸಾ ದರ್ಶನದ ನಿಲುವು. 'ಅಪೂರ್ವ' ಮುಂತಾದ ಕಲ್ಪನೆ ಗಳೂ ಇವೆ, ಆದರೆ ಅದನ್ನಿಲ್ಲಿ ಪ್ರಸ್ತಾಪಿಸಹೋಗುವುದಿಲ್ಲ. ಇದಕ್ಕೆ ಭಿನ್ನವಾಗಿ, ದೇವತೆಗಳು ತುಷ್ಟರಾಗಿ ಯಜ್ಞ ಮಾಡಿದವರಿಗೆ ಫಲ ನೀಡುತ್ತಾರೆಂದು ಗೀತೆಯು ಹೇಳುತ್ತದೆ (೩.೧೧: ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ। ಪರಸ್ಪರಂ ಭಾವಯಂತಃ ಶ್ರೇಯಃ ಪರಂ ಅವಾಪ್ಸ್ಯಥ॥ – ಹಾಗೆಂದು ಪ್ರಜಾಪತಿಯು ಹೇಳಿದ್ದನೆಂದು ಗೀತೆಯು ಉಲ್ಲೇಖಿಸಿದೆ). ಅಂದರೆ, ಒಂದರ್ಥದಲ್ಲಿ ಪೂರ್ವ ಮೀಮಾಂಸಾ ದರ್ಶನಕ್ಕೆ ಗೀತೆಯು ಮಾನ್ಯತೆ ನೀಡಿದೆ. ಮೊದಲ ಹಂತದಲ್ಲಿ ಯಜ್ಞವು ಸಾಮೂಹಿಕತೆಯಿಂದ ಕೂಡಿತ್ತು. ಒಬ್ಬ ಯಜಮಾನನ ಕಲ್ಪನೆಯು ನಂತರದ ಘಟ್ಟದ್ದು. ಮೊದಲು ಫಲಾನುಭವಿಗಳು ಇಡೀ ಸಮುದಾಯದವರು; ನಂತರದ ಫಲಾನುಭವಿ ಯಜ್ಞವನ್ನು ಆಯೋಜಿಸುವ ಯಜಮಾನ. ಪೂರ್ವ ಮೀಮಾಂಸೆಯು ಯಜಮಾನ ಕೇಂದ್ರಿತ ಯಜ್ಞವನ್ನು ವಿಶದೀಕರಿಸುತ್ತದೆ. ಬುಡಕಟ್ಟು ಜೀವನದ ಸಂದರ್ಭದ ಆಚರಣೆಗಳು ಸಮುದಾಯವು ನಡೆಸುವ ಯಜ್ಞಗಳು ಎನ್ನಬಹುದು. ಯಜ್ಞವು ನೀಡುತ್ತದೆನ್ನಲಾದ ಫಲವನ್ನು ನಮೂದಿಸುವಾಗ ಗೀತೆಯು ಅತಾರ್ಕಿಕವಾದ ಒಂದು ಗ್ರಹಿಕೆಯನ್ನು ಸಹಜ ಕ್ರಿಯೆಯೋ ಎಂಬಂತೆ ದಾಖಲಿಸಿದೆ. ಇದನ್ನು ಈಗಾಗಲೇ ನಾವು ಗಮನಿಸಿದ್ದೇ ವಾದರೂ ಪುನರುಕ್ತಿಯು ದೋಷವೆನಿಸದು : ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾತ್ ಅನ್ನಸಂಭವಃ। ಯಜ್ಞಾತ್ ಭವತಿ ಪರ್ಜನ್ಯಃ ಯಜ್ಞಃ ಕರ್ಮ ಸಮುದ್ಭವಃ॥ – ೩.೧೪. ಮಳೆಯಿಂದ ಬೆಳೆ ಮತ್ತು ಯಜ್ಞದಿಂದ ಮಳೆ ಎಂಬುದನ್ನು ಕಾರ್ಯ–ಕಾರಣ ಭಾವ ಎಂಬಂತೆ ಗೀತೆಯು ಮಂಡಿಸಿದೆ. ಮೊದಲನೆಯದು ಅನುಭವ ವೇದ್ಯ; ಆದರೆ ಎರಡನೆಯದು ಅನುಭವದಿಂದ ಸಾಬೀತಾಗಿಲ್ಲ. ಎರಡನ್ನೂ ಒಟ್ಟಾಗಿರಿಸಿ ಗೀತೆಯು ಅತಾರ್ಕಿಕ ಭಾವನೆ ಯನ್ನು ತಾರ್ಕಿಕ ಸಂಭವವೆಂಬಂತೆ ಚಿತ್ರಿಸಿಬಿಟ್ಟಿದೆ. ಗೀತೆಯು ಹೇಳಿದೆಯೆಂದು ಎಷ್ಟು ಯಜ್ಞ ಮಾಡಿದರೂ ಆ ಕಾರಣದಿಂದ ಮಳೆಯು ಸುರಿಯುವ ಸಾಧ್ಯತೆಯು ಸೊನ್ನೆಯೇ ಎಂಬುದು ಶುದ್ಧತರ್ಕ.

ಮೂರನೆಯ ಅಧ್ಯಾಯದ ಇನ್ನೊಂದು ಭಾಗವನ್ನು ಗಮನಿಸಬೇಕು : ಭಾಗಶಃ ಅದನ್ನು ಈ ಹಿಂದೆ 'ಲೋಕಸಂಗ್ರಹ' ತತ್ವದ ಚರ್ಚೆಯ ಸಂದರ್ಭದಲ್ಲಿ ಹೇಳಿಯಾಗಿದೆ. ಕರ್ಮವನ್ನು ಮೀರಿ ಬೆಳೆದಿದ್ದರೂ ಇತರರಿಗೆ ಮಾದರಿಯನ್ನು ಕಲ್ಪಿಸಿಕೊಡಲು ಜನಕ ನಂಥವರು ಸದಾ ಕರ್ಮನಿರತರಾಗಿಯೇ ಉಳಿದರು. ಏಕೆಂದರೆ, ಶ್ರೇಷ್ಠರು ಮಾಡಿದ್ದನ್ನು ಸಾಮಾನ್ಯರು ಅನುಕರಿಸುತ್ತಾರೆ ಮತ್ತು ಅನುಕರಿಸಲಿ ಎಂಬ ಕಾರಣ ದಿಂದ (೩.೨೧: ಯದ್ಯದಾಚರತಿ ಶ್ರೇಷ್ಠಃ ತತ್ತದೇವ ಇತರೋ ಜನಃ। ಸ ಯತ್ಪ್ರಮಾಣಂ ಕುರುತೇ ಲೋಕಃ ತದನುವರ್ತತೇ॥). ಗೀತೋಪದೇಶವನ್ನು ನೀಡುತ್ತಿರುವ ಶ್ರೀ ಭಗವಾನನು ನಿಜಕ್ಕೂ ಯಾವ ಕರ್ಮದಲ್ಲೂ ಭಾಗಿಯಾಗಬೇಕಾಗಿಲ್ಲ; ಏಕೆಂದರೆ ಈಗಾಗಲೇ ಸಿದ್ಧಿಸಿರದ ಏನನ್ನೂ ಅವನು ಪಡೆಯ ಬೇಕಾಗಿಲ್ಲ (೩.೨೨). ಆದರೂ ಅವನು ಕರ್ಮದಲ್ಲಿ ಭಾಗಿಯಾಗುತ್ತಾನಂತೆ. ಏಕೆಂದರೆ ಅವನು ಅಕರ್ಮಿ ಯಾದರೆ ಇತರ ಜನರೂ ಅಕರ್ಮಿಗಳಾಗಿಬಿಡುವ ಅಪಾಯವಿದೆ, ಎನ್ನುತ್ತಾನೆ ಭಗವಾನ್ (೩.೨೩). ಗೀತೆಯ ವಕ್ತೃವು ಮಹಾನ್ ದೇವತಾಪುರುಷ, ಆದ್ದರಿಂದ ಗೀತೋಕ್ತಿಗೆ ಪ್ರಾಶಸ್ತ್ಯವಿದೆ, ಅದರ ಮಾತು ಅನುಲ್ಲಂಘನೀಯ, ಎಂಬ ಸಂದೇಶವನ್ನು ಗೀತೆಯು ಆಗಾಗ್ಗೆ ಕೊಡುತ್ತಲೇ ಇರುತ್ತದೆ. ಜನಸಮುದಾಯದ ಮೇಲೆ ಗೀತೆಯ ಕರ್ತೃವು ಹೇಗೆ ಪ್ರಭಾವ ಬೀರುತ್ತಾನೆಂಬುದಕ್ಕೆ ಇದೊಂದು ನಿದರ್ಶನ. ಅವನೇ ಹೇಳಿಕೊಳ್ಳುವಂತೆ, ಅವನ (ಅಂದರೆ, ಭಗವಾನನ) ಮಾತನ್ನು ಅನುಷ್ಠಾನಕ್ಕೆ ತರದವರು "ಸರ್ವಜ್ಞಾನ ವಿಮೂಢರು" (೩.೩೨). ಗೀತೆಯು ಅಯಸ್ಕಾಂತದಂತೆ ಮನಸ್ಸನ್ನು ಸೆರೆ ಹಿಡಿಯುತ್ತಿದ್ದಂತೆ ಗೀತೆಯ ಕರ್ತೃವು ಮತ್ತೆ ತನ್ನ ಮೂಲ ಅಜೆಂಡಾಕ್ಕೆ ಬಂದುಬಿಡುತ್ತಾನೆ. ಅದು ಸ್ವ–ಧರ್ಮದ (ಅಂದರೆ, ಆಯಾ ವರ್ಣಕ್ಕೆ ನಿಗದಿ ಯಾಗಿರುವ ಕೆಲಸದ) ಪರಿಪಾಲನೆ. "ತನ್ನ ಧರ್ಮವು (ಅಂದರೆ ವರ್ಣಧರ್ಮವು) ಕಲುಷಿತವಾದದ್ದೆಂದು ಎನಿಸಿದರೂ ಪರ–ಧರ್ಮಕ್ಕಿಂತಲೂ ಸ್ವ–ಧರ್ಮದ ಪಾಲನೆಯು ಶ್ರೇಯಸ್ಕರ. ಸ್ವ–ಧರ್ಮದ ಪಾಲನೆಯಲ್ಲಿ ಹಿನ್ನಡೆಗಿಂತಲೂ ಸಾವು ಉತ್ತಮ, ಏಕೆಂದರೆ ಪರ–ಧರ್ಮವು ಭಯಾನಕವಾದ್ದು" ಎನ್ನುತ್ತದೆ ಭಗವದ್ಗೀತೆ (೩.೩೫:ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸು–ಅನುಷ್ಠಿತಾತ್। ಸ್ವ–ಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ॥).

ತತ್ತ್ವಜ್ಞಾನವು ಗೀತೆಯಲ್ಲಿ ಮುಕ್ತಾಯವಾಗುವುದು ಶ್ರೇಣೀಕೃತ ಸಮಾಜದಲ್ಲಿ ಕೆಳಹಂತದವರು ಉಸಿರೆತ್ತದೆ ತಮ್ಮ "ಶ್ರೇಷ್ಠವಾದ ಸ್ವ–ಧರ್ಮವನ್ನು" ಪರಿಪಾಲಿಸು ವುದರಲ್ಲಿ ಹಿಂಜರಿಕೆ ಕೂಡದು ಎಂಬ ಸಂದೇಶದಿಂದ. ಗೀತೆಯಲ್ಲಿ ಈ ಭಾವವು ಎಷ್ಟು ಬಾರಿ ಪ್ರಕಟವಾಗಿದೆ ಎಂಬುದನ್ನು ಪಟ್ಟಿ ಮಾಡಿದರೆ ಗ್ರಂಥದ ಮೂಲೋದ್ದೇಶದ ಪರಿಚಯವಾದೀತು. ಹಾಗೆಂದರೆ ಮಿಕ್ಕಿದ್ದೆಲ್ಲಾ ಜೊಳ್ಳು ಎಂದರ್ಥವಲ್ಲ. ಕಾಳು ಮತ್ತು ಜೊಳ್ಳು ಮಿಶ್ರಿತವಾದ ಗ್ರಂಥ ಗೀತೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ
ಹಂತ ಬೆಂಗಳೂರು – ೫೬೦ ೦೮೫



# ಅಂಬೇಡ್ಕರ ಓದಿನ ಹಸಿವು ಮತ್ತು ಜಾತಿ !

ಆ ಹುಡುಗನಿಗೆ ತಾನೂ ಓದಬೇಕೆಂಬಾಸೆ. ಆಗಿನ ಕಾಲದಲ್ಲಿ ದಲಿತರನ್ನು ಅಕ್ಷರಶಃ ಮೈಲಿಗೆಯವರೆಂದು ನಂಬಿದ್ದವರ ಪ್ರಮಾಣವೇ ಜಾಸ್ತಿ. ದಲಿತರ ಕೇರಿಗೆ ಹೋಗುವುದಿರಲಿ, ಆ ಕೇರಿಯನ್ನು ಸೀಳಿ ಹೊರಟ ಸಾರ್ವಜನಿಕ ದಾರಿಯಲ್ಲಿ ನಡೆಯುವುದೂ ಕೂಡ ಆಕ್ಷೇಪಾರ್ಹ ಎಂಬಂಥ ಕುರುಡು ನಂಬಿಕೆ. ಅಂಥ ಕಾಲದಲ್ಲಿ ಆ ಹುಡುಗನಿಗೆ ತಾನೂ ಓದಬೇಕೆಂಬ ಹಸಿವು.

ಆತ ಶಾಲೆಗೆ ಹೋಗುವಾಗ ಆಗಿರುವ ಕೆಟ್ಟ ಅನುಭವ ಅವನಿಗೆ ಪರಿಹಾರದ ಹೊಸ ಹೊಸ ದಾರಿಯನ್ನು ಕಲಿಸಿಕೊಡುತ್ತಿತ್ತು. ಅದರ ಒಂದು ಭಾಗವಾಗಿ ಆತ ತಾನು ಕುಳಿತುಕೊಳ್ಳುವ ಸ್ಥಳಕ್ಕೆ ಅಗತ್ಯವಿರುವಷ್ಟು ಅಗಲದ ಚಾಪೆಯನ್ನು ತಾನೇ ಕಂಕುಳಲ್ಲಿಟ್ಟುಕೊಂಡು ಹೊರಡುತ್ತಿದ್ದ. ಶಾಲೆಯಲ್ಲಿ ಮೇಲ್ವರ್ಗದ ಮಕ್ಕಳೇ ಜಾಸ್ತಿ. ಅವರು ಮುಟ್ಟಿಸಿಕೊಳ್ಳುವುದಿರಲಿ, ಅವನನ್ನು ಹಾದುಬಂದ ಗಾಳಿ ಸೋಂಕಿದರೂ ಸಂಕಟದಿಂದ ಚಡಪಡಿಸುತ್ತಿದ್ದರು. ಅವನಿಗೆ ಶಾಲೆಯ ಬೋರ್ಡ್ ಮುಟ್ಟುವ ಹಕ್ಕನ್ನು ನಿಷೇಧಿಸಲಾಗಿತ್ತು. ಗುರುಗಳ ಕರೆಯ ಮೇರೆಗೆ ಅವನೇನಾದರೂ ಚಾಕ್‌ಪೀಸ್ ಹಿಡಿದು ಬೋರ್ಡ್ ಮುಟ್ಟ ಹೋದರೆ ಅನಾಹುತವೇ ಘಟಿಸಿದ ಹಾಗೆ ಮೇಲ್ವರ್ಗದ ಮಕ್ಕಳು ದಡಬಡ ಓಡಿಬಂದು ಬೋರ್ಡಿನ ಹಿಂಬದಿಗೆ ಇರುವ ತಮ್ಮ ಡಬ್ಬಿಗಳನ್ನು ಎತ್ತಿಕೊಂಡು ಹೋಗುತ್ತಿದ್ದರು. ಆತನಿಗೆ ಬಾಯಾರಿಕೆಯಾದರೆ ಕುಡಿಯಲು ನೀರು ಕೊಡುವವರಿರಲಿಲ್ಲ. ದೂರದಲ್ಲಿ ಬಗ್ಗಿ ಬೊಗಸೆಯೊಡ್ಡಿದಾಗ ಕರುಣೆ ಹುಟ್ಟಿದ ಅವನ ಗುರುಗಳು ನೀರುಣಿಸುತ್ತಿದ್ದರು.

ಹೀಗೆ ಬೆಳೆದ ಆತ ಮುಂದೆ ಇಂಡಿಯಾದ ಪ್ರಜಾಪ್ರಭುತ್ವಕ್ಕೆ ಒಂದು ನಿರ್ದಿಷ್ಟ ಶಿಸ್ತು ಎಂಬಂತೆ ಸಂವಿಧಾನವನ್ನೇ ಕೊಡುತ್ತಾನೆ. ಅಂಬೇಡ್ಕರ್ ಎಂಬುದು ಒಂದು ಹೆಸರೇ ? ಅಥವಾ ಒಂದು ಸಂಕೇತವೇ ? ನನಗೆ ಅನಿಸುತ್ತದೆ ಅದು ಬರೀ ಹೆಸರಲ್ಲ; ಈಗ ಅದು ಒಂದು ಸಂಕೇತ. ಒಂದು ಧ್ವನಿತರಂಗ. ಅದು ಕ್ರಾಂತಿಯ ಧ್ವನಿ. ಅದು ಬದಲಾವಣೆಯ ಧ್ವನಿ. ಅದು ಪ್ರತಿಭಟನೆಯ ಧ್ವನಿ... ಇನ್ನೂ ಇನ್ನೂ ಅನೇಕ.

ಒಂದು ಕಡೆ ಡಾ॥ ಅಂಬೇಡ್ಕರ್ ಹೇಳುತ್ತಾರೆ : "ಹಿಂದು ಸಮಾಜವು ಏಣಿಯಿಲ್ಲದ, ಪ್ರವೇಶದ್ವಾರವಿಲ್ಲದ ಅನೇಕ ಮಹಡಿಗಳ ಗೋಪುರದಂತಿದೆ." ಸಾವಿರ ವರ್ಷಗಳು ಸರಿದು – ಹೋದರೂ ಮರೆತುಹೋಗದ ಮಾತು ಇದು ! ಭಾರತೀಯ ಸಮಾಜವ್ಯವಸ್ಥೆ ಹೇಗಿದೆಯೆಂದರೆ, ಅದು ಅಸಮಾನತೆಯ ತವರು ಇದ್ದಂತೆ. ಅದು ಬಹುಮಹಡಿಗಳ ಗೋಪುರವೆಂಬುದೇನೋ ನಿಜ. ಆದರೆ ಆ ಬಹುಮಹಡಿಯಲ್ಲಿ ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗುವಂಥ ಪ್ರವೇಶದ್ವಾರಗಳೇ ಇಲ್ಲ ! ಆಚೆಯ ಗಾಳಿ ಈಚೆ ಕೋಣೆಯನ್ನು ಸೋಂಕುವಂತಿಲ್ಲ ! ಅಚ್ಚರಿಯ ಸಂಗತಿಯೆಂದರೆ, ಬಹುಮಹಡಿಗಳ ಈ ಸಮಾಜದಲ್ಲಿ ಆ ಮಹಡಿಗಳನ್ನು ತಲುಪಲು ಏಣಿಯ ಅನುಕೂಲವೂ ಇಲ್ಲ !

ಇದು ಸುಮಾರು ಮುಕ್ಕಾಲು ಶತಮಾನದಷ್ಟು ಹಿಂದಿನ ಮಾತು. ಅಂಬೇಡ್ಕರ್ ಆ ಸಂದರ್ಭದಲ್ಲಿ ಹೇಳಿದ್ದು. ಈಗ ಕಾಲ ಬದಲಾಗಿರುವುದು ನಿಜ. ಆದರೆ ಜಾತಿವ್ಯವಸ್ಥೆ ಸಂಪೂರ್ಣ ಬದಲಾಗಿಲ್ಲ. ಸುಖ–ದುಃಖ ಹಂಚಿಕೊಳ್ಳಲೂ ತಮ್ಮ ಜಾತಿಯವರೇ ಮುಖ್ಯವಾಗಿ ಬೇಕು. ಪರಸ್ಪರ ಭಾವನೆಗಳ ವಿನಿಮಯಕ್ಕೆ, ಕೂಡಿ ಕೆಲಸ ಮಾಡುವುದಕ್ಕೆ ಹುಟ್ಟಿಬಂದದ್ದು ಜಾತಿ. ತಮ್ಮ ಮಂದಿ ತಮಗೆ ಹೆಚ್ಚು ಸಮೀಪದವರಾಗಿ ಕಾಣುವುದು ತಪ್ಪೇನೂ ಅಲ್ಲ. ಆದರೆ ಅಧಿಕಾರವನ್ನು ಹಂಚಿಕೊಳ್ಳುವುದಕ್ಕೆ, ಶಿಕ್ಷಣ ಪಡೆಯುವುದಕ್ಕೆ 'ಮೀಸಲಾತಿ' ಎಂಬ ನೆರಳು ಮುಂದುವರಿಯಲೇಬೇಕಾದಂಥ ಸ್ಥಿತಿ ಇದೆಯಲ್ಲ, ಇದು ಏನನ್ನು ಹೇಳುತ್ತದೆ ? ಅಂದರೆ ಈಗಲೂ ತಳವರ್ಗದ ಬಹುದೊಡ್ಡ ಸಂಖ್ಯೆಯ ಮಂದಿ ಪ್ರಗತಿಯ, ಚಲನೆಯ ಮುಖ್ಯವಾಹಿನಿಗೆ ಸೇರಲಾಗಲೇ ಇಲ್ಲ ಎಂದರ್ಥ ತಾನೇ ?

ಡಾ॥ ಬಿ. ಆರ್. ಅಂಬೇಡ್ಕರ್ ಮುಟ್ಟಿದ ಚೌಡರ ಕೆರೆಯ ಕಥೆ ನಾಡಿಗೇ, ಜಗತ್ತಿಗೇ ಗೊತ್ತಿದೆ. ಇಂಥ 'ಚೌಡರ ಕೆರೆಗಳು' ಈ ದೇಶದಲ್ಲಿ ಇನ್ನೆಷ್ಟಿಲ್ಲ ?... ಕತ್ತಲ ಲೋಕವೊಂದು ಕಣ್ಣಿಗೆ ಕಾಣದ ಹಾಗೆ ತನ್ನದೇ ಆದ ಬದುಕಿನ ತಂತ್ರವನ್ನು ಹೆಣೆಯುತ್ತ ನಡೆದಿದೆ. ನಾವು ಆ ತಂತ್ರವನ್ನು ಬುಡಮಟ್ಟ ತೊಡೆದುಹಾಕಬೇಕಾಗಿದೆ.

ಜಾತಿ ವ್ಯವಸ್ಥೆ ಹೋಗಲೇಬೇಕು ಎಂದು ಸಾವಿರ ಸಾವಿರ ಕೂಗು ಹಾಕಿದರೂ ಅದು ಇಂದು ಹೋಗುವ ಸ್ಥಿತಿಯಲ್ಲಿಲ್ಲ. ಜಾತಿ ಹುಟ್ಟಿನಿಂದ ಬಂದದ್ದು. ಅದು ನಮ್ಮ ಮೈಗಂಟಿಕೊಂಡ ಚರ್ಮದಂತೆ. ನಾನು ಆ ಚರ್ಮವನ್ನೇ ಕಿತ್ತು ಎಸೆಯಿರಿ ಎನ್ನಲಾರೆ. ಆದರೆ ಬದುಕಿನ ದೈನಂದಿನ ಬೇಕು–ಬೇಡಗಳನ್ನು ಜಾತಿಯ ಲೆಕ್ಕಾಚಾರದಲ್ಲಿ ತೂಗುವುದು ಎಷ್ಟು ಸರಿ ? ಈ ಸಂದರ್ಭದಲ್ಲಿ ನನಗೆ ಕವಿ ದಿನಕರ ದೇಸಾಯಿ ಅವರ ಒಂದು ಚೌಪದಿ ನೆನಪಾಗುತ್ತದೆ :

*ಮೊನ್ನೆಯೇ ಹರಿದುಹಾಕಿದೆನು ಜನಿವಾರ*
*ಜನಿವಾರ ಜಾತಿವಾದದ ಸೂತ್ರಧಾರ*
*ಜಾತಿ ಎಂಬುದು ಕೋತಿ ಮಾನಸಿಕ ಗೋಡೆ*
*ಈ ಗೋಡೆ ಎನ್ನುವುದು ಭಾರತದ ಪೀಡೆ*

ದಿನಕರ ದೇಸಾಯಿ ಜನಿವಾರ ಹರಿದುಹಾಕಿದ್ದು ತಮ್ಮ ೧೨ನೇ ವಯಸ್ಸಿನಲ್ಲಿ. ಹೊಸ ತಲೆಮಾರು ಹೊಸ ಹೊಸ ಪ್ರವೇಶದ್ವಾರಗಳನ್ನು ಕಂಡುಕೊಳ್ಳತೊಡಗಿದ್ದು ಇತ್ತೀಚಿನ ವರ್ಷಗಳಲ್ಲಿ. ಇದು ನನಗೆ ಸಂತೋಷ ಕೊಡುತ್ತಿದೆ. ಅಂಬೇಡ್ಕರರಂಥ ಮಹಾನ್ ಚೇತನದ ಸಾಹಿತ್ಯ ಮತ್ತು ಭಾಷಣಗಳು ಹತ್ತಾರು ಸಂಪುಟಗಳ ರೂಪದಲ್ಲಿ ನಮ್ಮ ಮುಂದಿವೆ. ಅವನ್ನು ಓದೋಣ, ಗ್ರಹಿಸೋಣ.

ಅಂಬೇಡ್ಕರ್ ಮತ್ತು ಸಂವಿಧಾನದ ಕರಡನ್ನು ಅನುಮೋದಿಸಿದ ಈ ದೇಶದ ದೂರದೃಷ್ಟಿಯ ನೇತಾರರು ಈಗ ಇಲ್ಲ, ನಿಜ. ಆದರೆ ಅವರು ಊಹಿಸಿದ ಬಡತನ ಮತ್ತು ದಾರಿದ್ರ್ಯದ ದೀರ್ಘಕಾಲಾವಧಿಯ ಹಾಸಿಗೆಯ ಮೇಲೆ ನಾವಿನ್ನೂ ಮಲಗಿಯೇ ಇದ್ದೇವಲ್ಲವೇ... ಮಲಗಿದಲ್ಲಿಂದಲೇ ಮೀಸಲಾತಿ ಬೇಕೋ ಬೇಡವೋ ಎಂಬ ಬಗ್ಗೆ ಚರ್ಚೆ ಮಾಡುತ್ತೇವೆ. ಜಗಳವಾಡುತ್ತೇವೆ.

ಹಸಿವಿನಂಥ ದೊಡ್ಡ ಶತ್ರು ಈ ಜಗತ್ತಿನಲ್ಲಿ ಬೇರೊಂದಿಲ್ಲ; ಆ ಹಸಿವು ಇಡಿಯಾಗಿ ದೂರವಾದ ದಿನ ಮೀಸಲಾತಿಯ ಹಂಗೇ ಇರುವುದಿಲ್ಲ. ಇದನ್ನು ನಾವೆಲ್ಲ ಅರ್ಥಮಾಡಿಕೊಳ್ಳುವಲ್ಲಿಯೇ ಅಂಬೇಡ್ಕರರನ್ನು ಸರಿಯಾಗಿ ತಿಳಿದುಕೊಂಡಂತಾಗುತ್ತದೆ. ಮನೆಗೊಬ್ಬ ಅಂಬೇಡ್ಕರ್ ಹುಟ್ಟಿಬರುವ ದಿನಕ್ಕಾಗಿ ನಾನಂತೂ ಕಾಯುತ್ತಿದ್ದೇನೆ. ನಾನು ಆಶಾವಾದಿ; ಅದು ಈಡೇರಲಿ ಎಂದು ಬೇಡುತ್ತೇನೆ.

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲ – ೫೮೧ ೩೧೪
ಉತ್ತರ ಕನ್ನಡ ಜಿಲ್ಲೆ

ಜಿ. ರಾಮಕೃಷ್ಣ

# ಖೋತಿ ವಿರುದ್ಧದ ಹೋರಾಟ

ಕೊಂಕಣ, ಮಹಾರಾಷ್ಟ್ರದ ಒಂದು ವಿಶಾಲ ಪ್ರದೇಶ. ಬೆಟ್ಟಗುಡ್ಡಗಳು ಮತ್ತು ನದಿಗಳು ಈ ಪ್ರದೇಶದ ವೈಶಿಷ್ಟ್ಯ. ಶಿವಾಜಿಯ ರಾಯಗಢ ಇರುವುದು ಕೊಂಕಣದ ಮಹಾಡ್ ಬಳಿ. ಕಳೆದ ಶತಮಾನದಲ್ಲಿ ಕೊಂಕಣವು ಮೂರು "ಭಾರತ ರತ್ನ"ಗಳನ್ನು ನೀಡಿತ್ತು: ಡಿ. ಡಿ. ಕರ್ವೆ, ಬಿ. ಆರ್. ಅಂಬೇಡ್ಕರ್ ಮತ್ತು ಪಿ. ವಿ. ಕಾಣೆ. ಅದೇ ಕೊಂಕಣದಲ್ಲಿ ಮತ್ತು ಅದೇ ಶತಮಾನದಲ್ಲಿ ಖೋತಿ ಎಂಬ ವ್ಯವಸ್ಥೆಯು ದುಡಿಯುವ ರೈತ ಸಮುದಾಯವನ್ನು ಕಂಗಾಲಾಗಿಸಿತ್ತು. ಮರಾಠಿ ಸಾಹಿತ್ಯದಲ್ಲಿ ಅದರಿಂದ ಉಂಟಾದ ವ್ಯಥೆಯನ್ನು ಅನೇಕರು ದಾಖಲಿಸಿದ್ದಾರೆ. ಅಂತಹ ಭಯಂಕರ ಶೋಷಕ ವ್ಯವಸ್ಥೆಯ ಉತ್ಪಾಟನೆಗೆ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು ನಾಯಕತ್ವ ನೀಡಿದ್ದು ಒಂದು ಐತಿಹಾಸಿಕ ಘಟನೆ. ಹೋರಾಟದಲ್ಲಿ ಅವರೊಡನೆ ಎಲ್ಲ ಜಾತಿಕಟ್ಟಲೆಗಳನ್ನೂ ಮೀರಿ ದಮನಿತರ ವಿಮುಕ್ತಿಗೆ ಪಣತೊಟ್ಟು ಸಂಘಟನಾತ್ಮಕ ಸಂಘರ್ಷವನ್ನು ಆಯೋಜಿಸಿದವರಿದ್ದಾರೆ. ಭಾಯಿ ಅನಂತರಾವ್ ಚಿತ್ರೆ, ಸುರ್ಬಾನಾನಾ ಎಂದೇ ಕರೆಯಲ್ಪಡುತ್ತಿದ್ದ ಸುರೇಂದ್ರನಾಥ ಗೋವಿಂದ ಟಿಪ್ನಿಸ್, ನಾನಾ ಪಾಟೀಲ ಎಂದು ಗುರುತಿಸಲ್ಪಟ್ಟಿದ್ದ ನಾರಾಯಣ ನಾಗು ಪಾಟೀಲ, ಬೌದ್ಧಧರ್ಮಕ್ಕೆ ಮತಾಂತರ ಹೊಂದಿದ್ದ ವಕೀಲ ಚಂದ್ರಕಾಂತ ಅಧಿಕಾರಿ, ಹೋರಾಟವನ್ನು ರೂಪಿಸಿದವರಲ್ಲಿ ಪ್ರಮುಖರು. ಅಂಬೇಡ್ಕರ್ ಸ್ಥಾಪಿಸಿದ್ದ ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯಲ್ಲಿ ಇವರೆಲ್ಲಾ ಉತ್ಸಾಹದಿಂದ ದುಡಿದಿದ್ದವರು.

ಡಾ॥ ಅಂಬೇಡ್ಕರ್ ಅವರು ಸಾಮಾಜಿಕ ಕ್ರಾಂತಿಗಾಗಿ ಮಹಾಡ್‌ನಲ್ಲಿ ಬೃಹತ್ ಸಮ್ಮೇಳನ ಆಯೋಜಿಸಿದ್ದು ಡಿಸೆಂಬರ್ ೧೯೨೭ರಲ್ಲಿ. ಅದಕ್ಕೆ ಮುನ್ನ ಮಹಾಡಿನ 'ಚೌಧಾರ್ ತಳೆ' ಚಳುವಳಿ ಜರುಗಿತ್ತು. ಅದೊಂದು ದೊಡ್ಡ ಕಲ್ಯಾಣಿ. ನಾಯಿ, ಹಂದಿ, ಮುಂತಾದ ಪ್ರಾಣಿಗಳು ಆ ಕಲ್ಯಾಣಿಯಲ್ಲಿ ನೀರು ಕುಡಿಯಬಹುದಿತ್ತು, ಆದರೆ ಮಹಾರರು ಅಲ್ಲಿ ನೀರು ಮುಟ್ಟುವಂತಿರಲಿಲ್ಲ. ಅಂಬೇಡ್ಕರ್ ಅವರ ಮೊಟ್ಟಮೊದಲ ಸಾರ್ವಜನಿಕ ಚಳುವಳಿ ಆ ಕಲ್ಯಾಣಿಯಲ್ಲಿ ಮಹಾರರು ಪ್ರವೇಶ ಪಡೆಯುವುದಕ್ಕಾಗಿ ನಡೆದಿತ್ತು. ಊರಿನ ಮೇಲ್ಜಾತಿಯ ಅನೇಕರು ಅದನ್ನು ವಿರೋಧಿಸಿದ್ದರು, ಆದರೆ ಅಂಬೇಡ್ಕರ್ ಅವರ ಶಾಂತಿಯುತ ಚಳುವಳಿಯು ಯಶಸ್ವಿಯಾಯಿತು. ೧೯೨೭ರ ಬೃಹತ್ ಸಭೆಯ ಸಂದರ್ಭದಲ್ಲಿ ಅಂಬೇಡ್ಕರ್ ಅವರ ಸಮ್ಮುಖದಲ್ಲಿ ಬಾಪುಸಾಹೇಬ್ ಸಹಸ್ರಬುದ್ಧೆ ಎಂಬ ಬ್ರಾಹ್ಮಣ ಮನುಸ್ಮೃತಿಗೆ ಬೆಂಕಿ ಕೊಟ್ಟರು. ಅಸ್ಪೃಶ್ಯರೆನ್ನಲಾದ ಮಹಾರರೊಡನೆ ಅಸ್ಪೃಶ್ಯರಲ್ಲದ ನೂರಾರು ಜನ ಸಭೆಯಲ್ಲಿ ಪಾಲ್ಗೊಂಡಿದ್ದರು. ಕೊಂಕಣದಲ್ಲೆಲ್ಲೂ ಅಷ್ಟು ದೊಡ್ಡ ಪ್ರತಿಭಟನಾ ಸಮಾವೇಶವು ಆವರೆಗೆ ಜರುಗಿರಲಿಲ್ಲ.




ತಮ್ಮ ಡಾಕ್ಟರೇಟ್ ಪದವಿಗೆ ಅಂಬೇಡ್ಕರ್ ಅವರು ಆಯ್ದುಕೊಂಡಿದ್ದ ವಿಷಯವು ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರಕ್ಕೆ ಸಂಬಂಧಿಸಿದ್ದಂಥದು. ಅವರ ಮುಂದಿದ್ದ ಮೂಲಭೂತ ಪ್ರಶ್ನೆ ಇದು: ಕೃಷಿ ಭೂಮಿಯು ತುಂಡುತುಂಡಾಗುತ್ತ ಹೋದುದೇಕೆ? ಕೃಷಿ ಉತ್ಪನ್ನಗಳ ದೃಷ್ಟಿಯಿಂದ ಭೂಮಿಯ ತುಂಡರಿಸುವಿಕೆಯು ಅಸಾಧುವೆಂದು ಅವರಿಗೆ ತೋರಿತ್ತು. ೧೯೧೮ರಷ್ಟು ಹಿಂದೆಯೇ ಇದನ್ನು ಕುರಿತು ಅವರೊಂದು ದೀರ್ಘ ಪ್ರಬಂಧವನ್ನು

ಕೃಷಿ ಕಾರ್ಮಿಕರು ಮತ್ತು ಗೇಣಿದಾರರು ಅತ್ಯಂತ ಕರಾಳ ದೌರ್ಜನ್ಯಗಳಿಗೆ ಗುರಿಯಾಗುವುದು ಅನೇಕ ದೇಶಗಳಲ್ಲಿ ನಡೆದಿದೆ. ನಮ್ಮ ಶ್ರೇಣೀಕೃತ ಸಮಾಜದಲ್ಲಿ ಬಹುಪಾಲು ಜನ ಶತಮಾನಗಳ ಕಾಲ ಕ್ರೌರ್ಯವನ್ನು ಸಹಿಸುತ್ತಾ ಬಂದಿದ್ದಾರೆ. ಊಳಿಗಮಾನ್ಯ ವ್ಯವಸ್ಥೆಯು ವಿವಿಧ ಸ್ವರೂಪಗಳನ್ನು ತಾಳುತ್ತದೆ, ಆದರೆ ಎಲ್ಲ ರೂಪಗಳಲ್ಲೂ ಹಿಂಸಾತ್ಮಕತೆಯನ್ನು ಉಳಿಸಿಕೊಂಡಿರುತ್ತದೆ. ಜಮೀನ್ದಾರೀ ಪದ್ಧತಿಗಳಲ್ಲಿ ಖೋತಿ ಪದ್ಧತಿಯು ಅತಿ ಹೀನಾಯವಾದ್ದು. ಮಹಾರಾಷ್ಟ್ರದ ಕೊಂಕಣದಲ್ಲಿ ಇದು ದೀರ್ಘಕಾಲ ಚಾಲ್ತಿಯಲ್ಲಿತ್ತು. ತುಳಿತಕ್ಕೆ ಸಿಲುಕಿದ ಜನತೆಯ ಬಿಡುಗಡೆಗೆ ಅಗ್ರನಾಯಕ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು ಆ ಹೊಲಸು ವ್ಯವಸ್ಥೆಯ ವಿರುದ್ಧ ಉಗ್ರ ಹೋರಾಟವನ್ನು ಸಂಘಟಿಸಿ ವ್ಯವಸ್ಥೆಯನ್ನು ಬುಡಮೇಲು ಮಾಡಿದರು. ಹೋರಾಟದ ನಾಯಕತ್ವದಲ್ಲಿ ಅವರೊಡನೆ ಭಾಯಿ ಚಿತ್ರೆ, ಸುರ್ಬಾನಾನಾ, ನಾರಾಯಣ ನಾಗು ಪಾಟೀಲ, ಚಂದ್ರಕಾಂತ ಅಧಿಕಾರಿ, ಮುಂತಾದವರಿದ್ದರು. ಈ ಮಹಾನ್ ಚಳುವಳಿಯನ್ನು ಕುರಿತು ಚಂದ್ರಕಾಂತ ಅಧಿಕಾರಿ ಮರಾಠಿಯಲ್ಲಿ ಒಂದು ಪುಸ್ತಕ ಬರೆದಿದ್ದಾರೆ. ಆ ಪುಸ್ತಕದ ಆಂಗ್ಲಭಾಷಾ ಆವೃತ್ತಿಯನ್ನು ಮಾ - ಲೆ ಪ್ರಕಾಶನವು ೨೦೧೩ರಲ್ಲಿ ಪ್ರಕಟಿಸಿತ್ತು.

"ಇಂಡಿಯನ್ ಇಕನಾಮಿಕ್ ಸೊಸೈಟಿ"ಯ ನಿಯತಕಾಲಿಕೆಯಲ್ಲಿ ಪ್ರಕಟಿಸಿದ್ದರು. ಭೂಮಿಯ ತುಂಡರಿಸುವಿಕೆಗೆ ಮೂಲಕಾರಣ ವಂಶಾನುಕ್ರಮ ಉತ್ತರಾಧಿಕಾರದ ಹಕ್ಕು, ಆದರೆ ಅದರಿಂದ ಉತ್ಪನ್ನವು ಕಡಿಮೆ ಮಟ್ಟದ್ದಾಗುತ್ತದೆ. ಹಾಗಿದ್ದರೆ ಭೂಮಿಯನ್ನು ಒಟ್ಟುಮಾಡಿದರೆ ಆರ್ಥಿಕವಾಗಿ ಎಲ್ಲವೂ ಸುಧಾರಿತವಾದೀತೆ? ಅಂಬೇಡ್ಕರ್ ಹೇಳಿದರು, "ಇಲ್ಲ, ಕೇವಲ ಒಟ್ಟುಮಾಡಿದರೆ ಪರಿಣಾಮವು ಉತ್ತಮವಾಗುವುದಿಲ್ಲ", ಎಂದು. ಬದಲಾಗಿ, ಕೃಷಿಯನ್ನು ಉದ್ಯಮವನ್ನಾಗಿ ಪರಿವರ್ತಿಸುವುದು ಅಗತ್ಯವೆಂದು ಅವರು ಪ್ರತಿಪಾದಿಸಿದ್ದರು. ಉದ್ಯಮಗಳು ಎರಡು ವಿಧ: ಪ್ರಾಥಮ್ಯ ಉಳ್ಳದ್ದು ಮತ್ತು ದ್ವಿತೀಯಕವಾದ್ದು; ಕೃಷಿಯು ಪ್ರಾಥಮ್ಯ ಪಡೆಯಬೇಕಾದ ಉದ್ಯಮ. ಕೃಷಿಯು ಶಕ್ತಿಯುತವಾಗಿ ಬಾಳಬೇಕಾದರೆ ಅದಕ್ಕೆ ತೊಡಗಿಸಿದ ಮೊತ್ತವು ಅದರಿಂದ ದೊರೆಯುವ ಆದಾಯಕ್ಕಿಂತಲೂ ಕಡಿಮೆಯಾಗಬಾರದು. ಈ ಗ್ರಹಿಕೆಯ ಹಿನ್ನೆಲೆಯಲ್ಲಿ ಅಂಬೇಡ್ಕರ್ ೧೯೨೭ರ ಡಿಸೆಂಬರ್‌ನಲ್ಲಿ ನಡೆದ ಎರಡನೆಯ ಮಹಾಡ್ ಪರಿಷತ್ತಿನಲ್ಲಿ ನುಡಿದ ಮಾತುಗಳನ್ನು ಗಮನಿಸಬೇಕು: "ಅಸ್ಪೃಶ್ಯತೆಯು ಸಾಮಾನ್ಯ ವಿಷಯವಲ್ಲ. ಬಡತನ ಮತ್ತು ಕೀಳುತನಗಳಿಗೆ ಅದು ಮೂಲ. ಅದರಿಂದಾಗಿ ನಾವು ಸೊರಗಿದ್ದೇವೆ. ...ವ್ಯಕ್ತಿಯ ಆಂತರಿಕ ಗುಣಗಳೆಲ್ಲಾ ಪ್ರಫುಲ್ಲವಾಗಿ ಹೊಮ್ಮಲು ಮಾನವರನ್ನೆಲ್ಲಾ ಸಮಾನತೆಯಿಂದ ಕಾಣಬೇಕು. ...ಫ್ರಾನ್ಸಿನ ಕ್ರಾಂತಿಯನಂತರ ಘಟಿಸಿದ ಸಾವುನೋವುಗಳಿಗೆ ಕ್ರಾಂತಿಯನ್ನು ದೂಷಿಸುವವರಿದ್ದಾರೆ; ಆದರೆ ಉಚ್ಚ ವರ್ಗದವರು ಮತ್ತು ದೊರೆ ಜನತೆಗೆ ಮೋಸವೆಸಗದಿದ್ದಿದ್ದರೆ ಜನರ ಕಡೆಯಿಂದ ಹಿಂಸೆ ನಡೆಯುತ್ತಿರಲಿಲ್ಲ. ನಮ್ಮ ದೇಶದಲ್ಲಿ ಚಾತುರ್ವರ್ಣ್ಯವನ್ನು ತೊಡೆದುಹಾಕದೆ ಅಸ್ಪೃಶ್ಯತೆಯ ನಿರ್ಮೂಲನೆಯು ಸಾಧ್ಯವಿಲ್ಲ." ಅಂದರೆ, ಸಮಾನತೆಯೊಂದೇ ವ್ಯಕ್ತಿಯ ಗುಣಗಳನ್ನೆಲ್ಲಾ ಸ್ವಚ್ಛಗೊಳಿಸುವುದಿಲ್ಲ; ಆದರೆ ಸಮಾನತೆ ಇಲ್ಲದೆ ವ್ಯಕ್ತಿಯಲ್ಲಿ ಸುಪ್ತವಾಗಿರುವ ಸಹಜ ಗುಣಗಳೆಲ್ಲಾ ಪೂರ್ತಿಯಾಗಿ ವ್ಯಕ್ತವಾಗಲಾರವು. ವರ್ಣ ವಿಭಜನೆಯು ಸಾಮಾಜಿಕ ಅಸಮಾನತೆಯನ್ನು ಸೃಷ್ಟಿಸಿದೆ; ಆದ್ದರಿಂದ ಅಂತಹ ವಿಭಜನೆಯನ್ನು ಉತ್ಪಾಟಿಸದೆ ಸಾಮಾಜಿಕ ಸಮಾನತೆಯನ್ನು ಸಾಧಿಸಲಾಗುವುದಿಲ್ಲ. ಡಾ॥ ಅಂಬೇಡ್ಕರ್ ಅವರು ಆರ್ಥಿಕ ಸಮಾನತೆಗೆ ವಿಶೇಷವಾಗಿ ಒತ್ತುಕೊಟ್ಟಿದ್ದು ಈ ಕಾರಣದಿಂದಲೇ. ಏಪ್ರಿಲ್ ೧೯೨೯ರಲ್ಲಿ ಅವರು ರತ್ನಗಿರಿ ಜಿಲ್ಲೆಯ ಕೃಷಿಕ ಸಮ್ಮೇಳನದ ಅಧ್ಯಕ್ಷರಾಗಿ ಹೇಳಿದ ಮಾತುಗಳ ಒಂದು ಭಾಗ ಹೀಗಿದೆ: "ಸ್ವ-ಗೌರವವು ಜೀವನದಲ್ಲಿ ಬಹು ಮುಖ್ಯವಾದ್ದು. ಅದಿಲ್ಲದೆ ಜೀವನವು ವ್ಯರ್ಥ. ಅದನ್ನು ಪಡೆದುಕೊಳ್ಳಲು ಹೋರಾಟಗಳು ಅನಿವಾರ್ಯ. ...ಕೊಂಕಣದಲ್ಲಿ ಖೋತಿ ಜಮೀನ್ದಾರಿ ಪದ್ಧತಿ ಇದೆ. ಕಷ್ಟಪಟ್ಟು ದುಡಿಯುವ ರೈತರ ರಕ್ತವನ್ನದು ಹೀರುತ್ತಿದೆ. ಅದರ ನಿರ್ಮೂಲನಕ್ಕೆ ನಾನು ಏನನ್ನು ಮಾಡಲೂ ಸಿದ್ಧನಿದ್ದೇನೆ. ಈ ಗುಲಾಮಿತನದಿಂದ ಮುಕ್ತರಾಗಲು ನಿಮ್ಮ ಹೋರಾಟದಲ್ಲಿ ಭಾಗಿಯಾಗುತ್ತೇನೆ. ಯಾವ ನಿಷ್ಠುರವೂ ಇಲ್ಲದೆ ಸೆಣಸಲು ನಾನು ಸಿದ್ಧ. ಚಿಪ್ಲೂನ್‌ನಲ್ಲಿ ನಡೆಯುತ್ತಿರುವ ಸಮ್ಮೇಳನಕ್ಕೆ ಬಾರದಿರುವಂತೆ ನನ್ನ ಜೀವಕ್ಕೆ ಬೆದರಿಕೆ ಹಾಕಿದವರಿದ್ದಾರೆ. ಬಡತನ, ಗುಲಾಮಗಿರಿ, ಅಲ್ಪರಂತೆ ಜೀವನ ಸವೆಸುವುದು, ಇವುಗಳ ವಿರುದ್ಧ ದನಿಯೆತ್ತುತ್ತೇನೆಂದು ಅವರಿಗೆ ಗೊತ್ತು. ಅದಕ್ಕೇ ಬೆದರಿಕೆ ಒಡ್ಡಿದ್ದಾರೆ. ಮಾನವರಿಗೆ ಮರಣ ಇದ್ದದ್ದೇ. ಸ್ವ-ಗೌರವದಿಂದ ಸುಖವಾಗಿ ಬಾಳ್ವೆ ನಡೆಸುವುದು ಎಲ್ಲ ಮಾನವ ಹಕ್ಕು. ಅದಕ್ಕಾಗಿ ಜೀವ ಕೊಡಲು ನಾವು ತಯಾರಾಗಿರೋಣ. ನಾವು ಯಾರಿಗೂ ಗುಲಾಮರಲ್ಲ. ರೈತರು ಮತ್ತು ಕೃಷಿ ಕಾರ್ಮಿಕರಿಗೆ ಹೋರಾಟ ಎಂದರೇನೆಂದು ತಿಳಿದಿದೆ. ... ಉಚ್ಚ ಜಾತಿಯ ಹಿಂದುಗಳ ಹಿಡಿತದಿಂದ ಬಿಡಿಸಿಕೊಳ್ಳಲು ನಾವು ಬೇಕಾದರೆ ಕೊಂಕಣವನ್ನು ಬಿಟ್ಟು ಹೋದೇವು. ಹಾಗೆ ಮಾಡದೆ ಇಲ್ಲೇ ಹೋರಾಡೋಣ."

ರಕ್ತ ಹೀರುವ ಖೋತಿ ಪದ್ಧತಿಯು ರದ್ದಾಗಲೇಬೇಕೆಂಬ ಶಪಥವನ್ನು ಚಿಪ್ಲೂನ್ ಸಮ್ಮೇಳನವು ಕೈಗೊಂಡಿತು. ಸುಬೇದಾರ್ ಸವಾಡ್ಕರ್, ಅನಂತ ವಿನಾಯಕ ಚಿತ್ರೆ ಮತ್ತು ನಾನಾಸಾಹೇಬ್ ಟಿಪ್ನಿಸ್ ಮುಖಂಡರಾಗಿ ಆಯ್ಕೆಗೊಂಡರು.

**ಏನಿದು ಖೋತಿ?**

ಬ್ರಿಟಿಷರು ಕಾಲಿರಿಸುವುದಕ್ಕೂ ಮುನ್ನ ಪೇಶ್ವೆಗಳ ಕಾಲದಿಂದಲೂ ಈ ವ್ಯವಸ್ಥೆಯು ಕೊಂಕಣದಲ್ಲಿತ್ತು. ಜಹಗೀರು ಮತ್ತು ಇನಾಂ ನೀಡುವ ಪದ್ಧತಿಯಿಂದ ಬೆಳೆದುಬಂದ ಪದ್ಧತಿ ಇದು. ಜನರಿಂದ ತೆರಿಗೆ ವಸೂಲು ಮಾಡಲು ಯಾರಿಗೋ ಅಧಿಕಾರ ವಹಿಸಲಾಗುತ್ತದೆ; ಅವರಿಗೆ 'ಖೋತ್' ಎಂದು ಹೆಸರು. ಜನರಿಂದ ವಸೂಲ್ಮಾಡಲ್ಪಡುವ ತೆರಿಗೆಯನ್ನು ಮನು "ಬಲಿ" ಎಂದು ಕರೆದಿದ್ದಾನೆ. ವಸೂಲಿಗೆ ಸನ್ನದಿನ ಮೂಲಕ ಅಧಿಕಾರ ನೀಡಲಾಗುತ್ತದೆ ಮತ್ತು ವಸೂಲಿಯಾದ ತೆರಿಗೆಯ ಒಂದು ಭಾಗ ಖೋತ್‌ಗೆ ಸೇರುತ್ತದೆ. ಆ ಭಾಗದ ಪ್ರಮಾಣದಲ್ಲಿ ವ್ಯತ್ಯಾಸವು ಸಾಧ್ಯ. ಒಂದು ಖಂಡಿಯಲ್ಲಿ ಒಂದು ಕುಡವ್ ಅವನದೆಂಬುದು ಸಾಮಾನ್ಯ ಹಂಚಿಕೆಯ ಪ್ರಮಾಣ. ಸಾಮಾನ್ಯವಾಗಿ ಅದು ಶೇಕಡ ಒಂದರಷ್ಟಾಗುತ್ತದೆ. ಇದಕ್ಕೆ ಭಿನ್ನವಾಗಿ ಉತ್ಪನ್ನದ ಪಾಲುದಾರಿಕೆಯ ಬದಲು ಕೆಲವು ಹಳ್ಳಿಗಳು ಸಂಪೂರ್ಣವಾಗಿ ಖೋತ್‌ಗೆ ಸೇರಿಬಿಡುತ್ತಿತ್ತು. ಅಂತಹ ಸಂದರ್ಭದಲ್ಲಿ ಉತ್ಪನ್ನದ ಅರ್ಧಭಾಗ (ಅರ್ಧೇಲ್) ಇಲ್ಲವೆ ಮೂರನೆಯ ಒಂದು ಭಾಗ (ತಿರ್ದೇಲ್) ಅವನಿಗೆ ಸೇರುತ್ತಿತ್ತು. ಜೊತೆಗೆ ಊರಾಚೆಯ ಕಾಡು ಮತ್ತು ಉಳುಮೆಯಾಗಿಲ್ಲದ ಭೂಮಿ ಸಹ ಅವನ ಸ್ವಾಧೀನದಲ್ಲಿ ಇರುತ್ತಿತ್ತು. ಕಾಡಿನಿಂದ ಉರುವಲು ತಂದರೆ ಅದಕ್ಕೆ ಬೇರೆ ತೆರಿಗೆಯನ್ನು ಅವನಿಗೆ ಸಂದಾಯ ಮಾಡಬೇಕು; ದನದ ಮೇವಿಗೆ ಬೇರೆ ತೆರಿಗೆ; ಜೊತೆಗೆ ಬಿಟ್ಟಿ ಕೂಲಿ ಬೇರೆ. ಅದನ್ನು "ವೇಠ್ ಬಿಗಾರ್" ಎನ್ನುತ್ತಾರೆ. ಅದು ಖೋತ್‌ನ ಮನೆಯ ಕೆಲಸವೋ, ತೋಟದ ಕೆಲಸವೋ ಆಗಿರುತ್ತಿತ್ತು; ವರ್ಷಕ್ಕೆ ಎಂಟು ದಿನ ಬಿಟ್ಟಿ ಕೂಲಿ ಎಂಬುದು ನಿಯಮ, ಆದರೆ ಅರವತ್ತು ದಿನಕ್ಕೆ ಅದನ್ನು ಹೆಚ್ಚಿಸಿದರೂ ಸರಿಯೇ. ಯಾವ ರೈತನ ಮನೆಯೆದುರು ಖೋತ್ ತನ್ನ ದೊಣ್ಣೆ ಇಡುತ್ತಾನೋ ಅವನು ಬಿಟ್ಟಿ ಕೂಲಿಗೆ ಹೋಗಲೇಬೇಕೆಂಬ ಅನಧಿಕೃತ ಷರತ್ತು ಇರುತ್ತಿತ್ತು. ಅಂತಹ ಕೂಲಿಕಾರನಿಗೆ ಖೋತ್ ಊಟ ಕೊಡಬೇಕೆಂಬ ನಿಯಮವೂ ಇಲ್ಲ! ಬಿಟ್ಟಿ ಕೆಲಸಕ್ಕೆ ತಪ್ಪಿಸಿಕೊಂಡರೆ ಎರಡರಷ್ಟು ಬಿಟ್ಟಿ ಕೆಲಸ ವಿಧಿಸಲಾಗುತ್ತಿತ್ತು. ಎಷ್ಟೋ ಮಂದಿಯನ್ನು ಊರಿನಿಂದ ಹೊರಗೆ ಅಟ್ಟುತ್ತಿದ್ದುದೂ ಉಂಟು; ಇಲ್ಲವೆ, ಜಮೀನನ್ನು ಕಿತ್ತುಕೊಂಡು ಬೇರೆ ಯಾರಿಗಾದರೂ ಕೊಡುವುದೂ ಇತ್ತು. ಎಷ್ಟೋ ವೇಳೆ ತಮ್ಮ ಗುಡಿಸಲುಗಳನ್ನು ತಾವೇ ನಾಶ ಮಾಡಬೇಕೆಂಬ ಆಜ್ಞೆ ನೀಡಲಾಗುತ್ತಿತ್ತು. ಒಟ್ಟಿನಲ್ಲಿ, ರೈತರೆಂಬ ಹೆಸರಿದ್ದರೂ ಅವರು ಖೋತ್‌ನ ಗುಲಾಮರಂತೆ ಇರಬೇಕಾಗುತ್ತಿತ್ತು.

ಬ್ರಿಟಿಷರ ಆಳ್ವಿಕೆಯಲ್ಲಿ ಹೆಸರಿಗೆ ಇದೆಲ್ಲಾ ಬದಲಾಗಿ ಇಂತಹ ಜಮೀನಿಗೆ ಇಂತಿಷ್ಟು ತೆರಿಗೆ ಎಂದು ನಿಖರವಾಗಿ ಗೊತ್ತುಪಡಿಸಲಾಯಿತು. ಆದರೆ ತೆರಿಗೆ ವಸೂಲು ಮಾಡುವವನು ಮತ್ತೆ ಅದೇ ಖೋತ್! ೧೮೭೦ರಲ್ಲಿ ಅದು ಜಾರಿಗೆ ಬಂತಾದರೂ ಹಳ್ಳಿಗರ ಜೀವನದಲ್ಲಿ ಬದಲಾವಣೆಯೇನೂ ಕಾಣಲಿಲ್ಲ. ತೆರಿಗೆ ವಸೂಲಿಯಾದರೆ ಸಾಕೆಂಬುದು ಬ್ರಿಟಿಷರ ನಿಲುವು. ಖೋತ್‌ನ ಉಪಟಳವನ್ನು ನಿಲ್ಲಿಸಹೋದರೆ ತೆರಿಗೆ ವಸೂಲಿಗೆ ಬೇರೆ ಯಾರನ್ನು ನೇಮಿಸಬೇಕು! ಹೀಗಾಗಿ ಖೋತ್ ಮೊದಲಿಗಿಂತಲೂ ಹೆಚ್ಚು ಬಲಿಷ್ಠನಾದ, ಕ್ರೂರಿಯಾದ. ಅವನಿಗೆ ಬ್ರಿಟಿಷರ ಶ್ರೀರಕ್ಷೆಯೂ ದೊರೆತಿತ್ತು. ಆಗ್ಗೆ ಕೊಂಕಣವನ್ನು ಎರಡು ಜಿಲ್ಲೆಗಳಾಗಿ ವಿಭಜಿಸಲಾಗಿತ್ತು: ಠಾಣೆ ಮತ್ತು ರತ್ನಗಿರಿ. ಈಗಿನ ರಾಯಗಢಕ್ಕೆ ಹಿಂದೆ ಕುಲಾಬ ಎಂಬ ಹೆಸರಿತ್ತು. ಅದು ಹಾಗೂ ಈಗಿನ ಠಾಣೆ ಜಿಲ್ಲೆ ಸೇರಿ ಒಂದು ಜಿಲ್ಲೆ; ಉತ್ತರದಲ್ಲಿ ರತ್ನಗಿರಿ ಮತ್ತು ಸಿಂಧುದುರ್ಗ ಸೇರಿ ಒಂದು ಜಿಲ್ಲೆ. ಹದಿನಾರನೆಯ ಶತಮಾನದಿಂದ ಈ ಜಿಲ್ಲೆಗಳಲ್ಲಿ ತೆರಿಗೆ ವಸೂಲು ಮಾಡುವ ಅಧಿಕಾರಿ ಸ್ವತಃ ಖೋತ್‌ನೇ ಆಗಿರುತ್ತಿದ್ದ.

೧೯೦೭ರಲ್ಲಿ ಬ್ರಿಟಿಷ್ ಸರ್ಕಾರವು ಅಚ್ಯುತ ಭಾಸ್ಕರ ದೇಸಾಯಿ ಎಂಬ ಮಾಮಲೇತ್‌ದಾರನನ್ನು ಕಮಿಷನರ್ ಆಗಿ ನೇಮಿಸಿ ಖೋತಿ ವ್ಯವಸ್ಥೆಯ ನಿಜಾರ್ಥವನ್ನು ಕಂಡುಹಿಡಿಯಬೇಕೆಂದು ತಿಳಿಸಿತು. ದೇಸಾಯಿ ಪ್ರಕಾರ ಖೋತ್‌ಗಳು ಯಾರೂ ಜಮೀನಿನ ಒಡೆತನ ಹೊಂದಿರಲಿಲ್ಲ, ಆದರೆ ತೆರಿಗೆ ವಸೂಲು ಮಾಡುವ ಅಧಿಕಾರ ಹೊಂದಿದ್ದರು; ಆದರೆ ಖೋತ್‌ಗಳು ತಮ್ಮ ಪಟ್ಟು ಬಿಡಲಿಲ್ಲ. ಎಲ್ಲ ಜಮೀನು ಯಾವಾಗಲೂ ತಮ್ಮದೇ ಆಗಿತ್ತೆಂದು ವಾದಿಸಿದರು. ಅದು ನಿಜವಲ್ಲವೆಂಬುದು ಬ್ರಿಟಿಷರಿಗೆ ತಿಳಿದಿತ್ತು, ಆದರೆ ಗೇಣಿದಾರರ ಬವಣೆಯನ್ನು ತಪ್ಪಿಸಲು ಮುಂದಾಗಲಿಲ್ಲ. ಕೂಲಿ ಮಾಡುವವರು ಹೇಗೆ ಜೀವಿಸಿದರೇನು, ಅವನಿಗೆ ತೆರಿಗೆ ಸಂದಾಯವಾಗುವುದಷ್ಟೇ ಮುಖ್ಯ. ಆದ್ದರಿಂದ ಖೋತ್‌ಗೆ ಬ್ರಿಟಿಷರ ನೆರವು ದೊರೆತು ಮೊದಲಿಗಿಂತಲೂ ಹೆಚ್ಚು ಅಧಿಕಾರ ಚಲಾಯಿಸಲು ಸಾಧ್ಯವಾಯಿತು.

**ಅಂತರ**

ಮನಸ್ಸಿನ
ಮೇಲುಪದರದಿಂದ
ಹೊಮ್ಮುವುದು ಗದ್ಯ;
ಅಂತರಾಳದಿಂದ
ಚಿಮ್ಮಬಹುದು
ಪದ್ಯ!

ಸಿ.ಪಿ.ಕೆ.
ಮೈಸೂರು

ದಕ್ಷಿಣ ಕೊಂಕಣದ ಮ್ಯಾಜಿಸ್ಟ್ರೇಟ್ ಆಗಿದ್ದ ಎಲ್. ಆರ್. ರೀಡ್ ಇದನ್ನು ಪರಿಶೀಲಿಸಿ ವರದಿಯೊಂದನ್ನು ೧೮೨೧ರಲ್ಲೇ ನೀಡಿದ್ದ, ಆದರೆ ೨೦ನೆಯ ಶತಮಾನದಲ್ಲಿ ಸಹ ಖೋತ್ ಸರ್ವಾಧಿಕಾರಿಯಾಗಿ ಮುಂದುವರಿದಿದ್ದ. ಅವರಲ್ಲಿಯೂ ಒಂದು ಬಗೆಯ ಶ್ರೇಣೀಕರಣವಿತ್ತು, ಆದರೆ ಅದನ್ನೀಗ ವಿಸ್ತರಿಸುವ ಪ್ರಮೇಯವಿಲ್ಲ. ೧೮೪೫ರಲ್ಲಿ ವಿನ್‌ಗೇಟ್ ಎಂಬ ರೆವಿನ್ಯೂ ಅಧಿಕಾರಿ ದಾಖಲಿಸಿದ್ದ ಒಂದಂಶವನ್ನಷ್ಟೇ ಪ್ರಸ್ತಾಪಿಸಿದರೆ ಸಾಕು : "ಖೋತ್‌ಗಳು ಇಡೀ ಊರಿನ ಮಾಲೀಕರಂತಾಗಿಬಿಟ್ಟಿದ್ದಾರೆ. ಊರಿನ ಭೂಮಿ, ಕಾಡು, ಪ್ರಾಣಿಸಮೂಹ, ಎಲ್ಲವೂ ಅವರದ್ದೇ ಆಗಿಹೋಗಿದೆ. ಯಾವ ಕಾನೂನಿನ ಬಲವೂ ಇಲ್ಲದೆಯೇ ಇವರು ಪಾರಂಪರಿಕವಾಗಿ ಎಲ್ಲ ಅಧಿಕಾರವನ್ನೂ ಚಲಾಯಿಸುತ್ತಾ ಬಂದಿದ್ದಾರೆ."

ಇಂತಹ ವಂಶಪಾರಂಪರ್ಯ ಯಜಮಾನಿಕೆಯ ವಿರುದ್ಧ ಸೊಲ್ಲೆತ್ತಿ ಸೆಣಸಲು ಡಾ|| ಅಂಬೇಡ್ಕರ್ ಅವರು ನಾಯಕತ್ವ ವಹಿಸಿದರು. ಅವರು ನಡೆಸುತ್ತಿದ್ದ "ಬಹಿಷ್ಕೃತ ಭಾರತ"ದ ಆಗಸ್ಟ್ ೧೯೨೯ರ ಸಂಚಿಕೆಯಲ್ಲಿ ಖೋತಿ ವ್ಯವಸ್ಥೆಯ ಬಗ್ಗೆ ಒಂದು ಲೇಖನ ಪ್ರಕಟಿಸಿ ಸರ್ದಾರ್ ವಲ್ಲಭಭಾಯಿ ಪಟೇಲರನ್ನು ತೀವ್ರವಾಗಿ ತರಾಟೆಗೆ ತೆಗೆದುಕೊಂಡಿದ್ದರು. ಪಟೇಲ್ ಅವರು ಗುಜರಾತಿನಲ್ಲಿ "ಲ್ಯಾಂಡ್ ಲೀಗ್ ಜಮೀನ್ದಾರ್ ಫೆಡರೇಶನ್" ಸ್ಥಾಪಿಸಿದ್ದರು. ಅದರಲ್ಲಿ ಬ್ರಾಹ್ಮಣ ಭೂ–ಪತಿಗಳೇ ಹೆಚ್ಚಾಗಿದ್ದುದರಿಂದ ಅ–ಬ್ರಾಹ್ಮಣರು ಫೆಡರೇಶನ್ ಸೇರಲಿಲ್ಲ. ಫೆಡರೇಶನ್‌ಅನ್ನು ಕಟುವಾಗಿ ಟೀಕಿಸಿ ಅಂಬೇಡ್ಕರ್ ಖೋತಿ ವ್ಯವಸ್ಥೆಯ ಬಗ್ಗೆ ಆಳವಾದ ವಿಶ್ಲೇಷಣೆ ನೀಡಿದರು : "ಗುಜರಾತಿನಲ್ಲಿ ಲೇವಾ ಪಾಟಿದಾರರು ಭೂಮಾಲೀಕರಾಗಿ 'ದುರ್ಬಲ' ಜಾತಿಯವರನ್ನು ಶೋಷಿಸುವಂತೆ ಕೊಂಕಣದಲ್ಲಿ ಖೋತ್‌ಗಳು ಸುಲಿಗೆ ಮಾಡುತ್ತಿದ್ದಾರೆ. ಅಲ್ಲಿ ಹಿಂದುಗಳು ಮತ್ತು ಪಾರ್ಸಿಗಳು ಮಾಡುತ್ತಿರುವುದನ್ನು ಇಲ್ಲಿ ಖೋತ್‌ಗಳು ಮಾಡುತ್ತಿದ್ದಾರೆ. ಈ ಖೋತ್‌ಗಳು ಬ್ರಾಹ್ಮಣರು ಇಲ್ಲವೇ ಮರಾಠರು; ಶೋಷಣೆಗೆ ಒಳಗಾಗುತ್ತಿರುವವರು ಕುಣಬಿಗಳು ಮತ್ತು ಅಸ್ಪೃಶ್ಯರು. ...ಗೇಣಿದಾರರು ಹೋರಾಟ ಆರಂಭಿಸಿದಾಗ ಆರ್. ಬಿ. ಭೋಲೆ, ಅಡ್ವೊಕೇಟ್ ಸುರ್ವೆ, ಮತ್ತಿತರ ಅ–ಬ್ರಾಹ್ಮಣ ನಾಯಕರನ್ನು ಮರಾಠರ ಸಂಘಗಳು ದೂಷಿಸಿದವು." ಕೊಂಕಣದ ಮರಾಠರು ಮತ್ತು ಗುಜರಾತಿನ ವಲ್ಲಭಭಾಯಿ ಪಟೇಲ್ ಒಂದೇ ಬಣದವರೆಂದು ಯಾವ ಅಳುಕೂ ಇಲ್ಲದೆ ಡಾ|| ಅಂಬೇಡ್ಕರ್ ಆಕ್ಷೇಪವೆತ್ತಿದ್ದರು. ಈ ಲೇಖನ ಪ್ರಕಟವಾದ ತರುವಾಯ ಬಾಬಾಸಾಹೇಬ್ ಕೊಂಕಣದಲ್ಲೆಲ್ಲಾ ಸಭೆಗಳನ್ನು ನಡೆಸುತ್ತಾ ಖೋತಿಯ ವಿರುದ್ಧ ಪ್ರಬಲ ಹೋರಾಟವನ್ನು ಆರಂಭಿಸಿದರು. ಜಂಜೀರಾ ಸಂಸ್ಥಾನವು ಒಬ್ಬ ನವಾಬನ ಅಧೀನದಲ್ಲಿತ್ತು. ಶ್ರೀವರ್ಧನ್ ಮತ್ತು ಮ್ಹಾಸಳೆ ತಾಲ್ಲೂಕುಗಳು ಆ ಸಂಸ್ಥಾನದಡಿ ಇದ್ದವು. ಅಲ್ಲಿಯೂ ಖೋತಿ ಪದ್ಧತಿ ಇದ್ದುದರಿಂದ ಅಂಬೇಡ್ಕರ್ ಅಲ್ಲಿಯೂ ಹೋರಾಟಗಳನ್ನು ಸಂಘಟಿಸಲು ಚಿತ್ರೆ ಮತ್ತು ಅಧಿಕಾರಿ ಇಬ್ಬರನ್ನೂ ನೇಮಿಸಿದರು.

ಮಹಾಡ್‌ನಿಂದ ಸುಮಾರು ೨೦ ಕಿಲೋಮೀಟರ್ ದೂರದಲ್ಲಿ ಗೋರೆಗಾಂವ್ ಇದೆ. ಚಂದ್ರಕಾಂತ ಅಧಿಕಾರಿ ಅಲ್ಲಿ ವಕೀಲರಾಗಿದ್ದರು. ಹತ್ತಿರದ ಚಿಂಚವ್ಲಿ ಎಂಬ ಹಳ್ಳಿಯ ದತ್ತ ಮಂದಿರದಲ್ಲಿ ಸಭೆಯೊಂದನ್ನು ಆಯೋಜಿಸಿದ್ದರು. ಆಮೇಲೆ ಲೋಣೇರೆ ಎಂಬಲ್ಲಿ ಮತ್ತೊಂದು ಸಭೆ. ಚಿತ್ರೆ ಅವರು ಸಭೆಯನ್ನುದ್ದೇಶಿಸಿ ಮಾತನಾಡಲಾರಂಭಿಸಿದಾಗ ಪೊಲೀಸರು ಮಧ್ಯಪ್ರವೇಶ ಮಾಡಿ ಅವರ ಭಾಷಣಕ್ಕೆ ಅಡ್ಡಿಯೊಡ್ಡಿದರು. ಇಂತಹ ಪ್ರಸಂಗಗಳು ಲೆಕ್ಕವಿಲ್ಲದಷ್ಟು ನಡೆದುಹೋದವು. ಅದೇ ಸುಮಾರಿನಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಉಪ್ಪಿನ ಸತ್ಯಾಗ್ರಹ ಆರಂಭವಾಗಿತ್ತು. ಅದರಲ್ಲಿ ಖೋತ್‌ಗಳು ಹುರುಪಿನಿಂದ ಭಾಗವಹಿಸಿದರು. ಅವರಿರುವೆಡೆ ಗೇಣಿದಾರರು ಇರುವುದಾದರೂ ಹೇಗೆ ? ಆದ್ದರಿಂದ ಕೊಂಕಣದಲ್ಲಿ ಸತ್ಯಾಗ್ರಹಕ್ಕೆ ಬೆಂಬಲ ಕನಿಷ್ಠ ಮಟ್ಟದಲ್ಲಿತ್ತು. ಖೋತ್‌ಗಳು, ಲೇವಾದೇವಿಕಾರರು, ವ್ಯಾಪಾರಿಗಳು, ಇವರು ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರಿಂದ ಕೊಂಕಣದಲ್ಲಿ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ವಾತಂತ್ರ್ಯಾನಂತರ ನೀಡಲಾದ ಪಿಂಚಣಿಯು ಆ ವರ್ಗದವರಿಗೆ ಮಾತ್ರವೇ ದೊರೆಯಿತು ! ಮಹಾರಾಷ್ಟ್ರ ಪ್ರಾದೇಶಿಕ ಕಾಂಗ್ರೆಸ್ ೧೯೩೭ರಲ್ಲಿ ಖೋತಿ ಪದ್ಧತಿಯ ಬಗ್ಗೆ ವರದಿ ನೀಡಲು ಒಂದು ಸಮಿತಿಯನ್ನು ರಚಿಸಿತ್ತು. ಅಚ್ಯುತರಾವ್ ಪಟವರ್ಧನ್, ಕಾಕಾಸಾಹೇಬ್ ಗಾಡ್ಗಿಲ್ ಮುಂತಾದವರು ಸಮಿತಿಯಲ್ಲಿದ್ದರು. ರೈತ ಸಂಘಟನೆಗಳ ಬೆಳವಣಿಗೆಯನ್ನು ಗುರುತಿಸಿ ಖೋತಿ ಪದ್ಧತಿಯನ್ನು ಸಮಿತಿಯು ಖಂಡಿಸಿದ್ದೇನೋ ನಿಜ, ಆದರೆ ಅದರ ನಿರ್ಮೂಲನಕ್ಕೆ ಸಮಿತಿಯು ಯಾವ ಸಲಹೆಯನ್ನೂ ನೀಡಲಿಲ್ಲ. "ಚರಿ ಎಂಬಲ್ಲಿ ಡಾ|| ಅಂಬೇಡ್ಕರರ ನೇತೃತ್ವದಲ್ಲಿ ನಡೆದ ರೈತ ಸಮ್ಮೇಳನವು ಕಾಂಗ್ರೆಸ್ ಬಗ್ಗೆ ತೀರ ಅಸಮಾಧಾನವನ್ನು ಪ್ರಕಟಿಸಿತು" ಎಂದು ವರದಿಯಲ್ಲಿ ಹೇಳಲಾಯಿತು. ನಾಗು ಪಾಟೀಲರು "ಕೊಂಕಣ್ ಕೃಷೀವಲ್" ಎಂಬ ಪತ್ರಿಕೆಯನ್ನು ಆರಂಭಿಸಿ ಇಡೀ ಚಳುವಳಿಗೆ ಒಂದು ಮುಖವಾಣಿಯನ್ನು ಒದಗಿಸಿಕೊಟ್ಟರು. ಚರಿ, ಥಿಕಲಪ್, ಖಾರೇಪಾತ್, ಕಾಸು, ಹೀಗೆ ಅನೇಕ ಊರುಗಳಲ್ಲಿ ಭಾರಿ ಸಭೆಗಳು ನಡೆದವು. ಚಿತ್ರೆ ಮತ್ತು ಟಿಪ್ನಿಸ್ ಅವುಗಳ ಆಯೋಜಕರು. ಆಗ್ಗೆ ದುಂಡುಮೇಜಿನ ಸಭೆಗಳಿಗಾಗಿ ಅಂಬೇಡ್ಕರ್ ಲಂಡನ್ನಿಗೆ ತೆರಳಿದ್ದರು. ಆದರೆ ಡಿಸೆಂಬರ್ ೧೯೩೪ರಲ್ಲಿ ಚರಿಯಲ್ಲಿ ನಡೆಸಲಾದ ಮೂರನೆಯ ರೈತ ಸಮ್ಮೇಳನದಲ್ಲಿ ಅವರು ಭಾಗವಹಿಸಿದರು. ಮುಂಬೈಯಿಂದ ರೇವಸ್‌ಗೆ ನಾವೆಯಲ್ಲಿ ಪ್ರಯಾಣಿಸಿದ ಅವರನ್ನು ಸಾವಿರಾರು ಮಂದಿ ಬಂದರಿನಲ್ಲಿ ಸ್ವಾಗತಿಸಿ ಮೆರವಣಿಗೆಯಲ್ಲಿ ಕರೆದೊಯ್ದರು. ವಿವಿಧ ಭಾಗಗಳಿಂದ ಹತ್ತಾರು ಮೆರವಣಿಗೆಗಳು ಬಂದು ಚರಿಯಲ್ಲಿ ಸಹಸ್ರಗಟ್ಟಲೆ ಹೋರಾಟಗಾರರು ನೆರೆದಿದ್ದರು. ಬಾಬಾಸಾಹೇಬ್ ಅವರೊಡನೆ ಆ ಸಮ್ಮೇಳನದಲ್ಲಿದ್ದ ಬೇರೆ ಕೆಲವು ನಾಯಕರನ್ನು ಹೆಸರಿಸಬಹುದು : ಅನಂತರಾವ್ ಚಿತ್ರೆ, ತ್ರ್ಯಂಬಕರಾವ್ ಪರ್ವತೇ, ಸುಬೇದಾರ್ ಸವಾದ್‌ಕರ್, ಶಾಮರಾವ್ ಪರುಲೇಕರ್, ಸುರೇಂದ್ರನಾಥ ಟಿಪ್ನಿಸ್, ಗೋಪಿನಾಥರಾವ್ ಪೋಟ್ನಿಸ್, ಚಂದ್ರಕಾಂತ ಅಧಿಕಾರಿ, ಚಿಂತೋಪಂತ್ ದೇಶಪಾಂಡೆ, ದಾಮೂಅಣ್ಣ ಪೋಟ್ನಿಸ್, ಇತ್ಯಾದಿ. ಇಡೀ ಕೊಂಕಣದ ರೈತ ಸಮುದಾಯವೇ ಅಲ್ಲಿ ವಿಜೃಂಭಿಸಿತ್ತು. ಪ್ರಾಚಾರ್ಯ ದೊಂಡೇ, ಸಹಸ್ರಬುದ್ಧೇ, ಬಿ. ವಿ. ಪ್ರಧಾನ್, ಮುಂತಾದವರೂ ಹಾಜರಿದ್ದರು. ಸರ್ಕಾರಿ ಅಧಿಕಾರಿಗಳು ಮತ್ತು ಪೊಲೀಸರು ಕೂಡ ಭಾರಿ ಸಂಖ್ಯೆಯಲ್ಲಿ ಸೇರಿದ್ದರು.

ಬಾಬಾಸಾಹೇಬ್ ಅವರ ಅಧ್ಯಕ್ಷ ಭಾಷಣದಿಂದ ಆಯ್ದ ಕೆಲವು ಭಾಗಗಳನ್ನಿಲ್ಲಿ ಪ್ರಸ್ತುತಪಡಿಸಬಹುದು : "ನಿಮ್ಮೆಲ್ಲ ಅವಮಾನಗಳನ್ನು ಅಂತ್ಯಗೊಳಿಸಲು ಹಾಗೂ ಎಲ್ಲ ಹಕ್ಕೊತ್ತಾಯಗಳನ್ನೂ ಈಡೇರಿಸಿಕೊಳ್ಳಲು ಈ ಸಮ್ಮೇಳನ ಬದ್ಧವಾಗಿದೆ. 'ರೈತ' ಎಂಬ ಪದವನ್ನು ಭೂಮಾಲೀಕರಿಗೆ ಹಾಗೂ ರೈತ ಕೂಲಿಕಾರರಿಗೆ ಅನ್ವಯಿಸಲಾಗುತ್ತಿದೆ. ಅವರಿಬ್ಬರೂ ಬೇರೆಬೇರೆ ಎಂಬುದನ್ನು ನಾವು ಸ್ಪಷ್ಟಗೊಳಿಸಿಕೊಳ್ಳಬೇಕು. ...ಲೇವಿದಾರರ ಹಾಗೂ ಭೂಮಾಲೀಕರ ವಿರುದ್ಧ ಎರಡು ವರ್ಷಗಳಿಂದ ಹೋರಾಟ ನಡೆಸುತ್ತಿದ್ದೇವೆ. ಕಾನೂನಾತ್ಮಕ ಪರಿಹಾರಕ್ಕಾಗಿ ಟ್ರಿಬ್ಯುನಲ್‌ಗಳ ರಚನೆಯಾಗಬೇಕು. ಅದರಲ್ಲಿ ಭೂಮಾಲೀಕರು ಮತ್ತು ಗೇಣಿದಾರರು, ಇಬ್ಬರೂ ಇರಬೇಕು. ಸರ್ಕಾರದ ಪ್ರತಿನಿಧಿಯೂ ಬೇಕು. ಟ್ರಿಬ್ಯುನಲ್‌ಗೆ ಕಾನೂನು ಮಾನ್ಯತೆ ಅಗತ್ಯ. ಅದರ ತೀರ್ಮಾನವನ್ನು ಎಲ್ಲರೂ ಅಂಗೀಕರಿಸಬೇಕು. ಚರಿ ಸತ್ಯಾಗ್ರಹವನ್ನು ನೋಡಿಯೂ ಸರ್ಕಾರ ಇನ್ನೂ ಟ್ರಿಬ್ಯುನಲ್ ರಚಿಸಿಲ್ಲದಿರುವುದು ಸರಿಯಲ್ಲ. ಸರ್ಕಾರವೇನು ಮೂಕಸಾಕ್ಷಿಯೆ ? ಖೋತಿ ಪದ್ಧತಿಯೇ ಎಲ್ಲ ಅನ್ಯಾಯ, ಅನಾಹುತಗಳಿಗೂ ಕಾರಣ. ...ಬೊಂಬಾಯಿಯ ಗಿರಣಿಗಳಲ್ಲಿ ಮಾಲೀಕರು ಕಾರ್ಮಿಕರಿಗೆ ವಸತಿ ಸೌಕರ್ಯ ನೀಡುತ್ತಾರೆ. ಕಾರ್ಮಿಕರು ಮುಷ್ಕರ ಹೂಡಿದರೆ ಅವರನ್ನು ವಸತಿಗಳಿಂದ ಹೊರಗಟ್ಟುತ್ತಾರೆ. ಆದ್ದರಿಂದ ಅವರ ಹೋರಾಟವು ತನ್ನ ಪ್ರಾಬಲ್ಯವನ್ನು ಕಳೆದುಕೊಳ್ಳುತ್ತದೆ. ನಮ್ಮ ಹೋರಾಟದಲ್ಲಿ ಅಂತಹ ಮುಗ್ಗಟ್ಟಿಗೆ ಅವಕಾಶವಿರಕೂಡದು. ...ಸಮಸ್ಯೆಗೆ ಪರಿಹಾರವೆಂದರೆ ಪ್ರಭಾವಿ ಶಾಸನವೊಂದನ್ನು ರೂಪಿಸುವುದು. ಮುಷ್ಕರ ಮತ್ತು ಶಾಸನಕ್ಕಾಗಿ ಆಗ್ರಹ ಒಟ್ಟೊಟ್ಟಿಗೆ ಸಾಗಬೇಕು. ...ಎಂತಹ ಕಾನೂನು ಬೇಕೆಂದು ನೀವೇ ತೀರ್ಮಾನಿಸಿ. ಅದನ್ನು ರೂಪಿಸಲು ನಿಮ್ಮ ಪ್ರತಿನಿಧಿಗಳಿರಬೇಕಲ್ಲವೆ ? ನಿಮ್ಮ ಹಿತವನ್ನು ಕಾಯುವ ಪ್ರತಿನಿಧಿಗಳನ್ನು ನೀವು ಆರಿಸಿ ಕಳುಹಿಸಬೇಕು."

ಚರಿ ಸಮ್ಮೇಳನದ ನಂತರ ಖೋತ್‌ಗಳು ಮತ್ತು ಜಮೀನ್ದಾರರು ಉರಿದೆದ್ದರು. "ಅಂಬೇಡ್ಕರ್ ಕ್ರಾಂತಿಗೆ ಪ್ರಚೋದನೆ ನೀಡುತ್ತಿದ್ದಾರೆ" ಎಂದು ಅವರು ಹುಯಿಲೆಬ್ಬಿಸಿದರು. ಹೋರಾಟಗಾರರಿಗೆ ಖೋತಿ ಪದ್ಧತಿಯ ನಿರ್ಮೂಲನವು ದೇಶದ ಸ್ವಾತಂತ್ರ್ಯ ಹೋರಾಟಕ್ಕಿಂತಲೂ ಹೆಚ್ಚಿನ ಆದ್ಯತೆಯ ವಿಷಯವಾಯಿತು. ಉಚ್ಚವರ್ಣದ ಹಿಂದುಗಳು ಮತ್ತೊಂದು ಅಬ್ಬರವನ್ನೂ ಆರಂಭಿಸಿದರು : "ಮಹಾರರ ಚಳುವಳಿಯು ಕೇವಲ ಖೋತಿಯ ವಿರುದ್ಧವಾದುದಲ್ಲ; ಅವರು ಅಸ್ಪೃಶ್ಯತೆಯ ನಿರ್ಮೂಲನಕ್ಕೆ ಕೈಹಾಕಿದ್ದಾರೆ. ನೀರಿನ ಎಲ್ಲ ಸೆಲೆಗಳನ್ನೂ ಕಲುಷಿತಗೊಳಿಸಲು ಅವರು ಹಾತೊರೆಯುತ್ತಿದ್ದಾರೆ, ದೇವಸ್ಥಾನಗಳಿಗೆ ನುಗ್ಗಲು

ಹೊಂಚುಹಾಕುತ್ತಿದ್ದಾರೆ." "ಕುಲಾಬ ಸಮಾಚಾರ್" ಮತ್ತು "ರಾಷ್ಟ್ರತೇಜ್" ಎಂಬ ಪತ್ರಿಕೆಗಳು ಉಚ್ಚವರ್ಣದವರ ಪ್ರಮುಖ ಮುಖವಾಣಿಗಳಾಗಿದ್ದವು. ಈ ಬೆಂಬಲದಿಂದ ಉತ್ತೇಜಿತರಾಗಿ ಖೋತ್‌ಗಳು ತಮಗೆ ಗೇಣಿದಾರರು ಮೊದಲಿಗಿಂತಲೂ ಹೆಚ್ಚಿನ "ಮಕ್ತಾ" (ಭಾಗ) ನೀಡಬೇಕೆಂಬ ಷರತ್ತು ವಿಧಿಸಲು ಮುಂದಾದರು. ಅಂತೆಯೇ, ನ್ಯಾಯಾಲಯಗಳಲ್ಲಿ ಗೇಣಿದಾರರ ವಿರುದ್ಧ ಅನೇಕ ಮೊಕದ್ದಮೆಗಳನ್ನು ಹೂಡಲಾರಂಭಿಸಿದರು.

ಇದೇ ವೇಳೆ ದೇಶದಲ್ಲಿ ಬ್ರಿಟಿಷ್ ವಸಾಹತು ಸರ್ಕಾರವು ಪ್ರಾದೇಶಿಕ ಶಾಸನಸಭೆಗಳನ್ನು ರೂಪಿಸಹೊರಟಿತ್ತು. ಗಾಂಧಿ-ಇರ್ವಿನ್ ಒಪ್ಪಂದದ ನಂತರ "ಗವರ್ನ್‌ಮೆಂಟ್ ಆಫ್ ಇಂಡಿಯ ಆ್ಯಕ್ಟ್-೧೯೩೫" ಹೊರಬಂದಿತ್ತು. ಈ ಹಿನ್ನೆಲೆಯಲ್ಲಿ ಡಾ॥ ಅಂಬೇಡ್ಕರ್ ಅವರು ಆಗಸ್ಟ್ ೧೯೩೬ರಲ್ಲಿ ತಮ್ಮ "ಇಂಡಿಪೆಂಡೆಂಟ್ ಲೇಬರ್ ಪಾರ್ಟಿ"ಯನ್ನು ಸ್ಥಾಪಿಸಿದರು. ಪ್ರಾದೇಶಿಕ ಶಾಸನಸಭೆಯ ಚುನಾವಣೆಯಲ್ಲಿ ಪಕ್ಷವು ಸ್ಪರ್ಧಿಸುವ ಇರಾದೆ ಅವರದಾಗಿತ್ತು. ಅದಕ್ಕೆ ಪೂರ್ವಭಾವಿಯಾಗಿ ಪಕ್ಷದ ಪ್ರಣಾಲಿಕೆಯೊಂದನ್ನು ಬಿಡುಗಡೆ ಮಾಡಿದರು. ಅದರಲ್ಲಿ ತಮ್ಮ ಆರ್ಥಿಕ ನೀತಿಗೆ ಒತ್ತುಕೊಟ್ಟು ಸಾಮಾಜಿಕ ಸುಧಾರಣೆಗಳ ಸ್ವರೂಪವನ್ನು ವಿವರಿಸಿದ್ದರು. ಆರ್ಥಿಕ ನೀತಿಯಲ್ಲಿ ಖೋತಿ ಪದ್ಧತಿಯ ಸಂಪೂರ್ಣ ರದ್ದತಿಯನ್ನು ಹೆಸರಿಸಲಾಗಿತ್ತು. ಡಾ॥ ಅಂಬೇಡ್ಕರ್ ಅವರು ಸಿದ್ಧಗೊಳಿಸಿದ್ದ ಪ್ರಣಾಲಿಕೆಯನ್ನು ಇಂದಿನ ಮುತ್ಸದ್ದಿಗಳು ಕಾರ್ಯಗತಗೊಳಿಸಲು ಮುಂದಾಗುವುದು ಅನುಮಾನ; ಕೇವಲ ಬಾಯುಪಚಾರವು ಇಂದು ಪ್ರಧಾನವಾಗಿಬಿಟ್ಟಿದೆ. ಪಕ್ಷವು ಅಸ್ತಿತ್ವಕ್ಕೆ ಬಂದ ಕೆಲವೇ ದಿನಗಳಲ್ಲಿ ಅಂಬೇಡ್ಕರ್ ಮತ್ತೆ ಇಂಗ್ಲೆಂಡಿಗೆ ಹೋಗಬೇಕಾಗಿತ್ತು. ಅವರು ಹಿಂದಿರುಗಿದ್ದು ಜನವರಿ ೧೯೩೭ರಲ್ಲಿ. ಮೇಜರ್ ಘಾಟ್ಗೆ, ಭಾಯಿ ಚಿತ್ರೆ, ಮುಂತಾದವರು ಪಕ್ಷಕ್ಕೆ ಬುನಾದಿಯನ್ನು ರಚಿಸಿಯಾಗಿತ್ತು. ೧೯೩೭ರ ಚುನಾವಣೆಯಲ್ಲಿ ಪಕ್ಷವು ೧೯ ಸ್ಥಾನಗಳಲ್ಲಿ ವಿಜಯಿಯಾಯಿತು. ಕೆಲವು ತಿಂಗಳುಗಳ ರಾಜಕೀಯ ಬಿಕ್ಕಟ್ಟಿನ ನಂತರ ಜುಲೈನಲ್ಲಿ ಬಿ. ಜಿ. ಖೇರ್ ನೇತೃತ್ವದಲ್ಲಿ ಕಾಂಗ್ರೆಸ್ ಸರ್ಕಾರವು ಆಡಳಿತಾರೂಢವಾಯಿತು. ಆದರೆ ಖೋತಿ ಪದ್ಧತಿಯನ್ನು ರದ್ದುಮಾಡಲು ಕಾಂಗ್ರೆಸ್ ಸಿದ್ಧವಿರಲಿಲ್ಲ. ಸೆಪ್ಟೆಂಬರ್ ೧೯೩೭ರಲ್ಲಿ ಮಸೂರ್ ಎಂಬಲ್ಲಿ ದಲಿತ ಸಮ್ಮೇಳನವನ್ನು ನಡೆಸಿದಾಗ ಅಧ್ಯಕ್ಷರಾಗಿದ್ದ ಬಾಬಾಸಾಹೇಬ್ ಹೇಳಿದರು: "ಗಾಂಧೀಜಿಯ ಕಾಂಗ್ರೆಸ್ ಕ್ರಾಂತಿಕಾರಿ ಸುಧಾರಣೆಗಳನ್ನು ತರುವುದಾದರೆ ನಾನು ಕಾಂಗ್ರೆಸ್ ಸೇರಬಲ್ಲೆ. ಆದರೆ ಆ ಪಕ್ಷಕ್ಕೆ ಅಂತಹ ಆಕಾಂಕ್ಷೆ ಇಲ್ಲ. ಖೋತ್‌ಗಳು ಬೆಂಬಲಿಸಿದ ಪಕ್ಷ ಅದು. ಕಾಂಗ್ರೆಸ್‌ಗೆ ರೈತನೆಂದರೆ ನೇಗಿಲನ್ನೆಳೆಯಲು ಇರುವ ಮೂರನೆಯ ಎತ್ತು, ಅಷ್ಟೆ."

ಶಾಸನಸಭೆಯ ಮೊದಲ ಅಧಿವೇಶನ ಜರುಗಿದ್ದು ಸೆಪ್ಟೆಂಬರ್ ೧೯೩೭ರಲ್ಲಿ. ಮೊದಲ ಸಭೆಯಲ್ಲೇ ಅಂಬೇಡ್ಕರ್ "೧೯೩೭ರ ಬಿಲ್ ನಂಬರ್ ೨೦ : ಖೋತಿ ಪದ್ಧತಿಯ ನಿರ್ಮೂಲನಾ ಕಾಯಿದೆ"ಯನ್ನು ಮಂಡಿಸಿದರು. ಖೋತಿ ಬದಲು ಬೇರೆಡೆ ಜಾರಿಯಲ್ಲಿದ್ದ ರಯತ್ವಾರಿ ಪದ್ಧತಿಯನ್ನು ಜಾರಿಗೊಳಿಸಬೇಕೆಂದು ಬಿಲ್ ಉದ್ದೇಶಿಸಿತ್ತು. ಬಿಲ್ ಮಂಡಿಸುವಾಗಲೇ ಅಂಬೇಡ್ಕರ್ ಇಡೀ ಶಾಸನವನ್ನು ಬರೆದು ಮಂಡಿಸಿದ್ದರು. ಅಕ್ಟೋಬರ್ ೧೮ರಂದು ಅದು ಚರ್ಚೆಗೆ ಬಂತು. ರತ್ನಗಿರಿಯಿಂದ ಚಿತ್ರೆ ಮತ್ತು ಎಸ್. ಎಲ್. ಕರಂದೀಕರ್ ಚುನಾಯಿತರು. ಕರಂದೀಕರ್ ಕರಡು ಶಾಸನವನ್ನು ಮಂಡಿಸಲು ಅವಕಾಶವೇ ಕೂಡದೆಂದು ವಾದಿಸಿದರು. ಕಂದಾಯ ನೀತಿಯ ಪರಿಷ್ಕಾರದ ಪ್ರಸ್ತಾಪವನ್ನು ಖೇರ್ ಸರ್ಕಾರ ಮೊದಲೇ ಮುಂದಿಟ್ಟಿರುವುದರಿಂದ ಅದರ ಭಾಗವಾಗಿ ಈ ಕರಡನ್ನೂ ಚರ್ಚಿಸಬಹುದೆಂಬುದು ಅವರ ಶುಷ್ಕ ವಾದ. ಅಧ್ಯಕ್ಷರು ಅಂಬೇಡ್ಕರ್ ಅವರಿಗೆ ಕರಡನ್ನು ಮಂಡಿಸಲು ಅವಕಾಶವನ್ನಿತ್ತರು.

ಅಲ್ಲಿಂದ ಮುಂದೆ ರೈತರ ಮತ್ತು ಖೋತ್‌ಗಳ ನಡುವೆ ಜಟಾಪಟಿಯು ಉಗ್ರರೂಪ ಪಡೆಯಿತು. ೧೯೩೮ರ ಮೇ ೧೭ರಂದು ಖೇಡ್‌ನಲ್ಲಿ ೨೦೦೦ ರೈತರ ಸಭೆಯಲ್ಲಿ ಡಾ॥ ಅಂಬೇಡ್ಕರ್ ಮಾತನಾಡಿದರು. ಮಾರನೆಯ ದಿನ ನಾತು ಎಂಬ ಗ್ರಾಮದಲ್ಲಿ ಖೋತ್ ಮೇಲೆ ಹಲ್ಲೆ; ಅನೇಕರಿಗೆ ಪೆಟ್ಟು. ಅಂಬೇಡ್ಕರ್ ಭಾಷಣದ ಪರಿಣಾಮ ಅದೆಂದು ರತ್ನಗಿರಿಯ ಮ್ಯಾಜಿಸ್ಟ್ರೇಟ್ ಸರ್ಕಾರಕ್ಕೆ ವರದಿ ಸಲ್ಲಿಸಿದ. ತಮ್ಮ ಭಾಷಣದಲ್ಲಿ ಪ್ರಮುಖವಾಗಿ ಅಂಬೇಡ್ಕರ್ ಹೇಳಿದ್ದುದು ಇದು: "ನಾನು ಕರಡು ಮಂಡಿಸಿದ್ದೇನೆ. ನಿಮ್ಮ ಮನೆಗಳನ್ನೆಲ್ಲಾ ಜಪ್ತಿ ಮಾಡಿಸಬೇಕಾದರೆ ಸರ್ಕಾರವು ಅರವತ್ತು ಸಾವಿರ ಕೋರ್ಟ್ ಅಮೀನರನ್ನು ನೇಮಿಸಬೇಕಾಗುತ್ತದೆ. ಅದು ಆಗದ ಮಾತು. ನಿಮ್ಮ ಬೆಳೆ ನಿಮ್ಮದಾಗಬೇಕು. ಅದಕ್ಕಾಗಿ ನಾನು ಜೈಲಿಗೆ ಹೋಗಲು ಸಿದ್ಧ. ಎಂತಹ ಕಠಿಣ ಸನ್ನಿವೇಶ ಉದ್ಭವಿಸಿದರೂ ಅಂಜುವುದು ಬೇಡ." ಭಾಯಿ ಚಿತ್ರೆ ಹೇಳಿದರು: "ಬಾಬಾಸಾಹೇಬ್ ಮಂಡಿಸಿರುವ ಕರಡು ಶಾಸನವಾದರೆ ಭೂಮಿ ನಿಮ್ಮದು. ಅದು ಅಂಗೀಕಾರ ಪಡೆಯದಿದ್ದರೆ ಒಂದು ಕಾಳು ಧಾನ್ಯವನ್ನು ಸಹ ಖೋತ್‌ಗಳಿಗೆ ಕೊಡುವುದು ಬೇಡ. ಜೈಲಿಗೆ ತೆರಳಲು ಸಿದ್ಧರಾಗೋಣ."

ನಾತು ಗ್ರಾಮದ ಘಟನೆಯೊಂದು ಖೋತ್‌ಗಳ ಚಿತಾವಣೆಯಾಗಿತ್ತು. ಒಬ್ಬ ಮಹಾರ್‌ನ ಜೋಪಡಿಯನ್ನು ಕೆಡವಿಸಲು ಹೋದಾಗ ಖೋತ್‌ಗೆ (ಅವನ ಹೆಸರು ರಘುನಾಥ್ ಬೆಲೋಸೆ) ಬೈಗುಳ ಸುರಿಮಳೆ ಆಯಿತು. "ನನ್ನ ಜಮೀನಿನಲ್ಲಿ ಇವರು ಮರಗಳನ್ನು ಕಡಿದಿದ್ದಾರೆ" ಎಂದು ಅವನು ದೂರು ದಾಖಲಿಸಿದ. ಪೊಲೀಸರು ಮಹಾರನನ್ನು ಬಂಧಿಸಿದರು. ಇದೊಂದು ದೊಡ್ಡ ಪ್ರಕರಣದ ಸ್ವರೂಪ ಪಡೆದು ಕಡೆಗೆ ಕಂದಾಯ ಮಂತ್ರಿ ಮೊರಾರ್ಜಿ ದೇಸಾಯಿ ಕೊಂಕಣದ ಪ್ರವಾಸ ಕೈಗೊಂಡರು. ಮೊರಾರ್ಜಿ ಭಾಷಣ ಎಲ್ಲೆಲ್ಲಿ ಆಯೋಜಿತವಾಗಿತ್ತೋ ಅಲ್ಲೆಲ್ಲಾ ಸ್ವತಂತ್ರ ಲೇಬರ್ ಪಕ್ಷವೂ ಕಾರ್ಯಕ್ರಮಗಳನ್ನು ನಡೆಸಿತು. ಚಿತ್ರೆ, ಸವಾದ್‌ಕರ್, ಪರುಲೇಕರ್, ಟಿಪ್ನಿಸ್, ಮುಂತಾದವರು ಅಲ್ಲಿ ಭಾಷಣಕಾರರು. ಕಡೆಗೆ ಖೋತಿಯ ನಿರ್ಮೂಲನಕ್ಕೆ ಕೈಹಾಕುವುದಿಲ್ಲವೆಂದು ಶಾಸನಸಭೆಯಲ್ಲಿ ಮೊರಾರ್ಜಿ ಹೇಳಿಕೆ ನೀಡಿದರು.

ಇಡೀ ಕೊಂಕಣದಲ್ಲಿ ಭುಗಿಲೆದ್ದಿತು. ೧೯೩೯ರ ಫೆಬ್ರವರಿ ಒಂದನೆಯ ತಾರೀಖು. ಮಾಣ್‌ಗಾಂವ್‌ನಲ್ಲಿ ಪಕ್ಷದ ಬೃಹತ್ ಸಭೆ. ಮೂರು ಸಾವಿರ ರೈತರು ಅಲ್ಲಿ ಉಪಸ್ಥಿತರಿದ್ದರು. ಟಿಪ್ನಿಸ್, ಅಧಿಕಾರಿ, ಖಲೆ, ಪೋಟ್ನಿಸ್, ವಾಡ್ಕೆ, ಮುಂತಾದವರು ಮಾತನಾಡಿದರು. ಖೋತ್‌ಗಳಿಗೆ "ಮಕ್ತಾ" (ಪಾಲು) ಕೊಡುವುದಿಲ್ಲವೆಂಬ ನಿರ್ಣಯವನ್ನು ಅಂಗೀಕರಿಸಲಾಯಿತು. ಸುರ್ಬಾನಾನಾ (ಟಿಪ್ನಿಸ್) ವಿರುದ್ಧ ಖೋತ್‌ಗಳು ದೂರು ಕೊಟ್ಟರು. ಡಾ॥ ಅಂಬೇಡ್ಕರ್ ಅವರ ಪಕ್ಷವನ್ನು ಬಗ್ಗುಬಡಿಯಬೇಕೆಂದು ಸರ್ಕಾರ ತೀರ್ಮಾನಿಸಿತ್ತು. ಮೊಕದ್ದಮೆಯು ಕೊಂಕಣದಲ್ಲೆಲ್ಲಾ ಜನರನ್ನು ಕೆರಳಿಸಿತು. ೧೯೩೯ರ ಜುಲೈ ೧೦ರಂದು ಸ್ವತಃ ಅಂಬೇಡ್ಕರ್ ಅವರೇ ಬ್ಯಾರಿಸ್ಟರ್ ಸಮರ್ಥ್ ಜೊತೆ ನ್ಯಾಯಾಲಯದಲ್ಲಿ ವಾದ ಮಂಡಿಸಲು ಹಾಜರಾದರು. ಸುರ್ಬಾನಾನಾ ಅವರಿಗೆ ಮುನ್ನೂರು ರೂಪಾಯಿ ಜುಲ್ಮಾನೆ ಮತ್ತು ಮೂರು ತಿಂಗಳ ಸೆರೆಮನೆ ವಾಸ ವಿಧಿಸಲಾಯಿತು!

## ಸಿ. ವಿ. ರಾಜಗೋಪಾಲ ಪುರಸ್ಕಾರ

ಶ್ರೀ ಸಿ. ವಿ. ರಾಜಗೋಪಾಲ ಅವರು ಕನ್ನಡದ ಪತ್ರಕರ್ತರಾಗಿ ವಿಶೇಷ ಖ್ಯಾತಿ ಗಳಿಸಿದ್ದವರು. 'ಪ್ರಜಾವಾಣಿ'ಯಲ್ಲಿ ಅನೇಕ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದ ಮಾನ್ಯ ರಾಜಗೋಪಾಲ್ ನಿವೃತ್ತಿಯ ನಂತರ "ಕೆಂಬಾವುಟ" ಪತ್ರಿಕೆಗೂ ಬರೆಯುತ್ತಿದ್ದವರು. ಅಂತೆಯೇ ಬೇರೆ ಕೆಲವು ಪತ್ರಿಕೆಗಳ ಅಂಕಣಕಾರರಾಗಿ ವಿಶಿಷ್ಟ ವಿಶ್ಲೇಷಣೆಗಳಿಗೆ ಹೆಸರಾಗಿದ್ದವರು. ಅವರ ಸ್ಮರಣಾರ್ಥ ಚಿಣ್ಯ ಕುಟುಂಬದವರು 'ಹೊಸತು' ಪತ್ರಿಕೆಯ ಎರಡು ಉತ್ತಮ ಲೇಖನಗಳಿಗೆ ತಲಾ ರೂ. ೫,೦೦೦/- ಪುರಸ್ಕಾರ ೨೦೧೩-೧೪ರಿಂದ ನೀಡುತ್ತಿದ್ದಾರೆ. ಪ್ರತಿ ವರ್ಷ, ಹೊಸತು ಪತ್ರಿಕೆಯ ಆಗಸ್ಟ್ ತಿಂಗಳ ಸಂಚಿಕೆಯಿಂದ ಮುಂದಿನ ಜುಲೈವರೆಗಿನ ಸಂಚಿಕೆಗಳಲ್ಲಿ ಪ್ರಕಟವಾಗುವ ಲೇಖನಗಳನ್ನು ಈ ಪುರಸ್ಕಾರಕ್ಕೆ ಪರಿಗಣಿಸಲಾಗುತ್ತದೆ. ೨೦೧೫-೨೦೧೬ರ ಬಹುಮಾನಗಳನ್ನು **ಸರ್ಫ್ರಾಜ್ ಚಂದ್ರಗುತ್ತಿ** ಮತ್ತು **ಟಿ. ಎಸ್. ವೇಣುಗೋಪಾಲ್** ಅವರಿಗೆ ನೀಡಲಾಗಿದೆ. ಪುರಸ್ಕರಿಸಿದ ಚಿಣ್ಯ ಕುಟುಂಬದವರಿಗೂ, ಪುರಸ್ಕೃತರಿಗೂ 'ಹೊಸತು' ಅಭಿನಂದಿಸುತ್ತದೆ.

– *ಸಂ.*

ಇದರ ನಂತರದ ಇನ್ನೊಂದು ಪ್ರಸಂಗ ಚಿಖಲಾಪ್‌ನಲ್ಲಿ ಜರುಗಿತು. ಅದು ಜಂಜೀರಾ ನವಾಬನ ಪ್ರಾಂತ್ಯಕ್ಕೆ ಸೇರಿತ್ತು. ನವಾಬನ ಸಂಬಂಧಿಕರೇ ಅಧಿಕಾರಿಗಳು. ಮುಂಬೈನಲ್ಲಿ ಕಾರ್ಮಿಕನಾಗಿ ದುಡಿಯುತ್ತಿದ್ದ ಬಾಬಾ ಪಾಂಡು ಮಹರ್ ಒಮ್ಮೆ ತನ್ನೂರಿಗೆ ಬಂದಿದ್ದ. ಇನಾಂದಾರನು ತನ್ನಲ್ಲಿ ಐದು ದಿನ ಬಿಟ್ಟಿ ಕೂಲಿ ಮಾಡಬೇಕೆಂದು ಅವನಿಗೆ ಆಜ್ಞಾಪಿಸಿದ; ಬಾಬಾಜಿ ಒಪ್ಪಲಿಲ್ಲ. ಇನಾಂದಾರನು ಅವನನ್ನು ಕಂಬಕ್ಕೆ ಕಟ್ಟಿ ಚೆನ್ನಾಗಿ ಥಳಿಸಿದ. ಮಹಾರರೆಲ್ಲ ದಂಗೆ ಎದ್ದರು. ಮಹಾರರನ್ನೆಲ್ಲಾ ಊರಿನಿಂದ ಹೊರಹಾಕಲು ಇನಾಂದಾರ ತಂತ್ರ ಹೂಡಿದ. ಸುತ್ತಮುತ್ತಲ ಊರವರೆಲ್ಲಾ ಸೇರಿ ಈ ಬಗ್ಗೆ ತನಿಖೆ ನಡೆಸಬೇಕೆಂದು ನವಾಬನಿಗೆ ಮನವಿ ಸಲ್ಲಿಸಿದರು. ರೈತರ ಪ್ರತಿನಿಧಿಯಾಗಿ ನವಾಬನ ನ್ಯಾಯಾಲಯದಲ್ಲಿ ವಾದ ಮಂಡಿಸಲು ಬಾಬಾಸಾಹೇಬ್ ಅವರು ಚಂದ್ರಕಾಂತ ಅಧಿಕಾರಿಯವರಿಗೆ ಸೂಚಿಸಿದರು. ಮುರುಡ್ ಬಳಿ ಸಮುದ್ರದ ಒಂದು ದ್ವೀಪದಲ್ಲಿ ಜಂಜೀರಾ ಕೋಟೆ ಇದೆ. ನವಾಬ ಅಲ್ಲಿರುತ್ತಿದ್ದ. ಚಂದ್ರಕಾಂತ್ ಅಧಿಕಾರಿಯವರ ಗೋರೆಗಾಂವ್ ಜಂಜೀರಾಕ್ಕೆ ಸೇರಿಲ್ಲ; ಆದ್ದರಿಂದ ಆ ವಕೀಲರಿಗೆ ಅವಕಾಶ ನಿರಾಕರಿಸುವುದಾಗಿ ನವಾಬ ಆಜ್ಞೆಯನ್ನಿತ್ತ.

ಆ ದಿನಗಳಲ್ಲಿ ಒಂದು ದಿನ ಬಾಬಾಸಾಹೇಬ್ ಮತ್ತು ಅನಂತ ಚಿತ್ರೆ ನಾವೆಯಲ್ಲಿ ಧರಮ್‌ತರ್‌ನಿಂದ ಬೊಂಬಾಯಿಗೆ ಪ್ರಯಾಣಿಸುತ್ತಿದ್ದರು. ರೇವಸ್ ಬಂದರಿನಲ್ಲಿ ನವಾಬನ ಮಂತ್ರಿ ಅಚರೇಕರ್ ನಾವೆಯನ್ನೇರಲು ಬಂದುದನ್ನು ಗಮನಿಸಿದ ಬಾಬಾಸಾಹೇಬ್ ಅವರು ಬೇಕೆಂದೇ ಒಂದು ಪುಸ್ತಕ ಓದುವಂತೆ ನಟಿಸುತ್ತಾ ಕೂತರು. ಆತ ಒಳಬಂದು ಎದುರಿಗೆ ಕೂತರೂ ಅಂಬೇಡ್ಕರ್ ಆತನನ್ನು ಮಾತನಾಡಿಸಲಿಲ್ಲ. ಚಿತ್ರೆಯವರನ್ನು ಕರೆದು ದಿವಾನನು ಕೇಳಿದ, "ಅವರಿಗೇಕೆ ನನ್ನ ಮೇಲೆ ಕೋಪ ?" ಎಂದು. ತಮಾಷೆಯಾಗಿ ಚಿತ್ರೆ ಹೇಳಿದರು, "ನಿಮ್ಮ ನವಾಬನು ಬಾಬಾಸಾಹೇಬ್ ಕಳಿಸಿದ ಚಂದ್ರಕಾಂತ್‌ಗೆ ರೈತರ ಪ್ರತಿನಿಧಿಯಾಗಿ ವಾದ ಮಂಡಿಸಲು ಅವಕಾಶ ಕೊಡಲಿಲ್ಲವಲ್ಲ, ಅದಕ್ಕೆ" ಎಂದು. ಕೂಡಲೆ ದಿವಾನನು ಡಾ॥ ಅಂಬೇಡ್ಕರ್ ಅವರ ಕ್ಷಮೆ ಕೇಳಿ ಎರಡು-ಮೂರು ದಿನಗಳಲ್ಲಿ ಚಂದ್ರಕಾಂತ್ ಅವರಿಗೆ ಅನುಮತಿ ನೀಡುವುದಾಗಿ ಹೇಳಿದ ಮತ್ತು ಅಂತೆಯೇ ಪತ್ರವನ್ನು ಕಳಿಸಿಕೊಟ್ಟ.

ಮಾಣ್‌ಗಾಂವ್ ಪ್ರಕರಣಕ್ಕೆ ಮುಂಚೆ ೧೯೩೮ರ ಜನವರಿ ೧೧ರಂದು ಮುಂಬೈನಲ್ಲಿ ಅತ್ಯಧಿಕ ಸಂಖ್ಯೆಯ ರೈತ ಸಭೆಯೊಂದನ್ನು ನಡೆಸಲಾಗಿತ್ತು. ಖೋತಿ ವಿರುದ್ಧದ ಹೋರಾಟದಲ್ಲೆಲ್ಲಾ ಅತ್ಯಂತ ಬೃಹತ್ತಾದ ಮಹತ್ವದ ಸಭೆ ಅದು. ಕೊಂಕಣದಿಂದ ಸಹಸ್ರಾರು ರೈತರಲ್ಲದೆ ಮುಂಬೈನಲ್ಲಿ ವಿವಿಧ ಕೆಲಸಗಳನ್ನು ಮಾಡಿಕೊಂಡಿದ್ದ ಕೊಂಕಣದ ಕಾರ್ಮಿಕರು ಸಭೆಯಲ್ಲಿ ಪಾಲ್ಗೊಂಡಿದ್ದರು. ಸಾತಾರ, ಅಹಮದ್‌ನಗರ, ಪುಣೆ, ಶೋಲಾಪುರ, ಮುಂತಾದ ಜಿಲ್ಲೆಗಳಿಂದಲೂ ಸಾವಿರಾರು ರೈತರು ಬಂದಿದ್ದರು. ಏನಿಲ್ಲವೆಂದರೂ ಸುಮಾರು ೨೫,೦೦೦ ರೈತರ ಸಮಾವೇಶ ಅದು. ಆಜಾದ್ ಮೈದಾನ ರೈತರು, ಅವರ ದೊಣ್ಣೆಗಳು, ಬಾವುಟಗಳು, ಮತ್ತು ಅನೇಕ ಪಕ್ಷಗಳ ಪ್ರತಿನಿಧಿಗಳಿಂದ ತುಂಬಿಹೋಗಿತ್ತು. ಬಹಳ ಶಿಸ್ತಿನ ಮೆರವಣಿಗೆ; ಖೋತಿ ವಿರುದ್ಧದ ಘೋಷಣೆಗಳು : ಕಾಂಗ್ರೆಸ್ ಸರ್ಕಾರಕ್ಕೆ ಇದೆಲ್ಲಾ ಮುಜುಗರ ಉಂಟುಮಾಡಿತ್ತು. ಕೌನ್ಸಿಲ್ ಹಾಲ್ ಬಳಿ ಮೆರವಣಿಗೆಯನ್ನು ಪೋಲೀಸರು ತಡೆದಾಗ ಸಹಸ್ರಾರು ದೊಣ್ಣೆಗಳು ಮೇಲೆದ್ದವು. ಅಂಬೇಡ್ಕರ್ ಅವರು ಶಾಸನಸಭೆಯಲ್ಲಿ ಮಂಡಿಸಿದ್ದ ಕರಡು ಶಾಸನದ ಪರವಾದ ದೊಣ್ಣೆಗಳು ಅವು. ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯ ನಾಯಕರೆಲ್ಲಾ ಅಲ್ಲಿದ್ದರು. ಬಾಬಾಸಾಹೇಬ್ ಅವರು ಮುಖ್ಯಮಂತ್ರಿ ಬಾಳಾಸಾಹೇಬ್ ಖೇರ್ ಅವರ ಜೊತೆ ಕೌನ್ಸಿಲ್‌ನಿಂದ ಹೊರಬಂದು ಸಭೆಯನ್ನುದ್ದೇಶಿಸಿ ಮಾತನಾಡಿದರು. ಖೋತಿ ಪದ್ಧತಿಯ ನಿರ್ಮೂಲನದ ಬಗ್ಗೆ ಖೇರ್ ಏನನ್ನೂ ಹೇಳಲಿಲ್ಲ, ಆದರೆ ಅದನ್ನು ನಿರ್ಮೂಲನ ಮಾಡಿಯೇ ತೀರುವುದಾಗಿ ಬಾಬಾಸಾಹೇಬ್ ಘೋಷಿಸಿದರು.

ಅದಾದ ನಾಲ್ಕು ದಿನಗಳ ನಂತರ ಜನವರಿ ೧೫ರಂದು ಇನ್ನೊಂದು ಬೃಹತ್ ಸಭೆ : ಅದೊಂದು ಜಂಟಿ ಅಧಿವೇಶನ. ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯ ಜೊತೆ ಕಮ್ಯುನಿಸ್ಟ್ ಪಕ್ಷದ ನಾಯಕರೂ ಅದರಲ್ಲಿ ಪಾಲ್ಗೊಂಡಿದ್ದರು. ಶಾಮರಾವ್ ಪರುಲೇಕರ್, ಎಸ್. ಜಿ. ಸರ್ದೇಸಾಯಿ, ಬಿ. ಟಿ. ರಣದಿವೆ ಮುಂತಾದ ಕಮ್ಯುನಿಸ್ಟ್ ನಾಯಕರು ಬಾಬಾಸಾಹೇಬ್, ಭಾಯಿ ಚಿತ್ರೆ, ಸುರ್ಬಾನಾನಾ, ಮುಂತಾದ ನಾಯಕರೊಡನೆ ಕೈಜೋಡಿಸಿ ಖೋತಿಯ ನಿರ್ಮೂಲನಕ್ಕೆ ಪಣತೊಟ್ಟು ಸರ್ಕಾರಕ್ಕೆ ಎಚ್ಚರಿಕೆ ನೀಡಿದ ಅಧಿವೇಶನ ಅದು. ಅದಕ್ಕೂ ಮುಂಚೆ ಕೊಂಕಣದಲ್ಲಿ ಈ ಎರಡು ಪಕ್ಷಗಳಲ್ಲದೆ ರೈತ-ಕಾರ್ಮಿಕ ಪಕ್ಷವೂ ಐಕ್ಯ ಹೋರಾಟಕ್ಕೆ ಸೇರ್ಪಡೆಗೊಂಡಿತ್ತು. ಖೋತಿ ನಿರ್ಮೂಲನವಲ್ಲದೆ ದುಡಿಯುವ ಜನರ ಬೇರಿನ್ನಷ್ಟು ವಿಷಯಗಳ ಚರ್ಚೆಯೂ ಅಧಿವೇಶನದಲ್ಲಿ ನಡೆದಿತ್ತು. ಐಕ್ಯ ಹೋರಾಟಗಳ ಅವಶ್ಯಕತೆಯನ್ನು ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು ಈ ಸಮಾವೇಶದಲ್ಲಿ ಬಹಳ ಒತ್ತುಕೊಟ್ಟು ಪ್ರತಿಪಾದಿಸಿದರು. ಅಂದಿನ ಅವರ ಭಾಷಣದ ಕೆಲವು ಭಾಗಗಳು ಹೀಗಿವೆ : "ಕೊಂಕಣದ ಕೃಷಿ ವಿಭಾಗವನ್ನು ನೋಡಿ; ಜಮೀನ್ದಾರರು ಮತ್ತು ಲೇವಾದೇವಿಯವರು ಸುಲಿಗೆ ಮಾಡುತ್ತಿದ್ದಾರೆ. ಅವರೆಲ್ಲಾ ಸೇರಿ ಒಂದೆರಡು ಸಾವಿರಕ್ಕಿಂತಲೂ ಹೆಚ್ಚಾಗಿಲ್ಲ. ಆದರೆ ದುಡಿಯುವ ನಾವು ಒಂದು ಲಕ್ಷಕ್ಕೂ ಜಾಸ್ತಿ ಇದ್ದೇವೆ. ಆದರೂ ನಾವೇಕೆ ಅಶಕ್ತರು ? ...ಬಡತನವು ಇದಕ್ಕೆ ಮೂಲಕಾರಣ. ಶೋಷಕರನ್ನು ನಾವೆಂದೂ ಬೆಂಬಲಿಸಕೂಡದು. ...ಇಂದು ಇಲ್ಲಿ ಸೇರಿರುವ ನೀವೆಲ್ಲಾ ಬೇರೆಬೇರೆ ಜಾತಿಯವರು, ನಿಮ್ಮನಿಮ್ಮ ಜಾತಿ ಸಂಘಟನೆಗಳನ್ನು ಮಾಡಿಕೊಂಡಿದ್ದೀರಿ. ಅದರಿಂದಾಗಿ ಒಂದು ಧ್ವಜದಡಿ ಹೋರಾಡುವಂತಹ ದುಡಿಯುವ ವರ್ಗದ ಸಂಘಟನೆ ಸಾಧ್ಯವಾಗಿಲ್ಲ. ಆದರೆ ಅಂತಹದೊಂದು ಸಂಘಟನೆಯತ್ತ ಹೆಜ್ಜೆ ಹಾಕಲು ನಾವಿಂದು ಒಟ್ಟಾಗಿ ಸೇರಿದ್ದೇವೆ. ಐಕ್ಯ ಹೋರಾಟ ಸಾಧ್ಯವಿದೆ. ಅದು ಸಂತಸದ ಸಂಗತಿ. ನಾನಿಲ್ಲಿ ಒಂದು ವಿಷಯ ಹೇಳಿದರೆ ತಪ್ಪಾಗಲಾರದು. ನನ್ನ ಕಮ್ಯುನಿಸ್ಟ್ ಸ್ನೇಹಿತರಿಗೆ ಅದು ಆರೋಗ್ಯಕರವೆಂದು ತೋರಬಹುದೆಂದು ಎಣಿಸುತ್ತೇನೆ. ಕಮುನಿಸ್ಟರ ಸಿದ್ಧಾಂತದ ಬಗ್ಗೆ ಇಲ್ಲಿರುವ ಕಮ್ಯುನಿಸ್ಟರೆಲ್ಲರಿಗಿಂತಲೂ ಹೆಚ್ಚಾಗಿ ಬಹಳ ನಿಷ್ಠೆಯಿಂದ ನಾನು ಅಧ್ಯಯನ ಮಾಡಿದ್ದೇನೆ. ಕಮ್ಯುನಿಸ್ಟ್ ಸಿದ್ಧಾಂತವು ಅತ್ಯಾಕರ್ಷಕವಾಗಿ ನನಗೆ ತೋರುತ್ತದೆ; ಅದನ್ನೆಷ್ಟು ಚೆನ್ನಾಗಿ ಬಳಸಿಕೊಳ್ಳುತ್ತೇವೆಂಬುದೇ ದೊಡ್ಡ ಪ್ರಶ್ನೆ. ನಾವು ಕಮ್ಯುನಿಸ್ಟ್ ಸಿದ್ಧಾಂತದಂತೆ ಮುನ್ನಡೆದರೆ ಬೇರೆ ದೇಶಗಳಲ್ಲಿ ಕಮ್ಯುನಿಸ್ಟರು ಸಾಧಿಸಿರುವುದಕ್ಕಿಂತಲೂ ಹೆಚ್ಚಾಗಿ ಇಂಡಿಯಾದಲ್ಲಿ ಸಾಧಿಸಲು ಸಾಧ್ಯವಿದೆ. ಮತ್ತು, ಬೇರೆಡೆಗಳಿಗಿಂತಲೂ ಜಾಗ್ರತೆಯಾಗಿಯೂ ಸಾಧಿಸಬಹುದು. ಆದ್ದರಿಂದಲೇ ದುಡಿಯುವ ಜನತೆಯ ಚಳುವಳಿಗೆ ಕಮ್ಯುನಿಸ್ಟ್ ಸಿದ್ಧಾಂತವು ಬಹಳ ಹತ್ತಿರದ್ದು. ನಮ್ಮ ಸ್ವತಂತ್ರ ಮತ್ತು ಸಂಘಟಿತ ಚಳುವಳಿಯು ಐಕ್ಯತೆಯ ಘಟಕಗಳಿಗೆ ಹಾದಿ ಮಾಡಿಕೊಡಬೇಕೆಂದು ನಾನು ಬಯಸುತ್ತೇನೆ. ನಮ್ಮ ಭಿನ್ನತೆಗಳು ನಮ್ಮ ಹೋರಾಟಗಳಿಗೆ ಅಡ್ಡಿಯುಂಟುಮಾಡಕೂಡದು, ನಾವು ಧೈರ್ಯವಾಗಿ ಮುನ್ನುಗ್ಗಿ ಹೋರಾಡಲು ಸಿದ್ಧರಿರಬೇಕು."

೧೯೨೦ರ ದಶಕದ ಬಾಬಾಸಾಹೇಬರು ಸ್ವಾನುಭವದಿಂದ ಮತ್ತು ಅಪಾರ ವಿಚಾರ ಮಂಥನದಿಂದ ೧೯೪೦ರ ದಶಕದ ವೇಳೆಗೆ ಐಕ್ಯ ಹೋರಾಟಗಳಿಗೆ ಒತ್ತುಕೊಡಲು ಮುಂದಾದರು. ಖೋತಿ ವ್ಯವಸ್ಥೆಯ ವಿರುದ್ಧದ ಹೋರಾಟ ಇನ್ನೂ ಜಾರಿಯಲ್ಲಿದ್ದಾಗಲೆ ಎರಡನೆಯ ಮಹಾಯುದ್ಧ ಆರಂಭವಾಯಿತು. ನಮ್ಮ ದೇಶದ ಯಾವ ಚುನಾಯಿತ ಸರ್ಕಾರವನ್ನೂ ಕೇಳದೆ ಅಂದಿನ ಬ್ರಿಟಿಷ್ ವೈಸ್‌ರಾಯ್ "ಬ್ರಿಟನ್ನಿನೊಡನೆ ಇಂಡಿಯಾ ಯುದ್ಧದಲ್ಲಿ ಪಾಲ್ಗೊಳ್ಳುತ್ತದೆ" ಎಂದು ಏಕಪಕ್ಷೀಯವಾಗಿ ಘೋಷಿಸಿಬಿಟ್ಟ. ಅದರಿಂದಾಗಿ ಚುನಾಯಿತ ಕಾಂಗ್ರೆಸ್ ಸರ್ಕಾರಗಳು ರಾಜಿನಾಮೆ ನೀಡಿ ನಿರ್ಗಮಿಸಿದವು. ಬೊಂಬಾಯಿ ಶಾಸನಸಭೆಯು ಡಾ॥ ಅಂಬೇಡ್ಕರ್ ಅವರು ಮಂಡಿಸಿದ್ದ ಕರಡು ಶಾಸನವನ್ನು ಪೂರ್ತಿಯಾಗಿ ಚರ್ಚಿಸಿ ಅಂಗೀಕರಿಸಲು ಇಲ್ಲವೇ ತಿರಸ್ಕರಿಸಲು ಸಾಧ್ಯವಾಗಲಿಲ್ಲ. ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯು ಇತರರ ಸಹಯೋಗದೊಂದಿಗೆ ಖೋತಿ ವ್ಯವಸ್ಥೆಯ ವಿರುದ್ಧದ ಹೋರಾಟವನ್ನು ಮುಂದುವರಿಸಿತು. ಶಾಸನಬದ್ಧವಾಗಿ ಆ ವ್ಯವಸ್ಥೆಯ ಉತ್ಪಾಟನೆಗೆ ೧೯೪೮ರವರೆಗೆ ಕಾಯಬೇಕಾಯಿತು.

ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರ ನೇತೃತ್ವದಲ್ಲಿ ಆರಂಭವಾದ ಹೋರಾಟವು ಐಕ್ಯಹೋರಾಟವಾಗಿ ರೂಪುಗೊಂಡು ವ್ಯವಸ್ಥೆಗೆ ಬದಲಾವಣೆ ತರುವುದರಲ್ಲಿ ಯಶಸ್ವಿಯಾಯಿತು. ಅವರ ಐಕ್ಯಹೋರಾಟದ ಆಶಯವಿನ್ನೂ ಪ್ರಾಯೋಗಿಕವಾಗಿ ಪೂರ್ಣರೂಪದಲ್ಲಿ ಈಡೇರಿಲ್ಲ. ಅದನ್ನು ಈಡೇರಿಸುವುದು ಇಂದು ನಾವು ಅವರಿಗೆ ನೀಡಬೇಕಾದ ಗೌರವ ಮತ್ತು ಕೀರ್ತಿ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ ನಿಯಮಿತ

**(ಕರ್ನಾಟಕ ಸರ್ಕಾರದ ಒಂದು ಉದ್ದಿಮೆ)**


6ನೇ ಮಹಡಿ, ಒಕ್ಕಲಿಗರ ಭವನ, ಕಿತ್ತೂರು ರಾಣಿ ಚೆನ್ನಮ್ಮ ವೃತ್ತ, ಬೆಂಗಳೂರು - 560 027

ಫೋನ್ : 080-22291471, 22228515. ಫ್ಯಾಕ್ಸ್ : 080-22235790. E-mail : kstidcl.bgl@gmail.com Website : www.kstidcl.org


## ನಿಗಮದ ಯೋಜನೆಗಳು ಮತ್ತು ಕಾರ್ಯಕ್ರಮಗಳು

### ನಿಗಮದ ಸ್ಥಾಪನೆ ಮತ್ತು ಉದ್ದೇಶ

ಕರ್ನಾಟಕ ರಾಜ್ಯದಲ್ಲಿ ವಿದ್ಯುತ್ ಮಗ್ಗ ಕ್ಷೇತ್ರದ ಅಭಿವೃದ್ಧಿ ದೃಷ್ಟಿಯಿಂದ 1994ರಲ್ಲಿ ಕರ್ನಾಟಕ ರಾಜ್ಯ ವಿದ್ಯುತ್ ಮಗ್ಗಗಳ ಅಭಿವೃದ್ಧಿ ನಿಗಮವನ್ನು (KSPDC) ರಾಜ್ಯ ಸರ್ಕಾರವು ಕಂಪನಿ ಕಾಯ್ದೆ 1956ರಲ್ಲಿ ಸ್ಥಾಪಿಸಿ ರಚಿಸಿರುತ್ತದೆ. ನಿಗಮದ ಕಾರ್ಯವ್ಯಾಪ್ತಿಯನ್ನು ವಿದ್ಯುತ್ ಮಗ್ಗ ಕ್ಷೇತ್ರದಿಂದ ಸಮಗ್ರ ಜವಳಿ ಕ್ಷೇತ್ರಕ್ಕೆ ವಿಸ್ತರಿಸಿ 2010ರಲ್ಲಿ ಈ ನಿಗಮವನ್ನು ಕರ್ನಾಟಕ ರಾಜ್ಯ ಜವಳಿ ಮೂಲ ಸೌಲಭ್ಯ ಅಭಿವೃದ್ಧಿ ನಿಗಮ (KSTIDC) ಎಂದು ಮರು ನಾಮಕರಣ ಮಾಡಲಾಗಿದೆ.

### ದೃಷ್ಟಿಕೋನ

"ವಿಶ್ವ ಮಟ್ಟದಲ್ಲಿ ಮಾರುಕಟ್ಟೆ ಸ್ಪರ್ಧೆಗೆ ಅನುಕೂಲವಾಗುವಂತೆ ರಾಜ್ಯದ ಜವಳಿ ಉದ್ಯಮಗಳ ಆರ್ಥಿಕ ಬಲವರ್ಧನೆಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವುದು".

**ಗುರಿ** : 1. ರಾಜ್ಯದಲ್ಲಿ ಜವಳಿ ಕ್ಷೇತ್ರಕ್ಕೆ ಅಗತ್ಯವಿರುವ ಮೂಲಭೂತ ಸೌಲಭ್ಯಗಳ ಬಲವರ್ಧನೆ. 2. ಜವಳಿ ಉದ್ಯಮಗಳನ್ನು ಆರ್ಥಿಕವಾಗಿ ಸದೃಢವಾಗಿ ಮುಂದುವರೆಸಲು ಪೂರಕ ವಾತಾವರಣವನ್ನು ಸೃಷ್ಟಿಸುವುದು. 3. ರಾಜ್ಯದಲ್ಲಿ ಜವಳಿ ಕೈಗಾರಿಕೆಗಳ ಅಭಿವೃದ್ಧಿಯ ದೃಷ್ಟಿಕೋನದಡಿ ಸಾಮಾಜಿಕ ಜವಾಬ್ದಾರಿಯೊಂದಿಗೆ ಉತ್ತಮ ವ್ಯಾವಹಾರಿಕ ಜ್ಞಾನವನ್ನು ಕೈಗಾರಿಕೋದ್ಯಮಿಗಳಲ್ಲಿ ತುಂಬುವುದು.

**ನಿಗಮದ ಧ್ಯೇಯೋದ್ದೇಶಗಳು** : 1) ಜವಳಿ ಉದ್ದಿಮೆದಾರರಿಗೆ ಸಮಗ್ರ ಹಾಗೂ ಅಭಿವೃದ್ಧಿ ಹೊಂದಿದ ಮಾದರಿ ಮೂಲ ಸೌಲಭ್ಯ ಒದಗಿಸುವುದು. 2) ಮಾನವ ಸಂಪನ್ಮೂಲದ ಸಾಮರ್ಥ್ಯ ಅಭಿವೃದ್ಧಿಪಡಿಸಲು ನೆರವು ನೀಡುವುದು. 3) ಯೋಜನೆಗಳ ಹಣಕಾಸು ಅಗತ್ಯತೆಯನ್ನು ಪೂರೈಸಲು ಸಮನ್ವಯ ಮಾಡುವುದು. 4) ಉನ್ನತ ತಂತ್ರಜ್ಞಾನವನ್ನು ಗುರುತಿಸುವುದು, ಹಾಗೂ ಕೌಶಲ್ಯ ಅಭಿವೃದ್ಧಿಯಲ್ಲಿ ನೆರವಾಗುವುದು. 5) ನಿಗಮದಿಂದ ಸದಸ್ಯ ಘಟಕಗಳು ಹಾಗೂ ಜವಳಿ ಕ್ಷೇತ್ರದ ಘಟಕಗಳಿಗೆ ಮಾರಾಟ ಹಾಗೂ ತಾಂತ್ರಿಕ ಸಲಹೆ ನೀಡುವುದು, ವ್ಯವಹಾರ ಅಭಿವೃದ್ಧಿ ಅವಕಾಶಗಳನ್ನು ಗುರುತಿಸುವುದು.

### ಯೋಜನೆಗಳು ....

**1. ವಿದ್ಯುತ್ ಮಗ್ಗ ಸಂಕೀರ್ಣ** : ವಿದ್ಯುತ್ ಮಗ್ಗ ನೇಕಾರರಿಗೆ ವಸತಿ ಕಾರ್ಯಾಗಾರಗಳ ಸೌಲಭ್ಯವೂ ಸೇರಿದಂತೆ ನಿಗಮದಿಂದ ವಿದ್ಯುತ್ ಮಗ್ಗ ಸಂಕೀರ್ಣಗಳನ್ನು ಸ್ಥಾಪಿಸಲಾಗುತ್ತದೆ. ಈ ಯೋಜನೆಯಡಿ ಶೇ.50ರಷ್ಟು ಸಹಾಯಧನವನ್ನು ಗರಿಷ್ಠ ರೂ. 100.00 ಲಕ್ಷಗಳ ಮಿತಿಗೊಳಪಟ್ಟು ಒದಗಿಸಲು ಅವಕಾಶವಿದೆ.

**2. ಐಎಸ್‌ಡಿಎಸ್ ತರಬೇತಿ** : ಸದರಿ ಯೋಜನೆಯಡಿ ವಿದ್ಯುತ್ ಮಗ್ಗ ನೇಕಾರರಿಗೆ ಹಾಗೂ ಸಿದ್ಧ ಉಡುಪು ತರಬೇತಿ ಚಟುವಟಿಕೆಗಳಲ್ಲಿ ವಿವಿಧ ತರಬೇತಿ ಕೇಂದ್ರಗಳ ಮೂಲಕ ತರಬೇತಿ ಕಾರ್ಯಕ್ರಮಗಳನ್ನು ನೀಡಲಾಗುವುದು.

**3. ಆಧುನೀಕರಣ ಯೋಜನೆ** : ಈ ಯೋಜನೆಯಡಿ ವಿದ್ಯುತ್ ಮಗ್ಗಗಳ ಆಧುನೀಕರಣಕ್ಕಾಗಿ ಜಕಾರ್ಡ್, ಡಾಬಿ, ವೆಫ್ಟ್ ಸ್ಟಾಫ್‌ಮೋಷನ್, ವಾರ್ಪ್ ಸ್ಟಾಫ್‌ಮೋಷನ್ ಮತ್ತು ಇತರೆ ಸಲಕರಣೆಗಳಿಗಾಗಿ ಕೇಂದ್ರ ಸರ್ಕಾರದ ರೂ. 10000 ಗಳ ಸಹಾಯಧನಕ್ಕೆ ಹೆಚ್ಚುವರಿ ಸಹಾಯಧನವಾಗಿ ಒಂದು ಮಗ್ಗಕ್ಕೆ ರೂ. 10000 ಗಳಂತೆ ರಾಜ್ಯ ಸಹಾಯಧನ ಒದಗಿಸಲಾಗುವುದು. ಈ ಯೋಜನೆಯನ್ನು ಕೇಂದ್ರ ಸರ್ಕಾರವು ನಿಗದಿಪಡಿಸುವ ವಿದ್ಯುತ್ ಮಗ್ಗ ಕ್ಲಸ್ಟರ್‌ಗಳಿಗೆ ಅನ್ವಯಿಸಲಾಗುವುದು.

**4. ವಿದ್ಯುತ್ ಮಗ್ಗ ಘಟಕಗಳಿಗೆ ಸೋಲಾರ್ ಉಪಕರಣ** : ಗ್ರಾಮಾಂತರ ಪ್ರದೇಶದಲ್ಲಿ ವಿದ್ಯುತ್ ಕೊರತೆಯನ್ನು ಅನುಭವಿಸುತ್ತಿರುವ ವಿದ್ಯುತ್ ಮಗ್ಗ ಘಟಕಗಳಿಗೆ ಸೋಲಾರ್ ವಿದ್ಯುತ್ ಉಪಕರಣಗಳನ್ನು ಶೇ.50 ರ ಸಹಾಯದೊಂದಿಗೆ ಒದಗಿಸಲಾಗುವುದು.

**5. ವಿದ್ಯುತ್ ಮಗ್ಗ ಸೇವಾ ಕೇಂದ್ರಗಳು** : ವಿದ್ಯುತ್ ಮಗ್ಗ ಸೇವಾ ಕೇಂದ್ರಗಳಲ್ಲಿ ವಿದ್ಯುತ್ ಮಗ್ಗ ನೇಯ್ಗೆ ತರಬೇತಿ, ಕ್ಯಾಡ್ ತರಬೇತಿ, ಹೊಲಿಗೆ ಯಂತ್ರ ಚಾಲನಾ ತರಬೇತಿ, ಎಂಬ್ರಾಯಿಡರಿ, ವಿದ್ಯುತ್ ಮಗ್ಗಗಳ ರಿಪೇರಿ ತರಬೇತಿಯನ್ನು ಅಭ್ಯರ್ಥಿಗಳಿಗೆ ನೀಡಲಾಗುವುದು.

**6. ಸಿದ್ಧ ಉಡುಪು ಸಂಶೋಧನೆ ಮತ್ತು ವಿನ್ಯಾಸ ಕೇಂದ್ರ, ಬಳ್ಳಾರಿ** : ಇಲ್ಲಿ ವಿಶ್ವವಿದ್ಯಾಲಯ ಅಂಗೀಕೃತ ಪದವಿ ಕೋರ್ಸ್ ಮತ್ತು ಕೌಶಲ್ಯಾಭಿವೃದ್ಧಿ ತರಬೇತಿ ನೀಡಲಾಗುವುದು.

**7. ಸಿದ್ಧ ಉಡುಪು ತರಬೇತಿ ಕೇಂದ್ರ, ದೊಡ್ಡಬಳ್ಳಾಪುರ** : ದೊಡ್ಡಬಳ್ಳಾಪುರದ ಅಪೆರಲ್ ಪಾರ್ಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಈ ಕೇಂದ್ರದಲ್ಲಿ ಸಿದ್ಧ ಉಡುಪು ತಯಾರಿಕಾ ಕ್ಷೇತ್ರದಲ್ಲಿ ಅಲ್ಪಾವಧಿ ಕೌಶಲ್ಯಾಭಿವೃದ್ಧಿ ತರಬೇತಿ ನೀಡಲಾಗುತ್ತಿದೆ.

**8. ವಿದ್ಯುತ್ ಮಗ್ಗ ನೇಕಾರರಿಗೆ ಗುಂಪು ವಿಮಾ ಯೋಜನೆ** : ಈ ಯೋಜನೆಯಡಿ ವಿದ್ಯುತ್ ಮಗ್ಗ ನೇಕಾರರು ರೂ. 80.00 ಮೊತ್ತದ ಪ್ರೀಮಿಯಮ್ ಪಾವತಿಸಿ ಜಿಐಎಸ್ ನೋಂದಣಿ ಪಡೆಯಬಹುದಾಗಿದೆ. ಯೋಜನೆಯಡಿ ನೋಂದಾಯಿಸಿಕೊಂಡ ವಿದ್ಯುತ್ ಮಗ್ಗ ನೇಕಾರರ 9ರಿಂದ 12 ನೇ ತರಗತಿಯವರಿಗೆ ಓದುತ್ತಿರುವ ಇಬ್ಬರು ಮಕ್ಕಳಿಗೆ ಎಲ್.ಐ.ಸಿ.ಯ ಸಹಯೋಗದಲ್ಲಿ ಶಿಕ್ಷಾ ಸಹಯೋಗ ಯೋಜನೆ ಮೂಲಕ ವಾರ್ಷಿಕ 1200/-ರಂತೆ ವಿದ್ಯಾರ್ಥಿ ವೇತನವನ್ನು ಒದಗಿಸಲಾಗುವುದು.

**9. ವಿದ್ಯುತ್ ಮಗ್ಗ ನೇಕಾರರಿಗೆ ಅಧ್ಯಯನ ಪ್ರವಾಸ** : ಆಧುನಿಕ ತಾಂತ್ರಿಕತೆ, ವಿನ್ಯಾಸ ಅಭಿವೃದ್ಧಿ ಹಾಗೂ ಮಾರುಕಟ್ಟೆ ಬಗ್ಗೆ ನೇಕಾರರಲ್ಲಿ ಅರಿವು ಮೂಡಿಸಲು ಅಧ್ಯಯನ ಪ್ರವಾಸವನ್ನು ಕೇಂದ್ರ ಸರ್ಕಾರದ ಅನುದಾನದೊಂದಿಗೆ ರಾಜ್ಯದಲ್ಲಿರುವ ವಿದ್ಯುತ್ ಮಗ್ಗ ನೇಕಾರರಿಗಾಗಿ ವಿದ್ಯುತ್ ಮಗ್ಗ ಸೇವಾ ಕೇಂದ್ರಗಳ ಮೂಲಕ ಏರ್ಪಡಿಸಲಾಗುವುದು.

**10. ಪವರ್‌ಲೂಮ್ ಪಾರ್ಕ್ ಸ್ಥಾಪನೆ** : ಉನ್ನತೀಕೃತ ತಾಂತ್ರಿಕ ಸೌಲಭ್ಯಗಳೊಂದಿಗೆ ವಿದ್ಯುತ್ ಮಗ್ಗಗಳ ಪಾರ್ಕ್‌ಗಳನ್ನು ಸ್ಥಾಪಿಸಲಾಗುವುದು. ಈ ವಿದ್ಯುತ್ ಮಗ್ಗ ಪಾರ್ಕ್‌ಗಳಲ್ಲಿ ವಿದ್ಯುತ್ ಮಗ್ಗಗಳಿಗೆ ಅವಶ್ಯಕವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುವುದು.

**11. ವಿದ್ಯಾ ವಿಕಾಸ ಯೋಜನೆ** : ಶಿಕ್ಷಣ ಇಲಾಖೆಯು ವಿದ್ಯಾ ವಿಕಾಸ ಯೋಜನೆಯಡಿಯಲ್ಲಿ ರಾಜ್ಯದಲ್ಲಿರುವ ಎಲ್ಲ ಸರ್ಕಾರಿ ಶಾಲೆ ಮಕ್ಕಳಿಗೆ ಸಮವಸ್ತ್ರ ಬಟ್ಟೆಯನ್ನು ಒದಗಿಸುವ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ.

**12. ಮೆಗಾ ಸಿಲ್ಕ್ ಕ್ಲಸ್ಟರ್ ಮೈಸೂರು** : ಕರ್ನಾಟಕ ರಾಜ್ಯದಲ್ಲಿನ ಪಾರಂಪರಿಕವಾಗಿ ರೇಷ್ಮೆ ಉದ್ಯಮವನ್ನು ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಕೇಂದ್ರ ಸರ್ಕಾರದ ಸಿಪಿಸಿಡಿಎಸ್ ಯೋಜನೆಯಡಿ ಮೈಸೂರಿನಲ್ಲಿ ಮೆಗಾ ಸಿಲ್ಕ್ ಕ್ಲಸ್ಟರ್ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**13. ಯಾದಗಿರಿ ಜಿಲ್ಲೆಯ ಬಂದಳ್ಳಿ ಗ್ರಾಮದಲ್ಲಿ ಹೈಟೆಕ್ ಟೆಕ್ಸ್‌ಟೈಲ್ ಟ್ರೈನಿಂಗ್ ಸೆಂಟರ್ ಸ್ಥಾಪನೆ** : ಹೈದರಾಬಾದ್ ಕರ್ನಾಟಕ ಪ್ರದೇಶದ ಹಿಂದುಳಿದ ಜಿಲ್ಲೆಯಾದ ಯಾದಗಿರಿಯ ಬಂದಳ್ಳಿ ಗ್ರಾಮದಲ್ಲಿ ಅತ್ಯಾಧುನಿಕ ತಾಂತ್ರಿಕತೆಯ ಜವಳಿ ತರಬೇತಿ ಕೇಂದ್ರವನ್ನು ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಅನುದಾನದಲ್ಲಿ ಸ್ಥಾಪಿಸಲಾಗುತ್ತಿದೆ.

ಯರ್ರಿಸ್ವಾಮಿ ಈ.

# ಜಾತಿ ಮತ್ತು ಲಿಂಗ ಸಮ್ಮಿಲನದ ಶೋಷಣೆಯನ್ನು ತೆರೆದಿಟ್ಟ ಶರ್ಮಿಳಾ ರೇಗೆ

ಶರ್ಮಿಳಾ ರೇಗೆ ಅವರು ಜಂಡರ್ ಅಧ್ಯಯನ, ದಲಿತ ಅಧ್ಯಯನದಲ್ಲಿ ಚಿರಪರಿಚಿತರು. ರೇಗೆ ೧೯೬೪ ಅಕ್ಟೋಬರ್ ೭ರಂದು ಮಹಾರಾಷ್ಟ್ರ ರಾಜ್ಯದ ಪುಣೆ ಜಿಲ್ಲೆಯಲ್ಲಿ ಜನಿಸಿದರು. ಪುಣೆಯಲ್ಲಿಯೇ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮುಗಿಸಿದ ಅವರು ಪುಣೆಯ ಫರ್ಗ್ಯುಸನ್ ಕಾಲೇಜಿನಲ್ಲಿ ಪದವಿಪೂರ್ವ ಮತ್ತು ಪದವಿ ಅಧ್ಯಯನ ಮುಗಿಸಿ, ಪುಣೆ ವಿಶ್ವವಿದ್ಯಾಲಯದಲ್ಲಿ ಎಂ.ಎ. ಹಾಗೂ ಎಂ.ಫಿಲ್ ಅನ್ನು ಸಮಾಜಶಾಸ್ತ್ರ ವಿಷಯದಲ್ಲಿ ಗಳಿಸಿದರು. ತತ್‌ಕ್ಷಣವೇ ಪುಣೆಯ ಶ್ರೀಮತಿ ಮೀರಾ ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿಯನ್ನು ಪ್ರಾರಂಭಿಸಿದ್ದರು. ಈ ಮಧ್ಯೆ ಪುಣೆ ವಿಶ್ವವಿದ್ಯಾಲಯವು ಕ್ಯಾಂಪಸಿನಲ್ಲಿ ಮಹಿಳಾ ಅಧ್ಯಯನದ ಕೇಂದ್ರ ಆರಂಭಿಸಿತ್ತು. ೧೯೯೧ರಲ್ಲಿ ಯುಜಿಸಿ, ಮಹಿಳಾ ಅಧ್ಯಯನ ಕೇಂದ್ರಕ್ಕೆ ಬೋಧನಾ ಹುದ್ದೆಯನ್ನು ಕೊಡಮಾಡಿತು. ಇದರ ಮೊದಲ ಭಾಗದಲ್ಲಿ ಶರ್ಮಿಳಾ ರೇಗೆಯನ್ನು ಮಹಿಳಾ ಅಧ್ಯಯನ ಕೇಂದ್ರಕ್ಕೆ ಕರೆ ತರಲಾಯಿತು. ಆಗ ಶರ್ಮಿಳಾ ಅವರು ತುಂಬ ವಿಭಿನ್ನವಾಗಿದ್ದರು. ಅಂದರೆ ಆಕೆಯ ಭಾವನೆಯಲ್ಲಿ ಅಧ್ಯಯನವು ಸಾಮಾಜಿಕ ವ್ಯವಹಾರ ನಿರ್ವಹಣೆಗೆ ಉಪಯೋಗಿಸಲ್ಪಡುವ ಜ್ಞಾನದ ಅನ್ವೇಷಣೆಗಾಗಿ ನಡೆಯುವ ಹುಡುಕಾಟವಾಗಿತ್ತು. ಅವರು ಅಧ್ಯಯನ ಮತ್ತು ಚಳುವಳಿಗಳೆರಡರ ಮಧ್ಯೆ ಒಂದು ಕೊಂಡಿಯಾಗಿ ಕಾರ್ಯನಿರ್ವಹಿಸಿದರು. ಈ ಎರಡೂ ಒಂದರೊಳಗೊಂದು ಬೆರೆತು ಸಂಘಟಿತವಾಗಿವೆ ಎಂದು ನಂಬಿದ್ದರು. ಆಕೆಯ ಲೇಖನಗಳು ಸ್ತ್ರೀವಾದಿ ಹಾಗೂ ದಲಿತ ಸತ್ಯಶೋಧಕ ಚಳುವಳಿಗಳಿಗೆ ಒಂದು ಹೊಸ ಸೈದ್ಧಾಂತಿಕ ಅಡಿಪಾಯವನ್ನು ಇತ್ತವು. ಈ ರೀತಿಯಾಗಿ ಶರ್ಮಿಳಾ, ಮಹಿಳಾ ಅಧ್ಯಯನ ಕೇಂದ್ರದ ಬೋಧನೆ ಹಾಗೂ ಸಂಶೋಧನೆಯ ಚಟುವಟಿಕೆ ಎರಡರಲ್ಲೂ ಆಮೂಲಾಗ್ರ ಬದಲಾವಣೆಯನ್ನು ತಂದರು. ರೇಗೆ ಅವರು ತಮ್ಮ ತರಗತಿಗಳಲ್ಲಿ ವಿದ್ಯಾರ್ಥಿಗಳು ಹಾಗೂ ಸಾಮಾಜಿಕ ಪ್ರತಿಭಟನೆಗಳ ಕಾರ್ಯಕರ್ತರ ನಿಜ ಜೀವನದ ಅನುಭವಗಳ ಹಾಗೂ ಸಮೂಹ ಜೊತೆಗಿನ ಅವರ ಪರಸ್ಪರ ಸಂಬಂಧವು ಯಾವ ರೀತಿಯಲ್ಲಿ ಅವರ ಸಾಮಾಜಿಕ ವಾಸ್ತವತೆಯ ಅರಿವನ್ನು ಹೆಚ್ಚಿಸುತ್ತದೆ ಎಂಬ ಅಂಶಗಳಿಗೆ ಹೆಚ್ಚಿನ ಗಮನವನ್ನು ನೀಡುತ್ತಿದ್ದರು. ಅದರಂತೆಯೇ ಒಂದೆಡೆ ಸಿದ್ಧಾಂತ ಮತ್ತು ವಿಚಾರಧಾರೆಗಳು, ಇನ್ನೊಂದೆಡೆ ಸಿದ್ಧಾಂತ, ವಿಚಾರಧಾರೆ ಹಾಗೂ ರೂಢಿಗತ ಪದ್ಧತಿಗಳ ನಡುವಿನ ನಿಕಟ ಸಂಪರ್ಕದ ಮೇಲೆಯೂ ಅವರ ಚರ್ಚೆ ಕೇಂದ್ರೀಕೃತವಾಗಿರುತ್ತಿತ್ತು. ಹೀಗೆ ರೇಗೆ ಅವರು ೪೮ ವರ್ಷದ ಜೀವಿತಾವಧಿಯಲ್ಲಿ ಅರ್ಧ ಭಾಗವನ್ನು ಪುಣೆ ವಿಶ್ವವಿದ್ಯಾಲಯದಲ್ಲಿ ಕಳೆದರು. ೨೨ ವರ್ಷಗಳು ಮಹಿಳಾ ಅಧ್ಯಯನ ಕೇಂದ್ರದಲ್ಲಿ ಬೋಧನಾ – ಸಂಶೋಧನಾ ಹಾಗೂ ಚಳುವಳಿಯನ್ನು ಕಟ್ಟಲು ಜೀವನದುದ್ದಕ್ಕೂ ಶ್ರಮಿಸಿದರು.

ಅಂಬೇಡ್ಕರರ ಚಿಂತನೆಗಳನ್ನು ಸಾಂಪ್ರದಾಯಿಕ ಬ್ರಾಹ್ಮಣ ಸಮಾಜ ರೂಢಿಗತವಾಗಿ ನಿರ್ಲಕ್ಷ್ಯ ಮಾಡಿದೆ ಎಂದು ಹೇಳುತ್ತಾರೆ. ಸುಮಾರು ಎರಡು ದಶಕಗಳ ಹಿಂದೆ ರೇಗೆಯು ವಿವಿಧ ಸಾರ್ವಜನಿಕ ಕೌಂಟರ್‌ಗಳಿಂದ ಉತ್ಪತ್ತಿಯಾದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಹಾಗೂ ದಲಿತ ಸ್ತ್ರೀವಾದಿ ದೃಷ್ಟಿ ಹಾಗೂ ಸ್ಪಷ್ಟೋಕ್ತಿಗಳಲ್ಲಿ ಜ್ಞಾನದ ಜಗತ್ತನ್ನು ಕಟ್ಟುವ ಮಹತ್ವದ ಬಗ್ಗೆ ಗಮನಹರಿಸಲು ಹೇಳಿದರು. ನಾವು ಜ್ಞಾನವನ್ನು ಗಳಿಸುವ ಬಗ್ಗೆ ಚಿಂತನಶೀಲರಾಗಿರಬೇಕು. ಅಂದರೆ ಯಾವ ಸಂದರ್ಭಗಳಲ್ಲಿ, ಯಾವ ಸ್ಥಳಗಳಿಂದ ಮತ್ತು ಎಂಥ ವಿವಾದಿತ ಸಾಧನಗಳ ಮೂಲಕ ನಾವು ಸೈದ್ಧಾಂತಿಕರಿಸುತ್ತೇವೆ ಮತ್ತು ವಾದಿಸುತ್ತೇವೆ. ಹಾಗೆಯೇ ಅದನ್ನು ಅಂತರ್ಗತಗೊಳಿಸಿಕೊಳ್ಳುತ್ತ ಕೊನೆಗೊಳಿಸುತ್ತೇವೆ.

**ಶರ್ಮಿಳಾ ರೇಗೆ ಅವರ ಬರಹ ಮತ್ತು ಚಿಂತನೆಗಳು**

ಶರ್ಮಿಳಾ ರೇಗೆ ಅವರ ಅಪಾರ ಸಂಶೋಧನೆಯ ಕಾರ್ಯದಿಂದಾಗಿ ೫ ಕೃತಿಗಳು, ೨೯ ಲೇಖನಗಳು ಪ್ರಕಟವಾಗಿವೆ. ಅದರಲ್ಲಿ ಕೆಲವು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಾಗೂ ಮರಾಠಿ ಪತ್ರಿಕೆಯಲ್ಲಿ ಬಂದಿರುವ ಲೇಖನಗಳಿದ್ದರೆ, ಮತ್ತೆ ಕೆಲವು ಲೇಖನಗಳು ವಿವಿಧ ಲೇಖಕರು ಸಂಪಾದಿಸಿರುವ ಕೃತಿಯಲ್ಲೂ ಪ್ರಕಟವಾಗಿವೆ. ಹಾಗೆಯೇ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ, ಉಪನ್ಯಾಸ, ವಿವಿಧ ಪುಸ್ತಕಗಳಿಗೆ ಬರೆದ ಮುನ್ನುಡಿ ಮತ್ತು ಪ್ರಸ್ತಾವನೆಗಳ ರೂಪದಲ್ಲಿ

ಪ್ರಕಟವಾದಂತಹವು ಇವೆ. ಈ ಲೇಖನಗಳಲ್ಲಿ ಕಾಂಟ್ರಿಬ್ಯೂಷನ್ಸ್ ಟು ಇಂಡಿಯನ್ ಸೋಷಿಯಾಲಜಿ (ಸಂಚಿಕೆ ೨೯, ಇಶ್ಯು ೧-೨, ೧೯೯೫) ಪತ್ರಿಕೆಯಲ್ಲಿ ಪ್ರಕಟವಾದ ಲಾವಣಿ ಹಾಗೂ ತಮಾಶಾ (ತಮಾಶಾವು ಮಹಾರಾಷ್ಟ್ರ ರಾಜ್ಯದ ಸಾಂಪ್ರದಾಯಿಕ ಜಾನಪದ ನೃತ್ಯಕಲಾ ಪ್ರಕಾರ) ಲೇಖನವು ಅತ್ಯಂತ ಜನಪ್ರಿಯತೆಯನ್ನು ಪಡೆದಿತ್ತು. ಈ ಲೇಖನದಲ್ಲಿ ಸಾಂಸ್ಕೃತಿಕ ಅಭಿವ್ಯಕ್ತಿಗಳು, ಜಾನಪದ ರೂಪಗಳು ಮಹಿಳಾ ಕಲಾಕಾರರನ್ನು ಯಾವ ರೀತಿಯಾಗಿ ಲೈಂಗಿಕತೆಯ ಚೌಕಟ್ಟಿನಲ್ಲಿ ಪರಿಭಾವಿಸುತ್ತವೆ ಎಂಬುದನ್ನು ಒಂದು ವಿಶೇಷ ವಿಶ್ಲೇಷಣೆಗೆ ಒಳಪಡಿಸಲಾಗಿತ್ತು. ಅದೇ ರೀತಿಯಲ್ಲಿ ಸಂಸ್ಕೃತಿಯ ಜನಪ್ರಿಯ ರೂಪಗಳು ಉಪೇಕ್ಷಿತರನ್ನು ಗುರುತಿಸುವುದು. ಅವರು ವಿವೇಕ ಶುದ್ಧರಾಗಿ ಹೊರಹೊಮ್ಮಲು ಸಹಾಯಕವಾಗುವ ಸಾಧ್ಯತೆಗಳನ್ನು ನಿರೂಪಿಸುತ್ತಾ, ರೇಗೆ ಇದನ್ನು 'ಕೌಂಟರ್ ಪಾಲಿಟಿಕ್ಸ್' ಎಂದು ಕರೆದರು. ರೇಗೆಯವರ ಈ ಕೆಲಸ ವಿಭಾಗಗಳ ನಡುವಿರುವ ಸೀಮೆಗಳು ತಮ್ಮ ಅರ್ಥ ಹಾಗೂ ಉದ್ದೇಶಗಳನ್ನು ಕಳೆದುಕೊಳ್ಳಲು ಆರಂಭಿಸಿದವು. ಸಂಶೋಧನೆ ಮತ್ತು ಜ್ಞಾನದ ಹುಡುಕಾಟಗಳಿಗೆ ಔಪಚಾರಿಕ ಚೌಕಟ್ಟನ್ನು ಇಟ್ಟುಕೊಳ್ಳುವುದು ಸೀಮಿತತೆಯನ್ನು ತೋರಿಸುತ್ತದೆ. ಆ ಚೌಕಟ್ಟಿನಿಂದ ಆಚೆಗಿನ ಹುಡುಕಾಟ ಜ್ಞಾನವನ್ನು ಕೊಡುತ್ತದೆ ಎಂದು ಇದು ತೋರಿಸಿಕೊಟ್ಟಿತ್ತು. ಜನಪ್ರಿಯ ಸಂಸ್ಕೃತಿ ಕುರಿತ ರೇಗೆಯ ಕೆಲಸ ನಾವು ಅಂದುಕೊಂಡ ಸಂಸ್ಕೃತಿ ರಾಜಕಾರಣದ ತಿಳುವಳಿಕೆಯನ್ನು ಒಡೆದು ಹೊಸ ಚಿಂತನೆಯನ್ನು ಕಟ್ಟಿಕೊಡುತ್ತದೆ. ಸಂಸ್ಕೃತಿ ಹೋರಾಟದ ಜಿಜ್ಞಾಸೆಯಲ್ಲಿ ಜಾತಿ ಮತ್ತು ಶ್ರಮ ಸಂಸ್ಕೃತಿ ಯಾವ ನೆಲೆಯಲ್ಲಿದೆ ? ಸಂಸ್ಕೃತಿಯ ಅರ್ಥದ ಹೋರಾಟಕ್ಕೂ ಮತ್ತು ಜೀವನೋಪಾಯಕ್ಕಾಗಿ ಸಂಸ್ಕೃತಿಯ ಹೋರಾಟಕ್ಕೂ ಇರುವ ಒಳಸಂಬಂಧ ಯಾವುದು ? ಯಾವ ನಿರ್ದಿಷ್ಟ ದಾರಿಗಳು ಶ್ರಮ ಸಂಸ್ಕೃತಿಯನ್ನು ಜಂಡರ್‌ನ್ನಾಗಿ ಮಾಡಿದೆ ಎಂದು ಚರ್ಚಿಸುತ್ತಾ ಜನಪ್ರಿಯ ಸಂಸ್ಕೃತಿಯ ಬಗೆಗೆ ಇದ್ದ ಮೊದಲಿನ ಚಿಂತನೆಗಳನ್ನು ಮರು ನಿರ್ಮಿಸುತ್ತಾರೆ.




ಹಾಗೆಯೇ ಶರ್ಮಿಳಾ ರೇಗೆ ಅವರು ನವೆಂಬರ್ ೧೯೯೮ರಲ್ಲಿ ದಲಿತರ ಧ್ವನಿ, ದೂರದೃಷ್ಟಿ ಮತ್ತು ರಾಜಕೀಯ ಸಮರ್ಥನೆ ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ದಲಿತ ಸ್ತ್ರೀವಾದಿ ನಿಲುವು ಎಂಬ ಪ್ರಬಂಧವು ೪೭೧ನೆಯ ದಲಿತ ವಿಚಾರ ಸಂಕಿರಣ ಸಂಚಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖನದಲ್ಲಿ ರೇಗೆ ಅವರು ಒಬ್ಬರ ವಿಮೋಚನೆಯು 'ಅವರ ವೈಯಕ್ತಿಕ ಅನುಭವ, ಸಮಾಜ ರಚಿತವಾದ ಗುಂಪುಗಳ ಅನುಭವಗಳಿಂದಲೇ ಕೇಂದ್ರೀಕೃತಗೊಂಡಿರುತ್ತವೆ'. ಶ್ರೇಣೀಕೃತ ಅಧಿಕಾರ ಸಂಬಂಧ ಅಂತಹ ಗುಂಪುಗಳನ್ನು ರಚಿಸುತ್ತದೆ ಎಂದು ಹೇಳುತ್ತಾ 'ದಲಿತ ಮಹಿಳೆ'ಯ ಸಂಕೀರ್ಣತೆಯನ್ನು ಬಿಚ್ಚಿಡುತ್ತಾರೆ. ಜಂಡರ್, ವರ್ಣ, ವರ್ಗ, ಜಾತಿ ಮತ್ತು ಲೈಂಗಿಕತೆ ಹೇಗೆ ಒಂದಕ್ಕೊಂದು ರಚಿಸಲ್ಪಟ್ಟಿವೆಯೋ ಹಾಗೆಯೇ ದಲಿತ ಮಹಿಳೆ ಮತ್ತು ದಲಿತ ಸ್ತ್ರೀವಾದ ಕಟ್ಟಲ್ಪಟ್ಟಿದೆ ಎಂದು ಅರ್ಥೈಸುತ್ತಾರೆ. ಅದೇ ಫುಲೆ-ಅಂಬೇಡ್ಕರ್‌ರ ಜಾತಿ ವಿರೋಧಿ ಸಮುಚ್ಚಯವು ಸಮಾಜ ವಿರೋಧದಿಂದ ಕೂಡಿದೆ ಹಾಗೂ ಇತಿಹಾಸದ ಜ್ಞಾನ ಶಿಸ್ತಿಗೆ ಸ್ಥಳಾಂತರಗೊಂಡಿದೆ ಎಂದು ಹೇಳಿದ್ದಾರೆ. ದಲಿತ ಸ್ತ್ರೀವಾದ ದೃಷ್ಟಿಕೋನದ ಮೇಲೆ ಈ ಪರಿಣಾಮವನ್ನು ಕಾಣಬಹುದು. ದಲಿತ ಮಹಿಳೆಯ ಕೆಲಸ ಮತ್ತು ಹೋರಾಟದ ಬಗ್ಗೆ, ಬೌದ್ಧಿಕ ದಲಿತ ಸ್ತ್ರೀವಾದ ಒಂದು ಕಡೆ ಕಾರ್ಯನಿರ್ವಹಿಸಿದರೆ; ಮತ್ತೊಂದು ಕಡೆ ಇತರ ಗುಂಪಿನ ಮಹಿಳೆಯರ ಅನುಭವ ಮತ್ತು ವಿಚಾರಗಳು ಚರಿತ್ರೆ ನೆಲೆಯಲ್ಲಿ ನಿಂತು ತಮ್ಮನ್ನು ತಾವು ಶಿಕ್ಷಿಸಿಕೊಳ್ಳುವವರ ಜೊತೆಗೆ ಸಾಮಾಜಿಕ ಸಂಬಂಧಗಳ ಪ್ರಾಮುಖ್ಯತೆ ಮತ್ತು ಯುಟೋಪಿಯಾ / ಕಲ್ಪನೆ ಹಾಗೂ ಅಂಚಿನ ಸಮುದಾಯಗಳ ಹೋರಾಟದ ಕುರಿತು ರೇಗೆ ಚರ್ಚಿಸುತ್ತಾರೆ. ಜಾತಿ ಮತ್ತು ಅದರ ಸಾಮರ್ಥ್ಯಗಳು ಸಮಾಜದ ರಚನಾತ್ಮಕ ವ್ಯತ್ಯಾಸದ ಮಧ್ಯವರ್ತಿಗಳಾಗಿ ಭೂಮಿ ಮತ್ತು ಜೀವನೋಪಾಯ ನಿರ್ವಹಿಸಿದ ಸಂಗತಿಗಳನ್ನು ದಲಿತ ಸ್ತ್ರೀವಾದ ದೃಷ್ಟಿಕೋನದ ನೆಲೆಯಲ್ಲಿ ನಿಂತು ಆಕೆ ಲೋಕಾಯತದವರೆಗೆ ವಿಸ್ತರಿಸಿರುವುದನ್ನು ಕಾಣಬಹುದು. ಹೀಗೆ ಶರ್ಮಿಳಾ ಎಂದಿಗೂ ಪ್ರಕಟಣೆಯ ಹಿಂದೆ ಹೋಗಲಿಲ್ಲ. ಆಕೆಯ ಕೆಲವು ಗಂಭೀರ ವಿಮರ್ಶಾತ್ಮಕ ಲೇಖನಗಳಿಂದಾಗಿ ಒಬ್ಬ ಗುಣಮಟ್ಟದ ಸಂಶೋಧನಾಕಾರ್ತಿ ಎಂಬುದನ್ನು ಸಾಬೀತು ಮಾಡಿದರು.

ಶರ್ಮಿಳಾ ರೇಗೆ ಅವರ ಕೃತಿಗಳಲ್ಲಿ 'ಜಾತಿ ಬರವಣಿಗೆ/ಜಂಡರ್ ಬರವಣಿಗೆ : ದಲಿತ ಮಹಿಳೆಯ ನಿರೂಪಣೆಯ ವ್ಯಾಖ್ಯಾನ' ಪುಸ್ತಕ ಪ್ರಮುಖವಾದುದು. ಈ ಕೃತಿಯಲ್ಲಿ ಕಳೆದ ದಶಕದಿಂದ ದಲಿತ ಬಹುಜನ ಮಹಿಳಾ ಸಂಘಟನೆಯು ಸ್ಥಳೀಯ ಮತ್ತು ರಾಷ್ಟ್ರ ಮಟ್ಟದಲ್ಲಿ ಪ್ರತ್ಯೇಕಗೊಳ್ಳುತ್ತಿದೆ. ಇದು ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳನ್ನು ಹೊರಗಿರಿಸುತ್ತದೆ. ಅಲ್ಲದೆ, ದಲಿತ ಮತ್ತು ಸ್ತ್ರೀವಾದಿ ರಾಜಕಾರಣವನ್ನು ದಲಿತ ಮಹಿಳಾ ಚಳುವಳಿಯು ವರ್ಗಾಯಿಸುತ್ತಿದೆ. ಹಾಗೆಯೇ ವಿಶ್ವವಿದ್ಯಾಲಯ, ಅಧಿಕಾರಶಾಹಿ, ಮಹಿಳಾ ಚಳುವಳಿ ಮತ್ತು ಮಹಿಳಾ ಅಧ್ಯಯನದಲ್ಲಿ ನಡೆಯುತ್ತಿರುವ ಜಾತಿ ಉತ್ಪಾದನೆಯ ವಿರುದ್ಧ ಹೋರಾಡುತ್ತಿದೆ. ಜಾತಿ ಅಸ್ತಿತ್ವವನ್ನು ವೈಯಕ್ತಿಕ ಮತ್ತು ಸಾರ್ವಜನಿಕ ನೆಲೆಯಲ್ಲಿ ಪ್ರಶ್ನಿಸಲಾಗುತ್ತದೆ ಜೊತೆಗೆ ಸಮಕಾಲೀನ ಭಾರತ ಜಾತಿ ಮತ್ತು ಜಂಡರ್ ಪ್ರಶ್ನೆಗಳನ್ನು ಅರ್ಥಮಾಡಿಕೊಳ್ಳಲು ಗಂಭೀರ ಸವಾಲುಗಳನ್ನು ಎದುರಿಸುತ್ತಿದೆ.

ಇತಿಹಾಸದಲ್ಲಿ ಭಾಗಿಯಾದವರು ಇತಿಹಾಸವನ್ನು ಇತರರಿಗಿಂತ ಉತ್ತಮವಾಗಿ ಬರೆಯಬಲ್ಲರು. ಜಾತಿಯ ಜೀವಂತ ಅನುಭವಗಳನ್ನು ವಿಶ್ವವಿದ್ಯಾಲಯದ ಕೋರ್ಸ್ ಒಳಗೊಂಡಿಲ್ಲ. ಈ ಕೊರತೆಯನ್ನು ತುಂಬುವುದು ಈ ಯೋಜನೆಯ ಕಾರ್ಯವಾಗಿದೆ ಎಂದು ರೇಗೆ ಮುನ್ನುಡಿಯಲ್ಲಿ ತಿಳಿಸುತ್ತಾರೆ. ಈ ಪುಸ್ತಕ ಎರಡು ಭಾಗಗಳನ್ನು ಒಳಗೊಂಡಿದ್ದು, ಮೊದಲ ಭಾಗದಲ್ಲಿ ಐತಿಹಾಸಿಕ ಹಿನ್ನೆಲೆಯಿಂದ ಪ್ರಾರಂಭವಾಗಿ ದಲಿತ ಮಹಿಳೆಯರ ಸಂಕಥನಗಳನ್ನು ಒಳಗೊಳ್ಳುವ ವಿನ್ಯಾಸವನ್ನು ವಿವರಿಸುತ್ತದೆ. ಪ್ರಾರಂಭದಲ್ಲಿರುವ ೮ ಸಂಕಥನಗಳು ಓದುಗರಿಗೆ ದುಃಖ, ಬೇಜಾರನ್ನುಂಟುಮಾಡಬಹುದು. ಇದನ್ನು ಎದುರಿಸಿ ಹೇಗೆ ಈ ಎಂಟು ಮಹಿಳೆಯರು ಗುರಿಯನ್ನು ಸಾಧಿಸಿದರು ಎಂಬುದನ್ನು ಮುಂದಿನ ಭಾಗದಲ್ಲಿ ವಿವರಿಸುತ್ತಾರೆ. ೧೯೨೦ರ ಪ್ರಾರಂಭದಿಂದ ಇಲ್ಲಿಯವರೆಗಿನ ನಿರೂಪಣೆಯಲ್ಲಿ ವಿವಿಧ ಕಾಲಘಟ್ಟಗಳಲ್ಲಿ ದಲಿತ ಸ್ತ್ರೀವಾದಿ ಚಳುವಳಿ, ಜಾತಿ ಯುದ್ಧ ಮತ್ತು ಇತರ ಸಾಮಾಜಿಕ-ಆರ್ಥಿಕ ವಿಷಯಗಳಿಗೆ ರೇಗೆ ಒತ್ತುಕೊಟ್ಟು ಹೇಳುತ್ತಾರೆ. ಉದಾಹರಣೆಗಾಗಿ ಬೇಬಿತಾಯಿ ಕಾಂಬಳೆ ಮತ್ತು ಶಾಂತಾಬಾಯಿ ಕಾಂಬಳೆ ಅವರ ಕಥೆಗಳು, ಅಂಬೇಡ್ಕರ್ ಪೂರ್ವದ ಮಹಾರ ಸಮುದಾಯದ ಜೀವನ ಮತ್ತು ಅಂಬೇಡ್ಕರ್ ಚಳುವಳಿಯ ಅಗತ್ಯವನ್ನು ಹೇಳುತ್ತವೆ, ಇದೇ ಸಮಯದಲ್ಲಿ ಶಾಂತಾಬಾಯಿ ದಾನಿ ಮತ್ತು ಕುಮುದ ಪಾವಡೆ ಅವರ ಜಂಡರ್ ವಿಷಯಗಳ ಕುರಿತು ಮಾತನಾಡುತ್ತಾರೆ. ಶರ್ಮಿಳಾ ಅವರು ಬುಡಕಟ್ಟು ಸಮುದಾಯದ ಇಬ್ಬರು ಮಹಿಳೆಯರನ್ನು ಆಯ್ದುಕೊಂಡು ಪುರುಷ ಪ್ರಧಾನತೆ ಮತ್ತು ಮನೆ ಇಲ್ಲದ ಜನರ ಕುರಿತು ಮಾತನಾಡುತ್ತಾರೆ. ದಲಿತ ಚಳುವಳಿಯಲ್ಲಿ ದಲಿತ ಮಹಿಳೆಯ ಹೋರಾಟವನ್ನು ಇವರು ಗುರುತಿಸುವುದು ಕಂಡುಬರುತ್ತದೆ.

ಎರಡು : ಮನುವಿನ ಹುಚ್ಚುತನಕ್ಕೆ ವಿರೋಧ : ಬ್ರಾಹ್ಮಣ ಪಿತೃಪ್ರಧಾನತೆಯ ಕುರಿತ ಬಿ. ಆರ್. ಅಂಬೇಡ್ಕರ್ ಬರಹ ಈ ಪುಸ್ತಕದ ಆರಂಭದಲ್ಲಿ ದೀರ್ಘವಾದ ಪ್ರಸ್ತಾವನೆಯಿದೆ. ಹಾಗೆಯೇ ಈ ಕೃತಿ ಮೂರು ಭಾಗಗಳಿಂದ ರಚಿತಗೊಂಡಿದೆ. ಮೊದಲ ಭಾಗವು ಅಂಬೇಡ್ಕರ್ ಕೊಲಂಬಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಯಾಗಿ ಮಂಡಿಸಿದ ಲೇಖನಗಳನ್ನು ಒಳಗೊಂಡಿದ್ದು, ಜಾತಿ ಮತ್ತು ಜಂಡರ್ ಸಂಬಂಧವನ್ನು ಜೋಡಿಸುತ್ತದೆ. ಅಂಬೇಡ್ಕರರ ಜಾತಿ ಹೇಗೆ ಸಗೋತ್ರದಲ್ಲಿಯೇ ವಿವಾಹವಾಗುವುದನ್ನು ಪ್ರೇರೇಪಿಸುತ್ತದೆ ಎಂಬುದನ್ನು ಒಳಗೊಂಡಿದೆ. ಅಂಬೇಡ್ಕರರ ಮಹಿಳಾಪರ ಬರಹಗಳೊಂದಿಗೆ ಭಾರತೀಯ ಸ್ತ್ರೀವಾದಿಗಳಿಂದ ಬಂದ ಒಲವು ಮತ್ತು ವೈಫಲ್ಯಗಳನ್ನು ಪ್ರಶ್ನಿಸುತ್ತದೆ. ಪ್ರತಿಬದ್ಧತೆಯಿಲ್ಲದೆ, ಇದ್ದುದನ್ನು ಇದ್ದಂತೆಯೇ ನಿರ್ಲಕ್ಷಿಸಬಹುದಾದ, ತಿರಸ್ಕರಿಸಲೇಬೇಕಾದ, ಅತ್ಯಂತ ಮತಿಹೀನತೆಯಿಂದ ತಿಳಿಯದೆ ಅಧ್ಯಯನ ನಡೆಸಲಾಯಿತು ಎಂದು ರೇಗೆ ವಾದಿಸುತ್ತಾರೆ. ಒಂದೆಡೆ ಅಂಬೇಡ್ಕರ್ ವಿಚಾರಗಳ ಬಗೆಗಿನ ಭಾರತೀಯ ಬೌದ್ಧಿಕ ಮತ್ತು ಶೈಕ್ಷಣಿಕ ಉಪೇಕ್ಷೆ, ಇನ್ನೊಂದು ಕಡೆ, ಸ್ತ್ರೀವಾದಿಗಳು ಅಂಬೇಡ್ಕರ್ ತರಹ ಖಾಸಗಿ ಮತ್ತು ಸಾರ್ವಜನಿಕ ಹಾಗೂ ಸಮುದಾಯಗಳನ್ನು ಒಟ್ಟುಗೂಡಿಸಿ ಆಮೂಲಾಗ್ರ ಪರಿವರ್ತನೆಯನ್ನು ಉತ್ಪಾದನೆ ಮಾಡುವಷ್ಟು ಸಾಮರ್ಥ್ಯವನ್ನು ಹೊಂದಿಲ್ಲ. ಹಾಗಾಗಿಯೇ ಅಂಬೇಡ್ಕರ್ ಬರಹ ಮತ್ತು ಚಿಂತನೆಗಳನ್ನು

ಮರಾಠಿ ಜನಪ್ರಿಯ ಸಂಸ್ಕೃತಿ, ಸಂಗೀತ, ಥಿಯೇಟರ್ ಮತ್ತು ದೃಶ್ಯಕಲೆಯನ್ನು ಒಳಗೊಳ್ಳುವ ದಲಿತ ವಿದ್ವತ್ ಜೊತೆ ತೌಲನಿಕವಾಗಿ ನೋಡಿದಾಗ 'ದಲಿತ್ ಕೌಂಟರ್ ಪಬ್ಲಿಕ್ಸ್' ತುಂಬ ವ್ಯತ್ಯಾಸವನ್ನು ಹೊಂದಿದೆ ಎಂದು ಹೇಳುತ್ತಾರೆ.

ಹಾಗೆಯೇ ಹಿಂದೂ ಜಾತಿಗಳು ಹೇಗೆ ಪ್ರಬಲ ಪರಿಣಾಮ ಬೀರಿದವು. ಬ್ರಾಹ್ಮಣೀಕರಣ ಕೆಳ ಜಾತಿಗಳನ್ನು ಯಾವ ರೀತಿಯಾಗಿ ತಿರಸ್ಕರಿಸಿದವು ಎಂಬುದನ್ನು ಅಂಬೇಡ್ಕರ ವಿಚಾರಧಾರೆಯೊಂದಿಗೆ ಹೊಸ ನೋಟವನ್ನು ನೀಡಿದ್ದಾರೆ. ಅಂದರೆ ಜಾತಿ ವಿರೋಧಿ ಕಾರ್ಯಕರ್ತರು ಹಾಗೂ ವಿಚಾರವಾದಿಗಳು, ಜಾತಿ ಕಟ್ಟಳೆಯ ಕ್ರೂರತೆಯನ್ನು ಹಾಗೂ ಭ್ರಷ್ಟಾಚಾರವನ್ನು ಚೆನ್ನಾಗಿ ಅರಿತವರು. ಆದರೆ ಜಾತಿಪದ್ಧತಿ ಅತ್ಯಂತ ವಿನಾಶಕಾರಿ ಅಂಶಗಳು ಪಿತೃಪ್ರಧಾನವಾಗಿವೆ ಎಂದು ತಿಳಿದಾಗ ತಮ್ಮಷ್ಟಕ್ಕೆ ತಾವೇ ಚಕಿತರಾದರು. ಆ ಸಂದರ್ಭದಲ್ಲಿ ಭಾರತದ ಉಪಖಂಡದುದ್ದಗಲಕ್ಕೂ ರೂಪಿಸುತ್ತಿದ್ದ ಬ್ರಾಹ್ಮಣ ವಿರೋಧಿ ಚಳುವಳಿಗಳು ಹಾಗೂ ಜಾತಿ ವಿರೋಧಿ ಚಳುವಳಿಗಳಲ್ಲಿನ ಕೆಲ ವಿದ್ವಾಂಸರಿಗೆ ಅಂಬೇಡ್ಕರ್ ಅವರ ವಿಚಾರಗಳು, ಬರಹಗಳು ಅತ್ಯಂತ ತೀಕ್ಷ್ಣವಾದ ವೀಕ್ಷಣೆಗಳು ನವ್ಯರೀತಿಯವಾಗಿ ಕಾಣಿಸಲಾರಂಭಿಸಿದವು. ಇದು ಹೀಗೆ ಕಾಣಲು ಕಾರಣವೆಂದರೆ ರೇಗೆ ಎತ್ತಿದ ಕೆಲ ಪ್ರಶ್ನೆಗಳು ಅದರಲ್ಲೂ ಶೂದ್ರರು ಹಾಗೂ ಮಹಿಳೆಯರಿಗೆ ಸಂಬಂಧಿಸಿರುವಂತೆ ತುಲನಾತ್ಮಕ ಸ್ಥಿತಿಯ ಬಗೆಗಿನ ಚಿಂತನೆಗಳು. ರೇಗೆಯು 'ಮನುವಿನ ಹುಚ್ಚುತನ'ದಲ್ಲಿ ಅಡಗಿರುವ ತಾರ್ಕಿಕತೆಯನ್ನು ಗುರುತಿಸಿದ್ದು, ಸಮಾಜದ ಸಾಮಾಜಿಕ ಭಿನ್ನತೆ ಮತ್ತು ಶ್ರೇಣಿಗಳನ್ನು ಸ್ಥಾಪಿಸುವ ಹಾಗೂ ಮನಬಂದಂತೆ ತಿರುಚುವ ಮನುವಿನ ಗೀಳು; ಶೂದ್ರ ಹಾಗೂ ಚಾಂಡಾಲರ ಬಗೆಗಿನ ಆತನ ಪೂರ್ವಗ್ರಹ ಪೀಡಿತದ ಅವಗಣನೆ ಜೊತೆಗೆ ಆತನ ಸ್ಪಷ್ಟವಾದ ಸ್ತ್ರೀದ್ವೇಷ ಎಂಬುದನ್ನು ವಿಶ್ಲೇಷಿಸುತ್ತಾ ಹಿಂದೂ ಸಮಾಜ ಪದ್ಧತಿಯ ನಿರ್ಣಾಯಕ ಮತ್ತು ಅತ್ಯುಚ್ಚ ಮಗ್ಗಲುಗಳನ್ನು ನಿರೂಪಿಸಿದರು.

**ಒಡನಾಟದ ಮದುವೆ**

ರೇಗೆ ಅವರು ಅಂಬೇಡ್ಕರ್ ಹಾಗೂ ಅವರ ಮೊದಲ ಪತ್ನಿ ರಮಾಬಾಯಿಯವರ ಮದುವೆಯ ಚಿತ್ರವನ್ನು ಈ ಪುಸ್ತಕದ ಮುಖಪುಟವನ್ನಾಗಿ ಮಾಡಿ ಇದನ್ನು ಒಡನಾಟದ ಮದುವೆ ಎಂದು ವ್ಯಾಖ್ಯಾನಿಸಿದರು. ಈ ಮೂಲಕ ರೇಗೆ ನಮ್ಮನ್ನು ಅಂಬೇಡ್ಕರರ ವೈವಾಹಿಕ ಜೀವನದ ದಲಿತ ಜನಪ್ರಿಯ ಗ್ರಹಿಕೆಗೆ ಕರೆದೊಯ್ಯುತ್ತಾರೆ. ರೇಗೆ ತನ್ನ ಪುಸ್ತಕವಾದ "ರೈಟಿಂಗ್ ಕಾಸ್ಟ್, ರೈಟಿಂಗ್ ಜಂಡರ್; ದಲಿತ್ ವುಮನ್ಸ್ ಟೆಸ್ಟಿಮೋನ್ಸಿ"ದಿಂದ ಒಂದು ವಾದವನ್ನು ಎತ್ತಿಕೊಳ್ಳುತ್ತಾ, ಆಕೆ, ಒಡನಾಟದ ಮಾದರಿಯ ಮದುವೆಯನ್ನು ಸೂಚಿಸುತ್ತಾರೆ. ಅದು ಮೇಲ್ಜಾತಿಯ ಮಹಿಳೆಯು ಆಧುನಿಕ ಜಗತ್ತನ್ನು ಪ್ರವೇಶಿಸುವುದನ್ನು ಗುರುತಿಸುತ್ತದೆ. ಅಲ್ಲದೆ ಇದನ್ನು ಇನ್ನೊಂದು ಮಾದರಿಯೊಂದಿಗೆ ಕೂಡ ನೋಡಬೇಕಾಗಿದೆ. – ಅದು ದಾಂಪತ್ಯವನ್ನು ವಿಕಾಸ ಹೊಂದುತ್ತಿರುವ ಸಮುದಾಯದ ರಾಜಕಾರಣದ ಸಂದರ್ಭದೊಳಗೆ ಮರುಸ್ಥಾಪಿಸುತ್ತದೆ. ಅನಂತರ ರೇಗೆ ನಿರೂಪಿಸುವಂತೆ, ಅಂಬೇಡ್ಕರ್ ಇದಕ್ಕೆ ಆಕಾರ ಕೊಡಲು ಸಹಾಯಕವಾದ ಮತ್ತು ಆ ಸಾಂಕೇತಿಕತೆಯಿಂದಾಗಿ ಇದು ಪುನಃಶ್ಚೇತನ ಹೊಂದಿರುವ ವಿಶ್ವಾಸ ಮತ್ತು ಆಳವಾದ ಒಲವಿನ ಬದ್ಧತೆಯನ್ನು ತನ್ನ ಪತಿಯ ಕಾರ್ಯಗಳ ಸಲುವಾಗಿ ರಮಾಬಾಯಿಯವರು ಹೊಂದುವಂತಾಯಿತು. ರಮಾಬಾಯಿ ಯಾವಾಗಲೂ ಅಂಬೇಡ್ಕರ್ ಆಲೋಚನೆಗಳನ್ನು ಒಪ್ಪುತ್ತಿರಲಿಲ್ಲ. ಆದರೆ ಅಂತಿಮವಾಗಿ ಆಕೆ ಅರಿಯುತ್ತಿದ್ದಳು ಎಂದು ರೇಗೆಯು ಆತನ ದೃಷ್ಟಿಯ ಆದರ್ಶ ಶಕ್ತಿಯನ್ನು ನಮೂದಿಸುತ್ತಾರೆ ಹಾಗೂ ಸಮರ್ಥಿಸುತ್ತಾರೆ. ರಮಾಬಾಯಿಯವರ ಉದಾಹರಣೆಯಿಂದಾಗಿ ನಾವು, ಆಕೆಯ ಮೊದಲಿನ ಕೃತಿಯನ್ನು ಚೆನ್ನಾಗಿ ತಿಳಿದಿದ್ದರೆ, ಅದರಲ್ಲಿ ಅಂಬೇಡ್ಕರ್ ಚಳುವಳಿಯಲ್ಲಿ ಅನೇಕ ಮಹಿಳೆಯರು ಭಾಗವಹಿಸಿದ್ದು, ಸಮುದಾಯ ಮತ್ತು ದಾಂಪತ್ಯ ಎರಡೂ ಶಬ್ದಗಳ ಬಗೆಗೆ ಬಾಬಾ ಸಾಹೇಬರು ಮತ್ತೆ ಕೆಲಸ ಮಾಡಲು ಅಣತಿ ಸ್ವೀಕರಿಸಿರುವುದು ತಿಳಿಯುತ್ತದೆ. ನಮ್ಮ ಐತಿಹಾಸಿಕ ಅನುಭವದ ಈ ಅಂಶವು ಈಗಲೂ ಒಂದು ಸ್ತ್ರೀವಾದಿ ಉದ್ಧಾರಕ್ಕೆ ಕಾನೂನು ಮುಖ್ಯ. ನಾವು ಹಾಗೆ ಮಾಡದೆ ಹೋದಲ್ಲಿ ಅಂಬೇಡ್ಕರರು ಜಾತಿ ಮತ್ತು ಜಂಡರ್‌ಅನ್ನು ಏಕಕಾಲದಲ್ಲಿ ಯಾವ ರೀತಿ ಸಾಧಿಸಿದರು ಎಂಬುದನ್ನು ತಿಳಿಯದೆ ಹೋಗುತ್ತೇವೆ ಎಂದು ಹೇಳುತ್ತಾಳೆ. ಹಿಂದೂ ಕೋಡ್‌ಬಿಲ್ ಪಾಸಾಗದೇ ಇರುವುದು, ಅದಕ್ಕಾಗಿ ಅಂಬೇಡ್ಕರ್ ರಾಜೀನಾಮೆಯನ್ನು ನೀಡಿರುವುದು ಅಂಬೇಡ್ಕರರ ಸಮಾನತೆಯ ಆಶಯವನ್ನು ತಿಳಿಸುತ್ತದೆ.




ಜಾತಿ ಹಾಗೂ ಜಂಡರ್ ಸಂಬಂಧಗಳು ಹೇಗೆ ರೂಪುಗೊಂಡಿವೆ, ಆ ಮೂಲಕ ಒಂದರ ಬಗ್ಗೆ ನಾವು ಗಮನಹರಿಸಿ ಇನ್ನೊಂದನ್ನು ಉಪೇಕ್ಷಿಸಿದರೆ ಯಾವಾಗಲೂ ಅದು ಸುಲಭವಾಗಿ ಅರಿವಿಗೆ ನಿಲುಕದು ಎಂಬುದನ್ನು ಎತ್ತಿ ಹೇಳುತ್ತಾಳೆ. ಸಾಮಾನ್ಯವಾಗಿ ತಮ್ಮ ಕೆಲಸ ಸಾಧಿಸಿಕೊಳ್ಳುವುದಕ್ಕಾಗಿ ಕೆಲವರು ಜಾತಿಯನ್ನು ಜಂಡರ್ ಪರಿಗಣನೆಯಲ್ಲಿ ತರುವ ಅವಕಾಶ ಹೊಂದಿರುವರು, ಇತರರು ಜಂಡರ್ ಬಗ್ಗೆ ಹೇಳುವಾಗಲೂ ಕೂಡ ಅವರು ಜಾತಿ ಕಡೆಗೆ ಲಕ್ಷ್ಯವೀಯರು. ಅದರಂತೆಯೇ ಜಾತಿಯೊಡನೆ ತೊಡಗಿಸಿಕೊಂಡು, ಜಂಡರನ್ನು ದೂರ ಮಾಡುವವರು ಜಾತಿ ಕ್ರಮದಲ್ಲಿಯ ವಿಶ್ವಸನೀಯ ಅಂಶಗಳನ್ನು ಸಮರ್ಥಿಸುತ್ತ ಮುಂದುವರಿಯುವರು. ಆಕೆ ಮರಾಠಿ ಸಂದರ್ಭಗಳಲ್ಲಿ ಸ್ಥಾಪಿತವಾದ ಕೆಲವೊಂದು ಸ್ತ್ರೀತ್ವದ ಬ್ರಾಹ್ಮಣೇತರ ಪರಿಕಲ್ಪನೆಗಳನ್ನು ಎತ್ತಿ ತೋರಿಸುತ್ತಾರೆ. ಈ ಪುರುಷರು ಪಾಶ್ಚಿಮಾತ್ಯ ಆಧುನಿಕತೆಯಲ್ಲಿ ಏಕರೂಪವಾಗಿ ಲೈಂಗಿಕತೆಯ ಬಗ್ಗೆ ಬ್ರಾಹ್ಮಣೇತರ ಪಿತೃಪ್ರಧಾನತೆ ಅಗೋಚರ ರೀತಿಯಲ್ಲಿ ಪ್ರಸ್ತುತಪಡಿಸುವರು ಎಂದು ಹೇಳುತ್ತಾರೆ. ರೇಗೆ ಭಾರತೀಯ ಸಂದರ್ಭದ ಪೂರ್ವ ಸಂಬಂಧಿ ಸ್ತ್ರೀವಾದಿ ವಿಶ್ಲೇಷಣೆಯಲ್ಲಿ ಜಾತಿಯನ್ನು ಜಂಡರದಿಂದ ಸುಲಭವಾಗಿ ಬೇರ್ಪಡಿಸಲು ಸಾಧ್ಯವಿಲ್ಲ ಹಾಗೆ ಮಾಡಲೂಬಾರದು ಎನ್ನುವುದನ್ನು ಸ್ಪಷ್ಟಗೊಳಿಸುತ್ತಾರೆ.

ಕೆಲವು ನಿದರ್ಶನಗಳಲ್ಲಿ ಜಾತಿ ಎಲ್ಲ ನಿರಾಕರಣೆಗಳು; ಪ್ರೇರೇಪಿಸಬಲ್ಲ ಸಂಗತಿಗಳು ಅತಿ ಶಕ್ತಿಶಾಲಿಯಾದ ಸಾರ್ವಜನಿಕ ಸಂಸ್ಕೃತಿಯೇ ಆಗುವುದಕ್ಕೆ ದಾರಿ ಮಾಡಿಕೊಡುತ್ತವೆ. ಈ ಕಾರಣದಿಂದಾಗಿ ಇವು ಜಾತಿಯೊಡನೆ ಹೋರಾಡಲು ನಿರ್ಣಾಯಕ ಘಟ್ಟದ ಕೊರತೆಯನ್ನು ಅನುಭವಿಸುತ್ತವೆ. ಜಾತಿ ಹಾಗೂ ಲಿಂಗ ಸಂಬಂಧಿ ವಿಶ್ಲೇಷಣೆಗಳನ್ನು ಜೊತೆಗಿಡುವುದಕ್ಕಿರುವ ತಡೆಯಾಜ್ಞೆಗಳೆಲ್ಲವೂ ಕೂಡ ಶರ್ಮಿಳಾ ರೇಗೆ ಪ್ರಕಾರ ಮಹತ್ವದವೇ ಆಗಿವೆ.

ಶರ್ಮಿಳಾ ರೇಗೆ ಅನೇಕ ಸೂಕ್ಷ್ಮ ಅಂಶಗಳ ಬಗ್ಗೆ ಬೆಳಕು ಚೆಲ್ಲುವರು. ಒಂದು ಅಂಬೇಡ್ಕರ್ ಜಾತಿ ಶ್ರೇಣಿಯ ವಿಚಾರಗಳ ಮೇಲಿನ ತಮ್ಮ ಪ್ರತಿನಿತ್ಯದ ತಿರಸ್ಕಾರ – ವಿಶೇಷವಾಗಿ ಜಾತಿಯು ಸ್ವಗೋತ್ರದ ವಿವಾಹದ ರೂಢಿಗಳ ಮೇಲಿನ ಸಂಬಂಧದ ಬಗ್ಗೆ ಇಟ್ಟುಕೊಂಡಿರುವ ಧೋರಣೆಯಾಗಿದೆ. ಸಾಮಾಜಿಕ ಸಂತಾನೋತ್ಪತ್ತಿ ಕುರಿತಂತೆ ಇದು ಜಾತಿ ಆಧಾರಿತ ಸಮಾಜದ ಬಲ ಅಥವಾ ಅಧಿಕಾರದ ಕಾರ್ಯಾಚರಣೆಗೆ ಸಂಬಂಧಿಸಿದೆ. ಈ ಬಗ್ಗೆ ರೇಗೆಯು ಅಂಬೇಡ್ಕರರ ವಾದಗಳ ಪ್ರಧಾನ ಅಂಶಗಳ ಬಗ್ಗೆ ಗಮನ ಸೆಳೆಯುತ್ತಾ ಜಾತಿಗಳು ಯಾವ ರೀತಿಯಲ್ಲಿ ವಿಜಾತೀಯ ವಿವಾಹ ಮಾಡಿಕೊಳ್ಳುವುದನ್ನು ತಡೆಗಟ್ಟಲು ಜಂಡರ್ ಅಸಮಾನತೆಯನ್ನು ಉಳಿಸಿಕೊಳ್ಳುವ ಅಥವಾ ಉಳಿಸಿಕೊಳ್ಳದೆ ಇರುವುದರ ವಿಚಾರಗಳು; ಅವು ಜಂಡರ್ ಹೆಚ್ಚುವರಿಯನ್ನು ಹೇಗೆ ನಿರ್ವಹಿಸುತ್ತವೆ ಎಂಬುದರ ಬಗ್ಗೆ ಗಮನ ಸೆಳೆಯುತ್ತಾರೆ. ಈ ಸಂದರ್ಭದಲ್ಲಿ ಆಕೆಯು, ಅಂಬೇಡ್ಕರರ "ಹಿಂದು ಮಹಿಳೆಯ ಪತನ"ದ ಬಗೆಗಿನ ತಿಳುವಳಿಕೆಯನ್ನು ಎತ್ತಿ ತೋರಿಸುತ್ತಾರೆ. ಜೊತೆಗೆ ಬೌದ್ಧ ಧರ್ಮದ ಮೇಲಿನ ಬ್ರಾಹ್ಮಣತ್ವದ ವಿಜಯದೊಂದಿಗೆ; ಶೂದ್ರರ ಗುಲಾಮಗಿರಿ, ಅದರಂತೆಯೇ ಮಹಿಳೆಯರ ಪತನಕ್ಕೂ ಕಾರಣವಾದ ಲೈಂಗಿಕ ಹಾಗೂ ವೈವಾಹಿಕ ಆಚರಣೆಗಳಲ್ಲಿನ ಬದಲಾವಣೆಗಳನ್ನು ಅಂಬೇಡ್ಕರ್ ಗ್ರಹಿಸಿಕೊಂಡ ಬಗೆಯನ್ನು ಹೊಸ ರೀತಿಯಲ್ಲಿ ಎತ್ತಿತೋರಿಸುತ್ತಾರೆ.

**ಸ್ತ್ರೀವಾದಿಗಳಿಗೆ ಉಪಯೋಗಕರ**

ಅಂಬೇಡ್ಕರ್ 'ರೀಡಿಂಗ್ ಆಫ್ ಮನ್ಸು ಡಿಕ್ಟ್' ಪ್ರಬಂಧದ ಎರಡನೆಯ ಭಾಗದಲ್ಲಿ ಯಾರು ಯಾರನ್ನು

ಮದುವೆಯಾಗಬೇಕು ಮತ್ತು ಹೇಗೆ ಆಗಬೇಕು, ಇದೆಲ್ಲವು "ಮ್ಯಾಡ್ನೆಸ್ಸ್ ಆಫ್ ಮನು"ವನ್ನು ರೂಪಿಸುತ್ತದೆ. ಈ ವಿಷಯದ ಮೇಲಿನ ಅಂಬೇಡ್ಕರ್‌ರ ವಿಚಾರಗಳು ಸ್ತ್ರೀವಾದಿಗಳಿಗೆ ಉಪಯೋಗಕರವಾಗಲು ಅನೇಕ ಕಾರಣಗಳಿವೆ. ಮೊದಲನೆಯದಾಗಿ, ಇದು ಸಮಕಾಲೀನ ಲೈಂಗಿಕ, ಜನಸಂಖ್ಯೆಯ ಆತಂಕ, ಲಿಂಗಾನುಪಾತ ಇಳಿಮುಖ ವಾಗುವುದನ್ನು ವಿಶ್ಲೇಷಿಸಲು ಒಂದು ವೈಚಾರಿಕ ನಮೂನೆಯನ್ನು ಕೊಡುತ್ತದೆ. ಉದಾಹರಣೆಗೆ, ಸತಿ, ಬಲವಂತದ ವೈಧವ್ಯ ಮತ್ತು ಬಾಲ್ಯವಿವಾಹಗಳು ಬ್ರಾಹ್ಮಣ ಪುರುಷರನ್ನು ಲೈಂಗಿಕ ಹಾಗೂ ಸಾಮಾಜಿಕ ಪ್ರಾಬಲ್ಯವನ್ನು ಅನಿವಾರ್ಯ ವಾಗಿಸುವುದು. ಜೊತೆಗೆ ಮಹಿಳೆಯರ ಬಗ್ಗೆ ಹೆಚ್ಚಿನ ಕಾಳಜಿ ತೆಗೆದುಕೊಳ್ಳ ಬೇಕಾಗಿರುವ ಸನ್ನಿವೇಶಗಳಲ್ಲಿಯೇ ಹೆಣ್ಣು ಶಿಶುಹತ್ಯೆ ಮತ್ತು ಗಂಡುಮಗುವಿನ ಪ್ರಾತಿನಿಧ್ಯ ಇವೆಲ್ಲವೂ ಲಿಂಗಾನುಪಾತ ಕಡಿಮೆ ಆಗುವುದಕ್ಕೆ ಕಾರಣವಾಗುತ್ತದೆ. ಅಲ್ಲದೆ ಹೆಣ್ಣಿನ ಅಸ್ತಿತ್ವಕ್ಕೆ ಅಪಮಾನ ಮಾಡಿ ಅದನ್ನು ಕಾನೂನು ಸಮ್ಮತವಾಗಿಸುವ ಬಗೆಯೇ ಗುಲಾಮಗಿರಿ ತಳಮೂಲವನ್ನು ಪುಷ್ಟೀಕರಿಸುತ್ತದೆ. ಎರಡನೆಯದಾಗಿ, ಸ್ಮೃತಿಕಾರರು ಜಾತಿಯಲ್ಲಿ ವಂಶ ಬೆಳೆಸುವ ಹಾಗೂ ಮಿಶ್ರ ಸಾಮಾಜಿಕ ಗುರುತಿಸುವಿಕೆಯ ಮುಖವಾಡದಲ್ಲಿ ಯಾವ ತೆರನಾಗಿ ಜಾತಿಯ ಗುರುತನ್ನು ನಿಶ್ಚಿತಗೊಳಿಸಲು ಪ್ರಯತ್ನಿಸುತ್ತಿದ್ದರು ಎಂಬುದನ್ನು ಪರೀಕ್ಷೆಗೆ ಒಳಪಡಿಸಲು ದಾರಿ ಮಾಡಿಕೊಡುತ್ತದೆ. ಈ ವಿವರಣೆಗಳು ನಾವು ಪ್ರಸ್ತುತ ಸಂದರ್ಭದಲ್ಲಿ ನಡೆಯುವ ಖಾಪ್ ಹಾಗೂ ಜಾತಿ ಪಂಚಾಯತಿಗಳಿಂದ ಆಗುವ ಅಪಮಾನ, ನಡೆಯುವ ಅಪರಾಧಗಳನ್ನು ಮಿಶ್ರಣಗೊಳಿಸಿ ರಕ್ಷಣೆ ಮಾಡ ಬೇಕಾಗಿರುವ ಸಂಗತಿಯನ್ನು ಸೂಚಿಸುತ್ತದೆ ಎಂಬುದನ್ನು ಗುರುತಿಸಿರುವರು.

ಸಾಂದರ್ಭಿಕ ಮದುವೆಗೆ ಸಂಬಂಧಿಸಿದ ವಿವಿಧ ಜಾತಿ ಮೂಲದ ಭೇದಾತ್ಮಕ ಕಾಯಿದೆಗಳು ಮನುವಿನಿಂದ ಸಿದ್ಧಗೊಂಡು ಜಾರಿಗೊಂಡವು ಎಂಬುದನ್ನು ಚರ್ಚಿಸುವಾಗ, ರೇಗೆಯು ದೇವದಾಸಿಯರ ಸಂಖ್ಯೆಯ ಬಗ್ಗೆ ಚರ್ಚಿಸುತ್ತಾರೆ. ಆಕೆಯ ಪ್ರಕಾರ ಹಿಂದೂ ಸಾಮಾಜಿಕ ತಿದ್ದುಪಡಿಯ ಉಚ್ಛ್ರಾಯ ಪರಿಸ್ಥಿತಿಯಲ್ಲೂ ಹಾಗೂ ಈಗಿನ ಪರಿಸ್ಥಿತಿಯಲ್ಲಿಯೂ ಸ್ತ್ರೀವಾದಿಗಳಲ್ಲಿ ಜಾತಿ ಲೈಂಗಿಕ ಕಾರ್ಮಿಕರನ್ನು ತಿಳಿದುಕೊಳ್ಳುವಲ್ಲಿ ತಮ್ಮ ತಮ್ಮಲ್ಲಿಯೇ ಭಿನ್ನಾಭಿಪ್ರಾಯ ಇರುವುದನ್ನು ಪ್ರಸ್ತುತ ಪಡಿಸುತ್ತಾರೆ. ಸ್ತ್ರೀವಾದಿಗಳು ದೇವಸ್ಥಾನದಲ್ಲಿಯ ನರ್ತಕಿ ಹಾಗೂ ಆಕೆಯ ಆಧುನಿಕ ರೂಪವಾದ ಬಾರ್ ಡ್ಯಾನ್ಸರ್‌ರನ್ನು ಒಬ್ಬ ಕಾರ್ಯಕರ್ತೆಯಾಗಿ ನೋಡಲು ಬಯಸಬಹುದು. ಈ ದೃಷ್ಟಿಕೋನ ಕೇವಲ ಜಾತಿಯ ಅಧಿಕಾರದ ರಚನೆ ಹಾಗೂ ಜನಾದೇಶವನ್ನು ಉಪೇಕ್ಷೆ ಮಾಡುವುದನ್ನು ಆಯ್ಕೆ ಮಾಡಿಕೊಂಡರೆ ಮಾತ್ರ ಸಾಧ್ಯ. ಇಲ್ಲದಿದ್ದರೆ ಲೈಂಗಿಕ ಕಾರ್ಮಿಕರೆಲ್ಲರೂ ಹೆಚ್ಚಾಗಿ ಅತಿ ಬಡತನದಿಂದ ಅಥವಾ ಅತ್ಯಂತ ದೀನಾವಸ್ಥೆಯ ಸಮುದಾಯದಿಂದ ಬಂದಿರುವುದಿಲ್ಲ. ಅಂಬೇಡ್ಕರರ ಮುರಲಿ (ಜೋಗವ್ವ, ದೇವದಾಸಿ)ಯೆಂಬ ವ್ಯಕ್ತಿತ್ವವು ಜಾತಿಯ ಕಳಂಕ ಹಾಗೂ ಬ್ರಾಹ್ಮಣತ್ವದ ಭ್ರಷ್ಟತೆಯಿಂದ ಗುರುತಿಸಿರುವುದೇ ಕಾರಣವಾಗಿದೆ ಎಂದು ವಾದಿಸಿದರು.

ಒಂದು ವೇಳೆ ಅವರು ಮುರಲಿ ಜನರನ್ನು ಉದ್ಧರಿಸಲು ಪ್ರಯತ್ನಿಸಿದ್ದರೆ, ಆ ಪ್ರಯತ್ನವು ಮದುವೆ ಎಂಬ ಸುಧಾರಣೆಗೊಳಪಡಬೇಕೆಂದು ಅವರು ಯೋಚಿಸು ವುದರಿಂದಾಗಿ ಅಲ್ಲ; ಜನ ಜೀವನ ಸಾಗಿಸಲು ಸಾಕಷ್ಟು ಮಾರ್ಗಗಳಿವೆ. ಕೇವಲ ಇದೊಂದೇ ಮಾರ್ಗದಲ್ಲಿ ಮಾತ್ರ ವ್ಯಕ್ತಿ ಜಾತಿಯಿಂದ ದೀಕ್ಷೆ ಹೊಂದಿದ ಆಚರಣೆಯನ್ನು ಏಕೆ ಅನುಕರಿಸುತ್ತಾನೆ. ಒಬ್ಬ ವ್ಯಕ್ತಿ ತನಗಾಗಿ ಹೊಸದೊಂದು ಅರ್ಥದಲ್ಲಿ ಜೀವನವನ್ನು ಕಟ್ಟಿಕೊಳ್ಳಲು ಪ್ರಯತ್ನಿಸಬಹುದು ಎಂದು ರೇಗೆಯು ಹಿಂದೂ ಕೋಡ್‌ಬಿಲ್‌ನ ಚೌಕಟ್ಟಿನಲ್ಲಿಯ ಪ್ರಾರಂಭವಾದ ಚರ್ಚೆಗಳಲ್ಲಿ ಒಂದು ವಾದವನ್ನು ಉಲ್ಲೇಖಿಸಿ, ಇದು ಇನ್ನೊಂದು ಪುಸ್ತಕವನ್ನೇ ತಯಾರಿಸಬಲ್ಲಷ್ಟು ಇದೆ ಎಂದು ಹೇಳಿರುವರು. ಇದಕ್ಕೆ ಸಂಬಂಧಿಸಿದ ಸ್ತ್ರೀವಾದಿಗಳ ಈ ಚರ್ಚೆಯಲ್ಲಿ ಅಂಬೇಡ್ಕರರನ್ನು ಸಾಕಷ್ಟು ದೂರವಿಟ್ಟಿರುವುದು ಶೋಚನೀಯವಾದುದು. ಈ ಚರ್ಚೆಯಲ್ಲಿ ಅಂಬೇಡ್ಕರರು ತಡವಾಗಿ ಪ್ರವೇಶಿಸುತ್ತಾರೆ. ಆದರೆ ಅವರು, ಕಳೆದುಹೋದ ಸಮಯದಲ್ಲಿ ನೇರವಾಗಿ ತಮ್ಮ ಚಿಂತನೆಗಳನ್ನು ಪುನಾರಚನೆ ಮಾಡುತ್ತ ಒಂದು ಹೊಸ ನೀತಿಯಲ್ಲಿ ಸ್ಪಷ್ಟವಾಗಿ ಸಾಮಾಜಿಕ ಸಂಬಂಧಗಳು ಹಾಗೂ ವ್ಯವಹಾರಗಳಿಗೆ ಚೇತರಿಕೆ ಕೊಡಬಹುದೆಂದು ಹೇಳಿದರು. ಹಿಂದೂ ಕಾಯ್ದೆಯನ್ನು ಸುಧಾರಿಸುವುದರಲ್ಲಿಯ ಅವರ ಸ್ಪಷ್ಟವಾದ ಆಸಕ್ತಿಯು ತಮ್ಮ ಮತ್ತು ಇತರರ – ಸಮಾನತೆಯ ಮೂಲಭೂತ ದೃಷ್ಟಿಗೆ ಸಂಬಂಧಿಸಿದ್ದು. ಅಂಬೇಡ್ಕರ್ ಪ್ರತಿಪಾದಿಸುವ ನ್ಯಾಯ ಮತ್ತು ನಾಗರಿಕತ್ವಗಳು ಅವರಿಗೆ ಗೆಳೆಯರನ್ನು ಗಳಿಸಿ ಕೊಡಲಿಲ್ಲ. ಇನ್ನೊಂದೆಡೆ ಅವರ ಅನೇಕ ಮಿತ್ರರು, ಅವರ ಸುಧಾರಣೆಯ ಕ್ರಮ ಗಳನ್ನು ಒಪ್ಪುವ ಮಹಿಳೆಯರನ್ನೂ ಸಾಂವಿಧಾನಿಕ ಶಾಸನ ಸಭೆಯಲ್ಲಿ ಸದಸ್ಯರ ನ್ನಾಗಿಯೂ ಮಾಡಿಕೊಂಡರು. ಹಿಂದೂ ಕೋಡ್‌ಬಿಲ್ ಇಂದಿಗೂ ತನ್ನ ಎಲ್ಲ ನಾಟಕ ಹಾಗೂ ವಿವರಣೆಗಳಲ್ಲಿ ಉಳಿದಿದೆ ಎನ್ನುವ ರೇಗೆ ಅಂಬೇಡ್ಕರ್ ನಮಗೆ ಅತ್ಯಂತ ಮೌಲ್ಯಯುತವಾದ ಸಂಕೇತವನ್ನು ಪ್ರತಿಕ್ರಿಯಿಸಲು ಕೊಟ್ಟಿದ್ದಾರೆಂದು ಭಾವಿಸುತ್ತಾರೆ.

ಅಂಬೇಡ್ಕರರ ಚಿಂತನೆಗಳನ್ನು ಸಾಂಪ್ರದಾಯಿಕ ಬ್ರಾಹ್ಮಣ ಸಮಾಜ ರೂಢಿಗತವಾಗಿ ನಿರ್ಲಕ್ಷ್ಯ ಮಾಡಿದೆ ಎಂದು ಹೇಳುತ್ತಾರೆ. ಸುಮಾರು ಎರಡು ದಶಕಗಳ ಹಿಂದೆ ರೇಗೆಯು ವಿವಿಧ ಸಾರ್ವಜನಿಕ ಕೌಂಟರ್‌ಗಳಿಂದ ಉತ್ಪತ್ತಿಯಾದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಹಾಗೂ ದಲಿತ ಸ್ತ್ರೀವಾದಿ ದೃಷ್ಟಿ ಹಾಗೂ ಸ್ವಪ್ರೋಕ್ತಿಗಳಲ್ಲಿ ಜ್ಞಾನದ ಜಗತ್ತನ್ನು ಕಟ್ಟುವ ಮಹತ್ವದ ಬಗ್ಗೆ ಗಮನಹರಿಸಲು ಹೇಳಿದರು. ನಾವು ಜ್ಞಾನವನ್ನು ಗಳಿಸುವ ಬಗ್ಗೆ ಚಿಂತನಶೀಲರಾಗಿರಬೇಕು. ಅಂದರೆ ಯಾವ ಸಂದರ್ಭಗಳಲ್ಲಿ, ಯಾವ ಸ್ಥಳಗಳಿಂದ ಮತ್ತು ಎಂಥ ವಿವಾದಿತ ಸಾಧನಗಳ ಮೂಲಕ ನಾವು ಸೈದ್ಧಾಂತಿಕರಿಸುತ್ತೇವೆ ಮತ್ತು ವಾದಿಸುತ್ತೇವೆ, ಹಾಗೆಯೇ ಅದನ್ನು ಅಂತರ್ಗತ ಗೊಳಿಸಿಕೊಳ್ಳುತ್ತ ಕೊನೆಗೊಳಿಸುತ್ತೇವೆ. ಯಾವ ವಿಷಯಗಳ ಮುನ್ನೆಲೆಗಾಗಿ ನಾವು ಹುಡುಕಾಡಲು ಪ್ರಯತ್ನಿಸುತ್ತೇವೆ, ಇವನ್ನು ನಾವು ಲಘುವಾಗಿ ಪರಿಗಣಿಸಬೇಕಾಗಿಲ್ಲ. ಆಸಕ್ತಿಯಿಂದ ಪರೀಕ್ಷಿಸಬೇಕು ಎಂದು ಆಕೆ ಹೇಳುತ್ತಾ, ಎಚ್ಚರಿಸುತ್ತಾರೆ.

ನಾವು ಚಿಂತನಶೀಲರಾಗಬೇಕು ಎಂದರೆ ನಾವು ಒಂದು ಸಮನ್ವಯಕಾರಿ ಧ್ವನಿಯನ್ನು ಹೊಂದಬೇಕು ಎಂದು ಅರ್ಥವಲ್ಲ. ಕೆಳವರ್ಗಕ್ಕೆ ಸೀಮಿತರಾದವರನ್ನು ಪರಿಚಿತ ಹಾಗೂ ಸ್ಥಾಪಿತವಾದ ಸ್ತ್ರೀವಾದಿ ತಿಳುವಳಿಕೆಯಲ್ಲಿ ಹಿಡಿದಿಡುವ ಪ್ರಯತ್ನ ಮಾಡದೆ, ಅದಕ್ಕಾಗಿ ಶಿಷ್ಟ ಹಾಗೂ ಅತ್ಯುತ್ತಮವಾದ, ಆದರೆ ಸೀಮಿತರಾದವರ ಧ್ವನಿಯನ್ನು ಗಮನಿಸಬೇಕು ಎಂದೂ ಹೇಳುತ್ತಾರೆ. ಬ್ರಾಹ್ಮಣರಲ್ಲಿ ಪಿತೃಪ್ರಧಾನ ಪದ್ಧತಿ ಇರುವಂತೆ, ದಲಿತರಲ್ಲೂ ಪಿತೃಪ್ರಧಾನ ಪದ್ಧತಿ ಇದೆ ಎಂದು ನಾವು ಕೆಲವರಂತೆ ಜಗಳಾಡ ಬೇಕಾಗಿಲ್ಲ, ವಾದ ಮಾಡಬೇಕಾಗಿಲ್ಲ. ನಮ್ಮನ್ನು ನಾವು ಈ ಪದ್ಧತಿಯಲ್ಲಿ ಶ್ರೇಣೀಕೃತ ಅಸಮಾನತೆಯ ಪಿತೃಪ್ರಧಾನದ ರಚನೆಗಳು ಹೇಗೆ ತಮ್ಮ ಮೇಲೆ ಪರಿಣಾಮಗಳನ್ನು ಬೀರಬಲ್ಲವು ಎಂದು ಕೇಳಿಕೊಳ್ಳುವುದು ಅತಿ ಮಹತ್ವದ್ದು. ಅಲ್ಲದೆ ಇದು ಕೇವಲ ವೈಚಾರಿಕ ಸ್ಪಷ್ಟತೆಯಲ್ಲ. ವೈಯಕ್ತಿಕ ಸ್ಪಷ್ಟತೆಯು ಹೌದು; ಅಲ್ಲದೆ ಇಂಥದೊಂದು ಗ್ರಂಥ ಈ ರೀತಿಯ ಅವಕಾಶಗಳನ್ನು ಬೇಡುತ್ತದೆ. ಇದು ಅನೇಕ ವರ್ಷಗಳ ಕ್ಲಾಸ್ ರೂಮು ವ್ಯವಹಾರಗಳನ್ನು, ದ್ವಿಭಾಷಾ ಜಗತ್ತು ಹಾಗೂ ತ್ರಿಭಾಷಾ ಜಗತ್ತುಗಳನ್ನು ಕೂಡ ಜೋಡಿಸುವ, ಜ್ಞಾನದ ಹೊಸ ವೃತ್ತಗಳನ್ನು ಸೃಷ್ಟಿಸುವ ಹಾಗೂ ಪುಷ್ಟೀಕರಣ ಮಾಡುವುದರಲ್ಲಿ ಬಳಸಿಕೊಳ್ಳುವ ಪ್ರಯತ್ನಗಳನ್ನು; ಆಚರಣೆಗಳ ಮೂಲಕ ಹುಟ್ಟುಹಾಕುವ ಪ್ರಯತ್ನಗಳನ್ನು ದಲಿತ ವಿದ್ಯಾರ್ಥಿಗಳು, ವಿಚಾರವಂತರು, ಬ್ರಾಹ್ಮಣೇತರ ಪ್ರವಾಚಕರು, ಸ್ತ್ರೀವಾದಿ ವಿದ್ವಾಂಸರು ಹಾಗೂ ಕಾರ್ಯಕರ್ತರೊಂದಿಗೆ ತಳಕು ಹಾಕಿಕೊಳ್ಳುತ್ತದೆ. 'ದ ಬುದ್ಧ ಆಂಡ್ ಹಿಸ್ಸ್ ಧಮ್ಮ'ವು 'ಮ್ಯಾಡ್ನೆಸ್ಸ್ ಆಫ್ ಮನು' ಗ್ರಂಥದ ವಿರುದ್ಧವಾದ ಒಂದು ಮೈತ್ರಿಯ ಆಚರಣೆಯ ಆಹ್ವಾನ, ಸಾಮಾಜಿಕ ಸಹಚರ್ಯದ ಅತ್ಯಂತ ಮೂಲಭೂತ ರೀತಿಯಲ್ಲಿ ಇದು ಆಳವಾಗಿ ಹೃದಯವನ್ನು ತಟ್ಟುವ ಹಾಗೂ ಮೇಧಾವಿತನವನ್ನು ಪ್ರತಿಧ್ವನಿಸುತ್ತದೆ ಎಂದು ಹೇಳುತ್ತಾರೆ.

ಹೀಗೆ ಶರ್ಮಿಳಾ ರೇಗೆ ಅವರು ಸ್ತ್ರೀವಾದಿ ಚಿಂತಕಿ, ಸಮಾಜಶಾಸ್ತ್ರಜ್ಞೆ, ಬರಹಗಾರ್ತಿ, ಹೋರಾಟಗಾರ್ತಿಯಾಗಿ ಜಾತಿಯ ರಚನಾತ್ಮಕ ಹಿಂಸೆ ಮತ್ತು ಅದರ ಸಂಪರ್ಕವೇರ್ಪಡಿಸುವ ಲೈಂಗಿಕತೆ ಮತ್ತು ಶ್ರಮಿಕತೆಯನ್ನು ಸ್ತ್ರೀವಾದದ ಚರ್ಚೆಯಲ್ಲಿ ಮತ್ತು ಬೋಧನೆ, ತರಬೇತಿಯಲ್ಲಿ ಹಾಗೂ ಪಠ್ಯಕ್ರಮದಲ್ಲಿ ಯಶಸ್ವಿಯಾಗಿ ತಂದಿದ್ದಾರೆ. ಈ ಮೂಲಕ ಪುಣೆಯ ಕ್ರಾಂತಿಜ್ಯೋತಿ ಸಾವಿತ್ರಿಬಾಯಿ ಫುಲೆ ಮಹಿಳಾ ಅಧ್ಯಯನ ಕೇಂದ್ರವನ್ನು ಪ್ರಕಾರವಾದ ತಾಣವನ್ನಾಗಿ ರೂಪಿಸಿದರು ಎಂದು ಹೇಳಬಹುದು.



**ಯರ‍್ರಿಸ್ವಾಮಿ ಈ.**
ಸಹ ಸಂಶೋಧಕರು, ಮಹಿಳಾ ಅಧ್ಯಯನ
ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ



# ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಅಪೂರ್ಣ

**ಕ**ರ್ನಾಟಕ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟವು ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಮಾರ್ಚ್ ೮ ಮತ್ತು ೯ರಂದು ಕೊಪ್ಪಳದಲ್ಲಿ ನಡೆಸಲಿರುವ ವಿಚಾರ ಸಂಕಿರಣ, ಜಾಥಾ ಮತ್ತು ಸಮಾವೇಶಕ್ಕೆ ಅಣಿಯಾಗುತ್ತಿದ್ದ ಸಂದರ್ಭದಲ್ಲಿ ಬಾಬಾಸಾಹೇಬ್ ಅಂಬೇಡ್ಕರ್ ಕುರಿತ ಲೇಖನ ಬರೆಯಲಾರಂಭಿಸಿದೆ. ಅದು ಬಹಳ ಅರ್ಥಪೂರ್ಣ ಎನಿಸಿತು. ಕಾರಣ ದಲಿತರಷ್ಟೇ ಅಲ್ಲ ಮಹಿಳೆಯರ ಕುರಿತು ಅತ್ಯಂತ ಸೂಕ್ಷ್ಮವಾಗಿ, ಸಮಾನತೆಯ ದೃಷ್ಟಿಯಿಂದ ನೋಡಿದ ಕೆಲವೇ ಪುರುಷ ರಾಜಕೀಯ ಚಿಂತಕರಲ್ಲಿ ಬಾಬಾಸಾಹೇಬರು ಬಹಳ ಮುಖ್ಯವಾದವರು. ಏಂಗಲ್ಸ್ ಅವರ ಕುಟುಂಬ, ಖಾಸಗಿ ಆಸ್ತಿ ಮತ್ತು ಪ್ರಭುತ್ವದಲ್ಲಿನ ಚಿಂತನೆಗಳಂತೆಯೇ ಮಹಿಳೆಯರ ಕುರಿತ ಅಂಬೇಡ್ಕರ್ ಅವರ ಚಿಂತನೆಗಳು ಮಹಿಳಾ ಸಮಾನತೆಯ ಸಾಧನೆಗೆ ಪೂರಕವಾಗಿವೆ ಎಂದು ನಾನು ಭಾವಿಸುತ್ತೇನೆ.

**ಮಹಿಳಾ ಪ್ರಗತಿ ಸಮುದಾಯದ ಪ್ರಗತಿ**

ಮಹಿಳೆಯರು ಸಾಧಿಸಿರುವ ಪ್ರಗತಿಯ ಆಧಾರದ ಮೇಲೆಯೇ ಸಮುದಾಯದ ಪ್ರಗತಿಯನ್ನು ಅಳೆಯಲು ಸಾಧ್ಯವೆಂಬುದು ಬಾಬಾಸಾಹೇಬರ ಬಲವಾದ ನಂಬಿಕೆಯಾಗಿತ್ತು. ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವ ಚಳುವಳಿಯೂ ಅಪೂರ್ಣವೆಂದು ಭಾವಿಸಿದ್ದರಿಂದಲೇ ಅವರು ಜಾತಿವಿನಾಶ ಚಳುವಳಿಯಲ್ಲಿ ಮಹಿಳೆಯರು ಸಕ್ರಿಯವಾಗಿ ಭಾಗವಹಿಸುವ ಬಗ್ಗೆ ಆಸ್ಥೆ ವಹಿಸುತ್ತಿದ್ದರು ಮತ್ತು ಅಖಿಲ ಭಾರತ ದಲಿತ ಮಹಿಳಾ ಪರಿಷತ್ತಿನ ಏಳಿಗೆ ಮತ್ತು ಬೆಳವಣಿಗೆಯ ಕುರಿತು ಅವರು ಅಪಾರ ಕಾಳಜಿ ವಹಿಸುತ್ತಿದ್ದರು. ದಲಿತ ಮಹಿಳಾ ಫೆಡರೇಷನ್ ಅತ್ಯಂತ ಸಕ್ರಿಯವಾಗಿ ಅಂಬೇಡ್ಕರ್ ಅವರ ಜಾತಿ ವಿನಾಶ ಚಳುವಳಿಯಲ್ಲಿ ತೊಡಗಿಕೊಂಡಿತ್ತು. ಫೆಡರೇಷನ್ ಎಂಬುದು ಒಂದು ನೆಪ ಮಾತ್ರದ ಸಂಘಟನೆಯಾಗದೆ ಚಿಂತನ, ಮಂಥನ ಮತ್ತು ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಳ್ಳುವುದಕ್ಕೆ ಅಂಬೇಡ್ಕರ್ ಅವರು ಪ್ರೇರಣೆಯಾಗಿದ್ದರು ಎಂಬುದಕ್ಕೆ ಅವರ ಭಾಷಣಗಳೇ ಸಾಕ್ಷಿಯಾಗಿವೆ.

೧೯೪೨ರ ಜುಲೈ ೧೮-೧೯ರಂದು ನಡೆದ ಅಖಿಲ ಭಾರತ ಪರಿಶಿಷ್ಟ ಜಾತಿ ಫೆಡರೇಷನ್‌ನ ಮಹಾ ಸಮ್ಮೇಳನದಲ್ಲಿ, ವಿಶೇಷ ಮಹಿಳಾ ಸಮಾವೇಶವನ್ನು ಉದ್ದೇಶಿಸಿ ಅವರು ಆಡಿದ ಮಾತುಗಳಿವು: "...ಮಹಿಳೆಯರ ಸಂಘಟನೆ ಅತ್ಯಗತ್ಯ. ಅವರಿಗೆ ಪ್ರತ್ಯೇಕ ಸಮಸ್ಯೆಗಳಿವೆ. ಅವನ್ನು ಮಹಿಳಾ ಸಂಘಟನೆಯೇ ಹೆಚ್ಚು ಸಮರ್ಥವಾಗಿ ನಿಭಾಯಿಸಬಲ್ಲವು. ಮಹಿಳೆಯರು ಒಟ್ಟು ಸಮಾಜದ ಮುಂಚೂಣಿಗೆ ಬಂದಲ್ಲಿ ಆ ಸಮಾಜ ಬಹುಬೇಗ ಸುಧಾರಿಸುತ್ತದೆ... ಹುಡುಗರು ಮತ್ತು ಹುಡುಗಿಯರ ಮಧ್ಯೆ ತಾರತಮ್ಯ ಮಾಡುವುದು ಅನ್ಯಾಯ. ಹುಡುಗರಿಗಿರುವಷ್ಟೆ ಹುಡುಗಿಯರಿಗೂ ಶಿಕ್ಷಣದ ಅವಶ್ಯಕತೆ ಇದೆ. ಬೇಗ ಮದುವೆ ಮಾಡುವುದು ತರವಲ್ಲ. ಮನೆಯ, ಸಂಘಟನೆಯ, ಪಕ್ಷದ ಹಾಗೂ ದೇಶದ ಆಗುಹೋಗುಗಳಲ್ಲಿ ಮಹಿಳೆಗೆ ಸಮರ್ಪಕವಾದ ಪ್ರಾತಿನಿಧ್ಯ ಅತ್ಯವಶ್ಯ. ಸಮುದಾಯದ ಪ್ರಾತಿನಿಧ್ಯವನ್ನು ಒತ್ತಾಯ ಮಾಡುತ್ತಿರುವಂತಹ ಸಂದರ್ಭದಲ್ಲಿ ಸಮುದಾಯದೊಳಗಣ ಮಹಿಳೆಯರನ್ನು ನಿರ್ಲಕ್ಷಿಸಲಾಗದು. ಅಸ್ಪೃಶ್ಯತೆ, ಜಾತೀಯತೆ, ಜನಸಂಖ್ಯಾ ಹೆಚ್ಚಳ, ಶಿಕ್ಷಣದ ಮಹತ್ವ, ಧರ್ಮಾಂತರ, ವತನ್ ಪದ್ಧತಿಯ ರದ್ದತಿ ಮುಂತಾದ ವಿಷಯಗಳ ಕುರಿತು ಬರಿ ಪುರುಷರೆ ಚರ್ಚಿಸಿದರೆ ಸಾಲದು ಮಹಿಳೆಯರೂ ಪಾಲ್ಗೊಳ್ಳುವಂತಾಗಬೇಕು. ಇದು ಪುರುಷರ ಮತ್ತು ಮಹಿಳೆಯರಿಬ್ಬರ ಜವಾಬ್ದಾರಿ... ಕೌಟುಂಬಿಕ ಹೊಣೆಗಾರಿಕೆಯನ್ನು ಪೂರ್ತಿಯಾಗಿ ಮಹಿಳೆಯರಿಗೆ ಹೊರಿಸಬಾರದು, ಗಂಡಸರೂ ಸಹ ಹೊಣೆಯನ್ನು ಹೊರಬೇಕು. ಕುಟುಂಬವೆಂದರೆ ಸಮುದಾಯದ ಕಣ್ಣು. ಅದು ಚೆನ್ನಾಗಿ ರೂಪುಗೊಂಡರೆ ಉತ್ತಮ ಸಮುದಾಯ, ದೇಶ ರೂಪುಗೊಳ್ಳಲು ಸಾಧ್ಯ. ಮಕ್ಕಳನ್ನು ಹೆರುವುದಷ್ಟೇ ಅಲ್ಲ, ಅವರಿಗೆ ಒಳ್ಳೆಯ ದಿಕ್ಕನ್ನು ತೋರುವುದು ಇಬ್ಬರಿಗೂ ಸೇರಿದ ಹೊಣೆ. ಪತಿ-ಪತ್ನಿಯರು ಉತ್ತಮ ಮಿತ್ರರಂತಿರಬೇಕು. ಪರಸ್ಪರರ ಶ್ರೇಯಸ್ಸಿಗೆ ಇಬ್ಬರೂ ನೆರವಾಗಬೇಕು. ಮನುಷ್ಯ ಗೌರವ ಉಳಿಸಿಕೊಳ್ಳುವ ನಿಟ್ಟಿನಲ್ಲಿ ಹೆಜ್ಜೆ ಇಟ್ಟರೆ ಕುಟುಂಬದ, ಸಮುದಾಯದ ಮತ್ತು ದೇಶದ ಗೌರವವನ್ನು ಎತ್ತಿ ಹಿಡಿಯಲು ಸಾಧ್ಯವಾಗುತ್ತದೆ."

ದು. ಸರಸ್ವತಿ

೧೯೪೨ರಲ್ಲಿ ದಲಿತ ಮಹಿಳಾ ಒಕ್ಕೂಟದಲ್ಲಿ ಮಾಡಿದ ಭಾಷಣದಲ್ಲಿ "...ಮಹಿಳೆಯರು ಹೋರಾಟಗಳಲ್ಲಿ ಸಮಾನರಾಗಿ ಪಾಲ್ಗೊಳ್ಳಬೇಕು. ತಂದೆ, ಸಹೋದರ, ಪತಿ ಹೋರಾಟದಲ್ಲಿದ್ದಾರೆಂಬ ಕಾರಣಕ್ಕಾಗಿ ಅಲ್ಲ. ಆತನ ಗುಲಾಮಳಾಗಿಯೋ, ಅನುಯಾಯಿಯಾಗಿಯೋ ಅಲ್ಲ. ಆಕೆ ಸಮಾನಳಾಗಿರಬೇಕು, ಸ್ನೇಹಿತೆಯಂತಿರಬೇಕು."

**ವೈಚಾರಿಕ ಪ್ರಜ್ಞೆಯನ್ನು ಬೆಳೆಸಿದ ಅಖಿಲ ಭಾರತ ದಲಿತ ಮಹಿಳಾ ಪರಿಷತ್ತು**

ದಲಿತ ಮಹಿಳೆಯರ ವೈಚಾರಿಕ ಪ್ರಜ್ಞೆಯನ್ನು ಬೆಳೆಸುವಲ್ಲಿ ದಲಿತ ಮಹಿಳಾ ಪರಿಷತ್ ಪ್ರಮುಖ ಪಾತ್ರ ವಹಿಸಿತ್ತು. ಪರಿಷತ್ತಿನ ಸಭೆಗಳಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಗಂಭೀರ ವಿಷಯಗಳನ್ನು ಚರ್ಚಿಸಲಾಗುತ್ತಿತ್ತು. ಅಂತಹ ಸಭೆಗಳಲ್ಲಿ ಬಾಲ್ಯವಿವಾಹವನ್ನು ಖಂಡಿಸಿದ್ದಲ್ಲದೆ ಅದರ ಜೈವಿಕ ಹಾಗೂ ಮನಶ್ಶಾಸ್ತ್ರೀಯ ಪರಿಣಾಮಗಳ ಕುರಿತು ಚರ್ಚಿಸಿದ್ದರು.

ಹೆಣ್ಣಿಗೆ ೧೬ ಮತ್ತು ಗಂಡಿಗೆ ೨೨ ವರ್ಷ ವಯಸ್ಸನ್ನು ವಿವಾಹ ಯೋಗ್ಯ ವಯಸ್ಸನ್ನಾಗಿ ನಿರ್ಧರಿಸಿದ್ದರು. ವಿವಾಹ ಸಂದರ್ಭದಲ್ಲಿ ವರದಕ್ಷಿಣೆ ತೆಗೆದುಕೊಳ್ಳುವುದನ್ನು ನಿಷೇಧಿಸಿದ್ದರು. ಸರಳ ವಿವಾಹಕ್ಕೆ ಒತ್ತುನೀಡಿ ಆ ಸಂದರ್ಭದಲ್ಲಿ ಖರ್ಚು ಮಾಡಬೇಕಾದ ಮೊತ್ತವನ್ನು ರೂ. ೧೬ಕ್ಕೆ ಮಿತಿಗೊಳಿಸಿದ್ದರು. ಆ ಮೊತ್ತವನ್ನು ಯಾವ ರೀತಿಯಲ್ಲಿ ಖರ್ಚು ಮಾಡಬೇಕೆಂಬುದರ ವಿವರಗಳನ್ನು ನೀಡಿದ್ದರು. ತಂದೆ–ತಾಯಿಯರು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಒತ್ತು ನೀಡಬೇಕು, ಕೊಡುಗೆಯಾಗಿ ಯಾವ ಆಭರಣವನ್ನೂ ನೀಡಬಾರದೆಂದು ನಿರ್ಣಯಿಸಲಾಗಿತ್ತು.

ಅಲ್ಲದೆ, ಅಂಬೇಡ್ಕರ್ ಅವರು ಕರೆ ನೀಡಿದ್ದ ಧರ್ಮಾಂತರ ಚಳುವಳಿಯಲ್ಲಿಯೂ ಮಹಿಳೆಯರು ಸಕ್ರಿಯವಾಗಿ ಭಾಗವಹಿಸಿದ್ದರು. ಅಂಬೇಡ್ಕರ್ ಅವರ ಕರೆಯ ಮೇರೆಗೆ ಮನೆಯಲ್ಲಿದ್ದ ದೇವರುಗಳನ್ನೆಲ್ಲಾ ಬುಟ್ಟಿಯಲ್ಲಿ ತುಂಬಿಕೊಂಡು ಹೋಗಿ ನದಿಯಲ್ಲಿ ಹಾಕಿ ನಾಗಪುರಕ್ಕೆ ಹೋಗಿ ಬೌದ್ಧಧರ್ಮಕ್ಕೆ ಮತಾಂತರಗೊಂಡ ಮಹಿಳೆಯರು ಸಹಸ್ರಾರು ಸಂಖ್ಯೆಯಲ್ಲಿದ್ದರು.

ಅಂಬೇಡ್ಕರ್ ಅವರ ಜಾತಿವಿನಾಶ ಚಳುವಳಿಯು ಮಹಿಳೆಯರನ್ನು ಸಕ್ರಿಯವಾಗಿ ತೊಡಗಿಸಿಕೊಂಡಿತ್ತು. ಹಲವಾರು ಮಹಿಳೆಯರು ಅಂಬೇಡ್ಕರ್ ಅವರ ಕರೆಗೆ ಓಗೊಟ್ಟು ಕಾಳಾರಂ ದೇವಾಲಯ ಪ್ರವೇಶ, ಮಹಾಡ್ ಸತ್ಯಾಗ್ರಹ, ಧರ್ಮಾಂತರ ಚಳುವಳಿಯಲ್ಲಿ ಭಾಗವಹಿಸಿದ್ದರು. ಹಲವಾರು ಮಹಿಳೆಯರು ಶಿಕ್ಷಣ ಪಡೆದುಕೊಂಡು ಶಾಲೆಗಳಲ್ಲಿ ಶಿಕ್ಷಕಿಯರಾಗಿ ಕೆಲಸ ಮಾಡಿದರು, ಸ್ವತಃ ಶಾಲೆಯನ್ನು ತೆರೆದರು, ಅಂಬೇಡ್ಕರ್ ಚಿಂತನೆಗಳನ್ನು ಮಹಾರಾಷ್ಟ್ರದ ಹಲವೆಡೆ ನಿರಂತರವಾಗಿ ಹರಡಿದರು, ಧರಣಿ, ಸತ್ಯಾಗ್ರಹ, ಮುಷ್ಕರಗಳಲ್ಲಿ ಪಾಲ್ಗೊಂಡು ಪೊಲೀಸರ ಹೊಡೆತ ತಿಂದು ಜೈಲುವಾಸವನ್ನು ಅನುಭವಿಸಿದರು. ಅಂತಹ ನಲವತ್ತ ನಾಲ್ಕು ಮಹಿಳೆಯರ ಕುರಿತು ಮಹಾರಾಷ್ಟ್ರದ ಖ್ಯಾತ ದಲಿತ ಲೇಖಕಿ ಊರ್ಮಿಳಾ ಪಾವರ್‌ರವರು ಮೀನಾಕ್ಷಿ ಮೂನ್ ಅವರೊಂದಿಗೆ ಸೇರಿ ಸಂಪಾದಿಸಿರುವ 'ವಿ ಆಲ್ಸೋ ಮೇಡ್ ಹಿಸ್ಟರಿ' ಪುಸ್ತಕದಲ್ಲಿ ದಾಖಲಿಸಿದ್ದಾರೆ. ಅವುಗಳಲ್ಲಿ ಕೆಲವರ ಅನುಭವಗಳನ್ನು ಇಲ್ಲಿ ದಾಖಲಿಸಲಾಗಿದೆ.

**ಸಂಕಟದಲ್ಲಿ ಸದಾ ಸಾಥಿಯಾಗಿದ್ದ ರಮಾಬಾಯಿ**

ಅಂಬೇಡ್ಕರ್ ಅವರ ಪತ್ನಿ ರಮಾಬಾಯಿ ತಮ್ಮ ಪತಿ ವಿದೇಶದಲ್ಲಿ ನೆಲೆಸಿದ್ದ ಸಂದರ್ಭದಲ್ಲಿ ಅನಾರೋಗ್ಯಕ್ಕೆ ಒಳಗಾಗಿದ್ದರು. ಆರೋಗ್ಯ ಸುಧಾರಿಸಿಕೊಳ್ಳುವ ಸಲುವಾಗಿ ೧೯೩೧ರಲ್ಲಿ ಅವರು ಧಾರವಾಡದಲ್ಲಿದ್ದ ಬಲವಂತರಾವ್ ವರ್ಲೆ ಅವರ ಮನೆಯಲ್ಲಿ ಒಂದೆರಡು ತಿಂಗಳು ನೆಲೆಸಿದ್ದರು. ಬಲವಂತರಾವ್ ಅವರು ನಡೆಸುತ್ತಿದ್ದ ವಸತಿ ಶಾಲೆಯು ಆರ್ಥಿಕ ಸಂಕಷ್ಟ ಎದುರಿಸುತ್ತಿದ್ದನ್ನು ಅವರ ಪತ್ನಿಯ ಮೂಲಕ ತಿಳಿದುಕೊಂಡ ರಮಾಬಾಯಿಯವರು ನೂರು ರೂಪಾಯಿ ನೀಡಿ 'ಹೀಗೆ ಭರವಸೆ ಕಳೆದುಕೊಳ್ಳಬಾರದು. ಈಗ ಈ ದುಡ್ಡಿನಲ್ಲಿ ವಸತಿ ಶಾಲೆಯ ಮಕ್ಕಳಿಗೆ ಆಹಾರ ಧಾನ್ಯ ಖರೀದಿಸಿ. ಆ ನಂತರವೂ ಏನೂ ವ್ಯವಸ್ಥೆಯಾಗದಿದ್ದರೆ ನನ್ನ ಒಡವೆಗಳನ್ನು ಅಡವಿಟ್ಟು ಅಗತ್ಯವಿರುವ ಹಣವನ್ನು ಹೊಂದಿಸಿ. ಬಾಬಾಸಾಹೇಬರು ಬಂದ ಮೇಲೆ ಖಂಡಿತ ಒಡವೆಗಳನ್ನು ಬಿಡಿಸಿಕೊಡುತ್ತಾರೆ' ಎಂದು ಹೇಳಿ ಟ್ರಂಕಿನಲ್ಲಿದ್ದ ಒಡವೆಗಳನ್ನು ಕೊಡಲು ನಿರ್ಧರಿಸಿದ್ದರು. ಕಡುಬಡತನದಲ್ಲಿ ಸಂಸಾರವನ್ನು ತೂಗಿಸುವ ಹೊಣೆ ಹೊತ್ತುಕೊಂಡು ಅದರ ಬಿಸಿ ಪತಿಗೆ ಸ್ವಲ್ಪವೂ ತಾಗದಂತೆ ಜಾತಿವಿನಾಶ ಚಳುವಳಿಯನ್ನು ರಮಾಬಾಯಿಯವರು ಸಾಯುವವರೆಗೂ ಬೆಂಬಲಿಸಿದರು. ಅವರ ಬೆಂಬಲವನ್ನು ಅಪಾರವಾಗಿ ಗೌರವಿಸುತ್ತಿದ್ದ ಬಾಬಾ ಸಾಹೇಬರು ೧೯೪೫ರಲ್ಲಿ ಬರೆದ 'ಥಾಟ್ಸ್ ಆನ್ ಪಾಕಿಸ್ತಾನ್' ಪುಸ್ತಕವನ್ನು ರಮಾಬಾಯಿಯವರಿಗೆ ಅರ್ಪಿಸುತ್ತ ಹೀಗೆ ಬರೆದಿದ್ದಾರೆ :

ರಾಮೂ ನೆನಪಿಗೆ ಅರ್ಪಣೆ...
ಆಕೆಯ ಹೃದಯವಂತಿಕೆ
ಉದಾತ್ತ ಮನಸ್ಸು ಮತ್ತು ಶುದ್ಧ ಗುಣಗಳಿಗೆ
ಹಾಗೂ
ಸ್ನೇಹಿತರೇ ಇಲ್ಲದೆ ಚಿಂತೆ ಮತ್ತು ಅಭಾವವೇ ನಮ್ಮನ್ನು ಕವಿದಿದ್ದ ದಿನಗಳಲ್ಲಿ
ಎದೆಗುಂದದೆ, ನನ್ನೊಂದಿಗೆ ಸಂಕಟಪಡಲು ಸದಾ ಸಿದ್ಧಳಿರುತ್ತಿದ್ದಕ್ಕೆ ಗೌರವಾರ್ಥವಾಗಿ

**ಉಪಾಧ್ಯಾಯಿನಿಯ ಹುದ್ದೆ ಕಳೆದುಕೊಂಡು ಶಾಲೆ ಆರಂಭಿಸಿದ ಜೈಬಾಯಿ**

ಅಂಬೇಡ್ಕರ್ ಚಳುವಳಿಯಿಂದ ಪ್ರೇರಿತರಾಗಿದ್ದ ಜೈಬಾಯಿ ಎಂಬುವವರು ಮಿಷನರಿ ಶಾಲೆಯೊಂದರಲ್ಲಿ ತಿಂಗಳಿಗೆ ನಾಲ್ಕು ರೂಪಾಯಿ ಸಂಬಳದಂತೆ ಉಪಾಧ್ಯಾಯಿನಿಯಾಗಿ ಕೆಲಸಕ್ಕೆ ಸೇರಿದ್ದರು. ತಮ್ಮ ಉಪಾಧ್ಯಾಯಿನಿ ಮಹಾರ್ ಜಾತಿಗೆ ಸೇರಿದವಳೆಂದು ತಿಳಿದ ಮಕ್ಕಳು ಶಾಲೆ ಬಿಡತೊಡಗಿದಾಗ ಶಾಲೆಯ ನಿರ್ದೇಶಕರು ಆಕೆಯನ್ನು ಕೆಲಸದಿಂದ ತೆಗೆದುಹಾಕಿದರು. ಈ ಘಟನೆಯ ನಂತರ ಉಪಾಧ್ಯಾಯಿನಿಯಾಗಿ ಕೆಲಸ ಮಾಡಬೇಕು ಹಾಗೂ ಬಡ ಅಸ್ಪೃಶ್ಯ ಹೆಣ್ಣುಮಕ್ಕಳಿಗಾಗಿ ಏನಾದರೂ ಮಾಡಲೇಬೇಕೆಂಬ ವಾಂಛೆ ಅವರಲ್ಲಿ ಹುಟ್ಟಿತು. ಬಾಬಾಸಾಹೇಬರ ಮತ್ತು ಇತರ ನಾಯಕರುಗಳ ಸಭೆಗಳಿಗೆ ಹೋಗಿ ಭಾಷಣ ಮಾಡಲಾರಂಭಿಸಿದಾಗ ಗಂಡ ಮತ್ತು ಅತ್ತೆಯಿಂದ ಹೊಡೆತ ತಿನ್ನುವಂತಾಯಿತು. ಆದರೂ ಪಟ್ಟು ಬಿಡದೆ ಕೊನೆಗೂ ೧೯೨೪ರಲ್ಲಿ ನಾಗಪುರದ ನ್ಯೂ ಕಾಲೋನಿಯಲ್ಲಿ ಚೊಕ್ಕಮೇಲ ಕನ್ಯಾ ಶಾಲೆಯನ್ನು ತೆರೆದರು. ಮನೆ ಮನೆಗೆ ಹೋಗಿ ಶಾಲೆಗಾಗಿ ದಾನ ಬೇಡಿದರು. ಒಂದು ಸಣ್ಣ ಕಟ್ಟಡದಲ್ಲಿ ಪಾಠ ಶುರು ಮಾಡಿದರು. ನಾಲ್ಕು ವರ್ಷದೊಳಗೆ ಶಾಲೆಗೆ ಬರುವ ಹೆಣ್ಣುಮಕ್ಕಳ ಸಂಖ್ಯೆ ಹೆಚ್ಚಾಯಿತಲ್ಲದೆ ಚೊಕ್ಕದಾದ ಕಟ್ಟಡವನ್ನು ಕಟ್ಟಲು ಸಾಧ್ಯವಾಯಿತು. ಜೈಬಾಯಿಯವರ ಶಾಲೆಯಲ್ಲಿ ೧೯೪೫ರ ಹೊತ್ತಿಗೆ ೧೨೫ ಜನ ಹೆಣ್ಣುಮಕ್ಕಳು ಓದುತ್ತಿದ್ದರು.




**ಬೌದ್ಧಭಿಕ್ಷುಣಿಯಾದ ಲಕ್ಷ್ಮಿಬಾಯಿ**

ಶಾಲಾ ಶಿಕ್ಷಕಿಯಾಗಿ ಕೆಲಸ ಮಾಡಿಕೊಂಡು ಸಮಾಜಸೇವೆಯನ್ನೂ ಮಾಡುತ್ತಿದ್ದ ಲಕ್ಷ್ಮಿಬಾಯಿ ಎಂಬುವವರು, ಅಕ್ಟೋಬರ್ ೧೪, ೧೯೫೬ರಲ್ಲಿ ಬೌದ್ಧಧರ್ಮಕ್ಕೆ ಬಾಬಾ ಸಾಹೇಬರು ಮತಾಂತರಗೊಂಡಾಗ, ತಾವೂ ಸಹ ಮತಾಂತರಗೊಂಡರಲ್ಲದೆ ಬೌದ್ಧ ಸಾಹಿತ್ಯವನ್ನು ಮತ್ತು ಬೌದ್ಧ ತತ್ವಗಳನ್ನು ಆಳವಾಗಿ ಅಭ್ಯಾಸ ಮಾಡಿದರು. ಶಾಲಾ ಶಿಕ್ಷಕಿಯಾಗಿ ಪಡೆಯುತ್ತಿದ್ದ ಸಂಪಾದನೆಯನ್ನೆಲ್ಲ ಬಡವರಿಗಾಗಿ ಮತ್ತು ಬೌದ್ಧಮತ ಪ್ರಚಾರಕ್ಕಾಗಿ ವಿನಿಯೋಗಿಸಿದರು. ಬುದ್ಧನ ತತ್ವಗಳಿಂದ ಅವರು ಅದೆಷ್ಟು ಪ್ರಭಾವಿತರಾಗಿದ್ದರೆಂದರೆ ತಲೆ ಬೋಳಿಸಿಕೊಂಡು ಭಿಕ್ಷುಣಿಯರಂತೆ ಬಿಳಿಯ ಬಟ್ಟೆ ತೊಟ್ಟು ಬೌದ್ಧ ತತ್ವಗಳನ್ನು ಸಾರುತ್ತ ಹಳ್ಳಿಗಳನ್ನು ಸುತ್ತತೊಡಗಿದರು. ಭೋದ್‌ಗಯಾದ ಬೌದ್ಧವಿಹಾರದಲ್ಲಿ ಒಂದು ವರ್ಷ ನೆಲೆಸಿ ಬೌದ್ಧ ತತ್ವಗಳನ್ನು ಅಧ್ಯಯನ ಮಾಡಿದರು ಮತ್ತು ಧ್ಯಾನ ಮಾಡುವುದನ್ನು ಕಲಿತರು. ಕುಶಿನಗರ, ಭೋದ್ ಗಯಾ ಹಾಗೂ ಇನ್ನಿತರ ಪವಿತ್ರ ಬೌದ್ಧ ಕ್ಷೇತ್ರಗಳಿಗೆ ಯಾತ್ರೆ ಕೈಗೊಂಡರು. ಸಾರನಾಥದಲ್ಲಿ

ಭಂತೆಯವರಿಂದ ಭಿಕ್ಷುಣಿಯಾಗಿ ಆದೇಶ ಪಡೆದರು. ವರ್ಷದಲ್ಲಿ ಮೂರು ತಿಂಗಳ ಕಾಲ ದೂರದ ಕೊಂಡೇಶ್ವರ ಎಂಬ ಹಳ್ಳಿಯಲ್ಲಿ ಒಂಟಿಯಾಗಿ ಧ್ಯಾನ ಮಾಡಲು ಆರಂಭಿಸಿದರು. ಪ್ರಾಚೀನ ವಿಹಾರವಾಗಿದ್ದ ಈ ಹಳ್ಳಿಯು ಜನವಸತಿಯಿಂದ ಮೂರು ಕಿಲೋಮೀಟರ್ ದೂರವಿತ್ತು. ಹೀಗೆ ಆಕೆ ಅಧ್ಯಾತ್ಮದಲ್ಲಿ ಆಳವಾದ ಸಾಧನೆ ಮಾಡಿದರು.

**ತಡೆಯಾಜ್ಞೆ ಉಲ್ಲಂಘಿಸಿದ ಗೀತಾಬಾಯಿ**

ಗೀತಾಬಾಯಿಯವರು ೧೯೩೦ರ ಕಾಳಾರಾಮ್ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದರು. ದೇವಸ್ಥಾನ ಪ್ರವೇಶ ಕುರಿತು ಇದ್ದ ತಡೆಯಾಜ್ಞೆ ಉಲ್ಲಂಘಿಸಿ ಪೊಲೀಸರ ಪಡೆಯನ್ನು ತಳ್ಳಿಕೊಂಡು ಮುಂದೆ ಹೋದದ್ದಕ್ಕಾಗಿ ಅವರಿಗೆ ಜೈಲು ಶಿಕ್ಷೆಯಾಗಿ ಅವರು ಒಂದೂವರೆ ತಿಂಗಳು ಜೈಲಿನಲ್ಲಿದ್ದರು.

**ಗಾಂಧೀಜಿಯವರಿಗೆ ಪ್ರಶ್ನೆ ಹಾಕಿದ ಮುಕ್ತಾಬಾಯಿ**

ಮುಕ್ತಾಬಾಯಿ ಸರ್ವಗೌಡ್ ಅವರು ಮಹಾತ್ಮ ಗಾಂಧಿಯವರನ್ನು ಭೇಟಿಮಾಡುವ ಸಲುವಾಗಿ ಅವರು ಪ್ರಾರ್ಥನಾ ಸಭೆ ನಡೆಸುತ್ತಿದ್ದ ಮಲಬಾರ್ ಹಿಲ್‌ನಲ್ಲಿದ್ದ ಬಿರ್ಲಾಭವನಕ್ಕೆ ಹೋಗಿದ್ದರು. ಗಾಂಧೀಜಿಯವರು ಕುಳಿತ್ತಿದ್ದ ಮೇಜಿನ ಹಿಂದೆ ಸರಳವಾದ ಬೊಂಬಿನ ವೇದಿಕೆಯಿತ್ತು. ಬೇರೆಯವರು ಗಮನಿಸುವ ಮೊದಲೇ ಆಕೆ ವೇದಿಕೆಯ ಅಡಿಯಿಂದ ಬಗ್ಗಿ ಹೋಗಿ ಗಾಂಧೀಜಿಯವರ ಪಾದಗಳನ್ನು ಮುಟ್ಟಿ, "ನನಗೆ ನಿಮ್ಮ ಹಸ್ತಾಕ್ಷರವಷ್ಟೇ ಅಲ್ಲ, ನಿಮ್ಮ ಮಾರ್ಗದರ್ಶನವೂ ಬೇಕು" ಎಂದು ಚರಕದಲ್ಲಿ ನೂಲುತ್ತಿರುವ ಗಾಂಧೀಜಿಯವರ ಫೋಟೋವನ್ನು ಅವರ ಮುಂದೆ ಹಿಡಿದರು. ಧೈರ್ಯವಹಿಸಿ "ನೀವ್ಯಾಕೆ ಹರಿಜನ್ ಸೇವಕ್ ಸಂಘದ ಹಣವನ್ನು ಹರಿಜನರಿಗೇ ವಹಿಸುವುದಿಲ್ಲ ?" ಎಂದು ಕೇಳಿದ್ದರು. ಆಗ ಗಾಂಧೀಜಿಯವರು, "ಹರಿಜನರನ್ನು ಅಸ್ಪೃಶ್ಯರೆಂದು ಕರೆದು ಅವರನ್ನು ದೂರವಿಟ್ಟು ನಾವು ಪಾಪ ಮಾಡಿದ್ದೇವೆ. ಸವರ್ಣೀಯ ಹಿಂದೂಗಳು ಇದನ್ನು ಮಾಡಿರುವುದು. ಹಾಗಾಗಿ ಅವರ ಕೈನಲ್ಲೇ ಪಾಪ ತೊಳೆಸುವ ಪ್ರಯತ್ನ ಮಾಡಲಾಗುತ್ತಿದೆ" ಎಂದು ಹೇಳಿದರು.

ಆನಂತರ ಆಕೆ "ಅಂಬೇಡ್ಕರ್ ಅವರ ಬಗ್ಗೆ ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದಾಗ ಅವರು "ಅವರೊಬ್ಬ ವಿದ್ವಾಂಸರು" ಎಂದು ಹೇಳಿದ್ದರು. "ಅವರು ನಾಯಕರಲ್ಲವೇ ?" ಎಂಬ ಮತ್ತೊಂದು ಪ್ರಶ್ನೆಗೆ ಗಾಂಧೀಜಿಯವರು ಮುಗುಳ್ನಕ್ಕಿದ್ದರು. ಮತ್ತೆ ಆಕೆ "ನೀವ್ಯಾಕೆ ಸಾಂಘಿಕ ಪ್ರಾರ್ಥನೆ ಮಾಡುತ್ತೀರಿ ?" ಎಂದು ಕೇಳಿದಾಗ "ಪ್ರಾರ್ಥನೆಗಳು ಆನಂದ ನೀಡುತ್ತವೆ... ಎಲ್ಲರಿಗೂ ಆ ಆನಂದ ಸಿಗಬೇಕು... ಪ್ರತಿಯೊಬ್ಬರೂ ಆ ಆನಂದವನ್ನು ಹಂಚಿಕೊಳ್ಳಬಹುದು" ಎಂದು ಹೇಳಿದ್ದರು.

ಆಕೆ ಗಾಂಧೀಜಿಯವರನ್ನು ಭೇಟಿಮಾಡಿ ಪ್ರಶ್ನೆ ಮಾಡಿದ ವಿಚಾರ ಬಾಬಾಸಾಹೇಬರಿಗೆ ತಲುಪಿತು. ಎಲ್ಲರೂ ಈಕೆ ಕಾಂಗ್ರೆಸ್‌ವಾಲಿ ಎಂದು ದೂರಿದರು. ಆಗ ಬಾಬಾಸಾಹೇಬರೇ 'ಅವಳು ಕುತೂಹಲಕ್ಕಾಗಿ ಹೋಗಿದ್ದಳು' ಎಂದು ಅವರಿಗೆಲ್ಲ ವಿವರಿಸಿದರಲ್ಲದೆ ಆಕೆ ಬುದ್ಧಿವಂತೆಯೂ ಹೌದು ಎಂದು ಹೇಳಿದ್ದರು.

**ಆಂದೋಲನವನ್ನೇ ಬದುಕಾಗಿಸಿಕೊಂಡ ಶಾಂತಾಬಾಯಿ**

ಭೂಹೀನ ಕೂಲಿಗಾರರ ಚಳುವಳಿಯಲ್ಲಿ ಹೆಚ್ಚು ತೊಡಗಿಕೊಂಡಿದ್ದ ಶಾಂತಾಬಾಯಿ ದಾನಿಯವರು ಬೌದ್ಧಮತಕ್ಕೆ ಮತಾಂತರಗೊಳ್ಳುವ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದರು. ಹಲವಾರು ಸ್ಥಳಗಳಲ್ಲಿ ಸಭೆಗಳನ್ನು ಮಾಡುವ ಮೂಲಕ ಧಮ್ಮ ಪ್ರಚಾರಾಂದೋಲನದಲ್ಲಿ ಭಾಗವಹಿಸಿದ್ದರು. 'ಚಳುವಳಿಯಲ್ಲಿ ಕೆಲಸಮಾಡುತ್ತಿದ್ದಾಗ, ಪುರುಷರೊಂದಿಗೆ ಯಾತ್ರೆ ಮಾಡುತ್ತಿದ್ದ ಮಹಿಳೆ ನಾನೊಬ್ಬಳೆ ಆಗಿದ್ದೆ. ಶೌಚ ಅಥವಾ ಬೆಳಗಿನ ನಿತ್ಯ ಕರ್ಮಗಳಿಗೆ ಸಂಬಂಧಪಟ್ಟಂತೆ ಕೆಲವೊಮ್ಮೆ ತೊಂದರೆಯಾಗುತ್ತಿತ್ತು. ಇಂಥ ಸಮಸ್ಯೆಗಳ ಕುರಿತು ಗಂಡಸರು ಅಜ್ಞಾನಿಗಳಾಗಿರುತ್ತಿದ್ದರು. ನಾನಂತೂ ನೂರಾರು ಬಾರಿ ಸಾಯುವಷ್ಟು ತೊಂದರೆ ಅನುಭವಿಸಿದ್ದೇನೆ. ಇಂಥ ಸಮಸ್ಯೆಗಳನ್ನು ಬಿಟ್ಟರೆ ಬೇರೆ ಏನೂ ತೊಂದರೆ ಇರಲಿಲ್ಲ. ಎಲ್ಲರ ವರ್ತನೆಯೂ ಉತ್ತಮವಾಗಿರುತ್ತಿತ್ತು. ಈಗ ನಾನೊಬ್ಬಳೆ ವಾಸ ಮಾಡುತ್ತಿದ್ದರೂ ಧೈರ್ಯವನ್ನು ಕಳೆದುಕೊಂಡಿಲ್ಲ. ಉಳಿದ ಬದುಕನ್ನು ನನ್ನ ಸಂಘಟನೆಗಳು ಮಾಡಬೇಕಾಗಿರುವ ಕೆಲಸಗಳಲ್ಲಿ ಕಳೆಯುವೆ' ಎಂದು ಸಂದರ್ಶನದಲ್ಲಿ ಆಕೆ ಹೇಳಿದ್ದಾರೆ.




**ದಲಿತ ಕಾರ್ಮಿಕರ ಜನಪ್ರಿಯ ನಾಯಕಿ ಸಕುಬಾಯಿ**

ಸಕುಬಾಯಿಯವರು ಬಾಂಬೆಯ ದಲಿತ ಕಾರ್ಮಿಕರ ಜನಪ್ರಿಯ ನಾಯಕಿಯಾಗಿದ್ದರು. ಅವರು ಅದೆಷ್ಟು ಜನಪ್ರಿಯರಾಗಿದ್ದರೆಂದರೆ ಕಾರ್ಮಿಕರು ಅವರನ್ನು ಕುರಿತು "ಒಲೆಯ ಮೇಲಿಟ್ಟಿರುವೆ ಅಕ್ಕಿ / ಬರುವರೆ ಮನೆಗೆ ಬಾಯಿಸಕ್ಕು?" ಎಂಬ ಹಾಡು ಕಟ್ಟಿ ಹಾಡುತ್ತಿದ್ದರು. ಅವರಿಗೆ ಮಕ್ಕಳಿರಲಿಲ್ಲ. ತಮ್ಮ ಇಡೀ ಬದುಕನ್ನೇ ಅವರು ಅಂಬೇಡ್ಕರ್ ಚಳುವಳಿಗೆ ಮೀಸಲಿಟ್ಟರು. ಅವರು ೧೯೬೭ರಲ್ಲಿ ತೀರಿಕೊಂಡಾಗ ಅವರ ನೆನಪಿನಲ್ಲಿ ಬಾಂಬೆಯ ಕೆಲವು ರಸ್ತೆಗಳಿಗೆ ಅವರ ಹೆಸರುಗಳನ್ನು ಇಡಲಾಗಿದೆ. ಇಂದಿಗೂ ಕೆಲವು ಮಹಿಳಾ ಮಂಡಳಿಗಳು ಅವರ ಹೆಸರಿನಲ್ಲಿವೆ.

**ಅಂತರ್ಜಾತಿ ವಿವಾಹಕ್ಕೆ ಹೆದರದ ಕೌಶಲ್ಯಬಾಯಿ**

ಕೌಶಲ್ಯಬಾಯಿ ಎಂಬ ಮತ್ತೋರ್ವ ಚಳುವಳಿಕಾರ್ತಿಯು ತಮ್ಮ ಯಶಸ್ಸಿಗೆ ಕಾರಣರಾದ ತಮ್ಮ ತಾಯಿ ಭಾಗೀರತಿಬಾಯಿ ನಂದೇಶ್ವರ ಅವರನ್ನು ಹೀಗೆ ನೆನಪಿಸಿಕೊಂಡಿದ್ದಾರೆ: "ಮಿಲ್ಲಿನಲ್ಲಿ ಕಾರ್ಮಿಕರಾಗಿದ್ದ ನನ್ನ ತಾಯಿಯು ಪ್ರಗತಿಪರ ವಿಚಾರಗಳನ್ನು ಹೊಂದಿದ್ದರು. ಹೆಣ್ಣುಮಕ್ಕಳು ಶಿಕ್ಷಣವನ್ನು ಪಡೆದುಕೊಂಡು ತಮ್ಮ ಕಾಲ ಮೇಲೆ ತಾವು ನಿಲ್ಲಬೇಕೆಂಬುದು ಆಕೆಯ ನಂಬಿಕೆಯಾಗಿತ್ತು. ಆಗಿನ ಕಾಲದಲ್ಲಿ ಗಂಡಸರಿಗೆ ಸಮಾನವಾಗಿ ಹುಡುಗಿಯರು ಶಾಲೆ, ಕಾಲೇಜುಗಳಿಗೆ ಹೋಗುವುದನ್ನು ಜನರು ಆಡಿಕೊಳ್ಳುತ್ತಿದ್ದರು. ಅವರು ನನ್ನ ಅಮ್ಮನಿಗೆ "ನಿನ್ನ ಹೆಣ್ಣುಮಕ್ಕಳನ್ನು ಓದಿಸಿದರೆ ಅವರ ಮದುವೆ ಮಾಡಲು ಕಷ್ಟವಾಗುತ್ತದೆ, ನಮ್ಮ ಜಾತಿಯವರು ಯಾರು ಒಪ್ಪಿಕೊಳ್ಳುತ್ತಾರೆ ?" ಎಂದು ಕೇಳುತ್ತಿದ್ದರು. ಆಗ ನಮ್ಮ ತಾಯಿ "ನಮ್ಮ ಜಾತಿಯವರ್‍ಯಾರು ಒಪ್ಪಿಕೊಳ್ಳದಿದ್ದರೆ, ಜಾತಿಯ ಹೊರಗೆ ಬಹಳಷ್ಟು ಕುಟುಂಬಗಳಿದ್ದಾವೆ ಬಿಡಿ. ನಮ್ಮ ಹುಡುಗಿಯರು ತಿಳುವಳಿಕೆಯುಳ್ಳವರಾಗಿದ್ದಾರೆ, ಒಳ್ಳೆಯ ಸ್ವಭಾವದವರಾಗಿದ್ದಾರೆ, ತಮ್ಮ ಗಂಡಂದಿರನ್ನು ತಾವೇ ಹುಡುಕಿ ಕೊಳ್ಳುತ್ತಾರೆ ಬಿಡಿ" ಎನ್ನುತ್ತಿದ್ದರು. ನಾವು ಐದು ಜನ ಸೋದರಿಯರು ಶಾಲೆ, ಕಾಲೇಜು ಕಲಿತೆವು, ಸೈಕಲ್‌ನಲ್ಲಿ ಓಡಾಡುತ್ತಿದ್ದೆವು. ನಮಗೆ ಹುಡುಗರು ಮತ್ತು ಹುಡುಗಿಯರಿಬ್ಬರೂ ಸ್ನೇಹಿತರಿದ್ದರು. ಹಾಗಾಗಿ ನಮ್ಮ ಸಮುದಾಯದ ಜನರು ನಮ್ಮನ್ನು ಆಡಿಕೊಳ್ಳುತ್ತಿದ್ದರು. ಮುಂದೆ ನಾವು ಸೋದರಿಯರೆಲ್ಲರೂ ಜಾತಿಯ ಹೊರಗೆಯೇ ಮದುವೆ ಮಾಡಿಕೊಂಡೆವು.

**ಹಿಂದೂ ಕೋಡ್‌ಬಿಲ್ ಪರ ವಾದಿಸಿದ ನಳಿನಿ ತಾಯಿ**

ಅಮರಾವತಿಯಲ್ಲಿ ಸಂಘಟಿಸಲಾಗಿದ್ದ ಯಜ್ಞ ಮತ್ತು ಮಹಿಳಾ ಸಮ್ಮೇಳನದಲ್ಲಿ ಕರ್‌ಪಾತ್ರಿ ಮಹಾರಾಜ್ ಎಂಬುವವರು ಹಿಂದೂ ಕೋಡ್‌ಬಿಲ್‌ಅನ್ನು ವಿರೋಧಿಸಿ ಮಾತನಾಡುವವರಿದ್ದರು. ಹಿಂದೂ ಕೋಡ್‌ಬಿಲ್ಲನ್ನು ಓದಿಕೊಂಡಿದ್ದ ನಳಿನಿ ತಾಯಿ ಲಡ್ಕೆ ಎಂಬ ಚಳುವಳಿಕಾರ್ತಿಯು ಅವರೇನು ಮಾತನಾಡುವರೆಂದು ಕೇಳಲು ಹೋಗಿದ್ದರು. ಆತ ಹಿಂದೂ ಕೋಡ್‌ಬಿಲ್ಲಿನ ಬಗ್ಗೆ ಏನನ್ನೂ ಹೇಳದೆ ಏನೋ ಕಾಲ್ಪನಿಕ ವಿವರಣೆಗಳನ್ನು ನೀಡಿ, ಧರ್ಮ ಮತ್ತು ಗಂಡಂದಿರ ಬಗ್ಗೆ ಇರುವ ಶ್ರದ್ಧೆಯಾದ ಪಾತಿವ್ರತ್ಯ ಮಾತ್ರ ನಮ್ಮನ್ನು ರಕ್ಷಿಸುತ್ತದೆ, ನಮಗ್ಯಾವ ಕಾನೂನುಗಳು ಬೇಕಿಲ್ಲ ಎಂದು ಹೇಳಿದರು.

ಆಗ ನಳಿನಿಯವರು ಮಾತನಾಡಲು ಅನುಮತಿ ಕೋರಿ, ಹಿಂದೂ ಕೋಡ್‌ಬಿಲ್ ಮೂಲಕ ಮಹಿಳೆಯರು ಪಡೆದುಕೊಳ್ಳಬಹುದಾದ ಭದ್ರತೆಯನ್ನು ವಿವರಿಸಿದ್ದಲ್ಲದೆ ಕರ್‌ಪಾತ್ರಿ ಮಹಾರಾಜರ ಭಾಷಣದಲ್ಲಿದ್ದ ವಿಚಾರ ಶೂನ್ಯತೆಯನ್ನೂ ಎತ್ತಿ ತೋರಿಸಿದರು. ಅಧ್ಯಕ್ಷತೆ ವಹಿಸಿದ್ದ ತಾರಾಬಾಯಿ ಪಧ್ಯೆಯವರು ಹಲವಾರು ಸಲ ಸೂಚನೆ ನೀಡಿ ಮಾತು ನಿಲ್ಲಿಸಲು ಹೇಳಿದಾಗ ಆಕೆ 'ಮಾತು ನಿಲ್ಲಿಸಲು ಹೇಳುತ್ತಿದ್ದಾರೆಂದು' ಸಭಿಕರಿಗೆ ಮೈಕಿನಲ್ಲಿಯೇ ಹೇಳಿದರು. "ಆಕೆಯ ಭಾಷಣ ಮುಂದುವರಿಯಲಿ" ಎಂದು ಜನರು ಕೂಗಿಕೊಂಡಾಗ ಭಾಷಣ ಮುಂದುವರಿಸಿ ಕೊನೆಯಲ್ಲಿ "ಗಂಡಂದಿರ ಮೇಲಿನ ಶ್ರದ್ಧೆಯಷ್ಟೆ ನಮ್ಮನ್ನು ರಕ್ಷಿಸುತ್ತದೆ ಎನ್ನುವುದಾದರೆ, ದೇಶ ವಿಭಜನೆಯಾಗಿ ಪಾಕಿಸ್ತಾನ ಸೃಷ್ಟಿಯಾದಾಗ ಸಾವಿರಾರು ಮಹಿಳೆಯರ ಮೇಲೆ ನಡೆದ ಭೀಕರ ಹಿಂಸೆಯ ಹಿನ್ನೆಲೆಯಲ್ಲಿ, ಇಂದು ಭಾರತದಲ್ಲಿ ಒಬ್ಬಳೇ ಒಬ್ಬಳು ಪತಿವ್ರತೆ ಇಲ್ಲವೆಂದು ಹೇಳಬೇಕಾಗುತ್ತದೆ. ಕರ್‌ಪಾತ್ರಿ ಮಹಾರಾಜರು ನಮ್ಮೆಲ್ಲರನ್ನು ಭ್ರಷ್ಟರೆಂದು ಕರೆದಂತಾಗುತ್ತದೆ. ಪ್ರಜ್ಞಾವಂತ ಮಹಿಳೆಯರು ಈ ಬಗ್ಗೆ ಯೋಚಿಸಬೇಕಾಗುತ್ತದೆ ಮತ್ತು ಹಿಂದೂ ಕೋಡ್‌ಬಿಲ್ಲನ್ನು ವಿರೋಧಿಸುತ್ತಿರುವ ಧಾರ್ಮಿಕ ಪರಿಷತ್ತಿನ ಹುನ್ನಾರಗಳನ್ನು ಬಯಲಿಗೆಳೆಯಬೇಕಾಗುತ್ತದೆ ಎಂದು ಹೇಳಿದರು. ಜನರೆಲ್ಲ "ಈ ಹೆಂಗಸು ಕೆಳಜಾತಿಯಿಂದ ಬಂದವಳಾದ್ದರಿಂದ ಅಡ್ನಾಡಿ ಗುಣವನ್ನು ಹೊಂದಿದ್ದಾಳೆ" ಎಂದು ಹೇಳಿದ್ದಲ್ಲದೆ ಮನಸ್ಸಿಗೆ ತೃಪ್ತಿಯಾಗುವಷ್ಟು ನಿಂದಿಸಿದ ಮೇಲೆ ಸಭೆಯನ್ನು ಬರ್ಖಾಸ್ತು ಮಾಡಿದರು. ಮುಂದೆ ಗೌರವಾನ್ವಿತ ಶ್ರೀ ಖಾರ್ಪಡೆಯವರ ನೇತೃತ್ವದಲ್ಲಿ ಸಭೆ ಸೇರಿ ಆಕೆಯನ್ನು ಟೀಕಿಸಿ, ಹಿಂದೂ ಕೋಡ್‌ಬಿಲ್ಲನ್ನು ವಿರೋಧಿಸುವ ನಿರ್ಣಯವನ್ನು ಕೈಗೊಂಡರು. "ನಿಜಾಂಶವೇನೆಂದರೆ ಮಹಿಳೆಯರೆಲ್ಲರನ್ನೂ ರಾಮರಾಜ್ಯ ಧಾರ್ಮಿಕ ಪರಿಷತ್‌ನ ನೆಪದಲ್ಲಿ ಒಗ್ಗೂಡಿಸಿ ಹಿಂದೂ ಕೋಡ್‌ಬಿಲ್ಲನ್ನು ಕಿತ್ತುಹಾಕಬೇಕೆಂಬ ನಿರ್ಣಯಕ್ಕೆ ಸಹಿ ಪಡೆದುಕೊಂಡು ಸರ್ಕಾರಕ್ಕೆ ಕಳುಹಿಸುವ ಯೋಜನೆಯಿತ್ತು. ಆದರೆ ನಾನು ಅಧ್ಯಕ್ಷರನ್ನು ಬಹಳ ಕಟುವಾಗಿ ಟೀಕಿಸಿದ್ದರಿಂದ ಮತ್ತು ಹಿಂದೂ ಕೋಡ್‌ಬಿಲ್ ಹೇಗೆ ಮಹಿಳೆಯರಿಗೆ ಅನುಕೂಲಕರವೆಂದು ತೋರಿಸಿದ್ದರಿಂದ ಅವರೆಲ್ಲರೂ ನಿರ್ಣಯಕ್ಕೆ ಸಹಿ ಹಾಕದೆ ಹೋಗಿದ್ದರು. ಈ ಸಂದರ್ಭವನ್ನು ನಾನ್ಯಾವತ್ತೂ ಮರೆತಿಲ್ಲ" ಎಂದು ಆಕೆ ತಮ್ಮ ಅನುಭವವನ್ನು ದಾಖಲಿಸಿದ್ದಾರೆ.

**ಚಳುವಳಿಗಾಗಿ ಪತಿಗೆ ಅಡುಗೆ ಕಲಿಸಿದ ವಿಮಲ್ ರೋಖಡೆ**

ವಿಮಲ್ ರೋಖಡೆ ಎಂಬುವವರು 'ನಾನು ಹೊರಗೆ ಹೋಗಿ ಕೆಲಸ ಮಾಡುವಾಗಲೆಲ್ಲ ಅಡುಗೆ ಕೆಲಸ ಕಷ್ಟವಾಗುತ್ತಿತ್ತು. ಮುಟ್ಟಿನ ದಿನಗಳಲ್ಲಿ ಅಡುಗೆ ಮಾಡಲು ಮತ್ತು ನಾನು ಕಾಯಿಲೆ ಬಿದ್ದಾಗ ಒಲೆಯೂ ಕಾಯಿಲೆ ಬೀಳಬಾರದೆಂದು ನನ್ನ ಪತಿಗೆ ಅಡುಗೆ ಮಾಡುವುದನ್ನು ನಾನು ಕಲಿಸಿದ್ದೆ. ಅವರು ನನ್ನ ಸೀರೆಯನ್ನು ಇಸ್ತ್ರಿ ಮಾಡುತ್ತಿದ್ದರು, ಮುಡಿದುಕೊಳ್ಳಲು ಹೂವಿನ ಮಾಲೆ ತರುತ್ತಿದ್ದರು, ಚಪ್ಪಲಿ ಸುಸ್ಥಿತಿಯಲ್ಲಿದೆಯೇ ಎಂಬುದನ್ನೂ ನೋಡಿಕೊಳ್ಳುತ್ತಿದ್ದರು. ಅಂಥ ಸಹಕಾರ ಸಿಕ್ಕಿದ್ದರಿಂದಲೇ ನನಗೆ ಸಮಾಜ ಕಾರ್ಯ ಮಾಡಲು ಸಾಧ್ಯವಾದದ್ದು' ಎಂದು ದಾಖಲಿಸಿದ್ದಾರೆ.



**ಹಾಡುಗಳ ಕಟ್ಟಿ ಹಾಡುತ್ತಿದ್ದ ಪರ್ಬತಬಾಯಿ**

ಪರ್ಬತಬಾಯಿ ಮೇಶ್ರಮ್ ಅವರು ಚಳುವಳಿಯ ಭಾಗವಾಗಿ ಹಲವಾರು ಹಾಡುಗಳನ್ನು ರಚಿಸಿ ಹಾಡಿದ್ದಾರೆ:

*ಜನರ ಒಳಿತಿಗಾಗಿ ಆತ ಜೀವ ತೆತ್ತ*
*ಅದಕೆ ಬಾಯಿ ನನಗೆ ಬುದ್ಧನೆಂದರೆ ಹುಚ್ಚು*
*ಕೆಲವರೆನ್ನುತ್ತಾರೆ ಬುದ್ಧ ವಿಷ್ಣುವಿನ ಅವತಾರವೆಂದು*
*ಆದರೆ ನಾ ನಿಮ್ಮ ಕೇಳುತ್ತೇನೆ ಬಾಯಿ ವಿಷ್ಣು ಬುದ್ಧನಂತಿದ್ದನೆ ?*
*ಬ್ರಹ್ಮ, ವಿಷ್ಣು, ಮಹೇಶ ಅಂತೆ ನಡೆದುಕೊಂಡಿದ್ದರೆ ?*
*ಅದಕ್ಕೆ ಬಾಯಿ ನನಗೆ ಬುದ್ಧನೆಂದರೆ ಹುಚ್ಚು*

* * *

*ಸೋದರ, ಸೋದರಿಯರೆ ಬುದ್ಧನ ತಾವಿಗೆ ಬನ್ನಿ*
*ಪ್ರಾರ್ಥನೆ ಮಾಡುವ ಸಮಯವಿದು ಕೈಜೋಡಿಸಿ ತಲೆಯ ಬಾಗಿಸಿ*
*ಪ್ರಾರ್ಥನೆ ಮಾಡುವ ಸಮಯವಿದು*
*ಪ್ರತಿ ಪದವ ಗಮನವಿಟ್ಟು ಕೇಳಿ*
*ನಿಮ್ಮ ಲೋಕ ಬಿಡುಗಡೆಯಾಗುವುದು*
*ಅದನ್ನು ಅವ ನಿಮಗೆ ವಹಿಸಿದ್ದಾನೆ*
*ಪ್ರಾರ್ಥನೆ ಮಾಡುವ ಸಮಯವಿದು*

* * *

*ನಿಮ್ಮೊಳಗೆ ಆತ್ಮಗೌರವ ಜಾಗೃತವಾಗಲಿ*
*ಭಿಕ್ಷೆ ಬೇಡಬೇಡಿ*
*ಎಂದು ಹೇಳಿ ಭೀಮಾನಂದ ಹೋದ*
*ಜನರ ಸೇವೆಗೆ ಸಿದ್ಧರಾಗಿ ಎಂದು*
*ನಮ್ಮ ಬದುಕಿನ ಶಿಲ್ಪಿ ನಮಗೆ ಹೇಳಿಹೋದ*
*ಕೈ ಜೋಡಿಸಿ, ತಲೆಬಾಗಿಸಿ*
*ಪ್ರಾರ್ಥನೆ ಮಾಡುವ ಸಮಯವಿದು*

ಆಕೆ ಹಾಡುಗಳ ಜೊತೆಗೆ ಬಣ್ಣ ಬಳಿಯುವ ಕೆಲಸವನ್ನು ಗುತ್ತಿಗೆ ತೆಗೆದುಕೊಳ್ಳುತ್ತಿದ್ದರು. ಹಲವಾರು ರೈಲ್ವೆ ಬಿಲ್ಡಿಂಗ್‌ಗಳಿಗೆ ಸುಣ್ಣ ಹೊಡೆಯುವ ಕೆಲಸವನ್ನು ಆಕೆ ಮಾಡಿದ್ದಾರೆ. 'ಈಗ ನನ್ನ ಮಕ್ಕಳು ಕೆಲಸ ಮಾಡಲು ನನ್ನನ್ನು ಬಿಡುವುದಿಲ್ಲ. ಈಗ ನನ್ನ ಬದುಕನ್ನು ಬುದ್ಧನ ಕೆಲಸಗಳಿಗೆ ಮೀಸಲಿಟ್ಟಿದ್ದೇನೆ' ಎಂದು ಆಕೆ ಅನುಭವ ಹಂಚಿಕೊಂಡಿದ್ದಾರೆ.

**ಕುಸ್ತಿಪಟು ಶಾಂತಾಬಾಯಿ**

ಕುಸ್ತಿಪಟುವಾಗಿದ್ದ, ಹಲವಾರು ಬಾರಿ ಜೈಲಿಗೆ ಹೋಗಿದ್ದ ಶಾಂತಾಬಾಯಿ ಸರೋದೆಯವರು ಧೈರ್ಯಶಾಲಿ ನಾಯಕಿಯಾಗಿದ್ದರು. ಖಾತ್‌ಖೇಡ್ ಹಳ್ಳಿಯಲ್ಲಿ ದಲಿತರು ಬಾವಿಯನ್ನು ಮುಟ್ಟುವಂತಿರಲಿಲ್ಲ. ಅವರಿಗೆ ನೀರು ಸೇದಿ ಹಾಕಲು ಕುಣಬಿಗಳು ತಡಮಾಡುತ್ತಿದ್ದರಿಂದ ಮಹಾರರು ಗಂಟೆಗಟ್ಟಲೆ ಕಾಯಬೇಕಾಗುತ್ತಿತ್ತು. ಆಗ ಆಕೆ ಒಂದಷ್ಟು ಜನರೊಂದಿಗೆ ಹೋಗಿ ಬಾವಿಯನ್ನು ಮುಟ್ಟಿದರು. "ಯಾರು ನೀನು" ಎಂದು ಅವರು ಕೇಳಿದಾಗ "ನಾನು ಮಾಂಗಿಣಿ" ಎಂದರು. "ಯಾಕೆ ಬಂದಿದೀಯಾ ?" ಎಂದು ಕೇಳಿದಾಗ "ಪಾಟೀಲರ ಮಗಳಿಗೆ ಹೆರಿಗೆ ಮಾಡಿಸಲು !" ಎಂದು ಹೇಳಿದರು. ಬಾವಿ ಅಪವಿತ್ರವಾಯಿತೆಂದು ಹಲವರು ಅಸ್ತ್ರಗಳನ್ನು ಹಿಡಿದುಕೊಂಡು ಬಂದಾಗ, "ಯಾರಾದರು ನನ್ನನ್ನು ಮುಟ್ಟಿದರು ಸಾಕು, ಮೂರ್‍ನಾಲ್ಕು ಜನರನ್ನಾದರೂ ಕೊಲ್ಲದೆ ಬಿಡುವುದಿಲ್ಲ" ಎಂದು ಎಚ್ಚರಿಸಿದರು. ಮುಂದೆ ಸಭೆ, ಮಾತುಕತೆಗಳಾಗಿ ಪೊಲೀಸರು ಬಂದು, ದೂರು ದಾಖಲಾಗಿ ಕೊನೆಗೆ ಬಾವಿಯನ್ನು ಬಳಸಲು ಅನುಮತಿ ನೀಡಿದರು.

ಮುಂದೆ ಯಾವತ್ಮಲ್‌ನ ದರ್‌ಹ್ವ ತೆಹಸಿಲ್‌ನ ಚಪ್ಪವಾಡ, ಬೋರ್‌ಗಾಂವ್, ದೇನಿ, ಸಲ್‌ಬರ್ಡಿಯಲ್ಲಿ ಎಲ್ಲೇ ಆಗಲಿ ಅಸ್ಪೃಶ್ಯರ ವಿರುದ್ಧ ಅನ್ಯಾಯ ಅಥವಾ ಹಿಂಸೆಯಾದಾಗ ಜನ ಅವರನ್ನು ಕರೆಯುತ್ತಿದ್ದರು. ಕುದುರೆಗಾಡಿ ವೆಚ್ಚವನ್ನು ಅವರೇ ಭರಿಸುತ್ತಿದ್ದರು. ಯಾವತ್ಮಲ್‌ನ ದೇನಿ ಗ್ರಾಮದಲ್ಲಿ ಅಸ್ಪೃಶ್ಯರು ಬೌದ್ಧಧರ್ಮಕ್ಕೆ ಮತಾಂತರಗೊಂಡಾಗ ಸವರ್ಣೀಯ ಹಿಂದೂಗಳು ಅವರಿಗೆ ಬಹಿಷ್ಕಾರ ಹಾಕಿದರು. ಅಲ್ಲಿನ ಅಸ್ಪೃಶ್ಯರು ಹುಲ್ಲು ಕೊಯ್ದು ಮಾರಿ ಜೀವನ ನಡೆಸುತ್ತಿದ್ದರು.

ಹಿಂದೂಗಳು ಹುಲ್ಲು ಮಾರಾಟದ ಪರವಾನಿಗೆಯನ್ನು ನಿಲ್ಲಿಸಿದಾಗ ಅವರ ಹೊಟ್ಟೆಪಾಡಿಗೆ ಕುತ್ತು ಬಂತು.

ಆಗ ಆಕೆ ಇನ್ನಿತರ ದಲಿತ ಮುಖಂಡರನ್ನು ಜೊತೆಗೂಡಿ ಅರಣ್ಯಾಧಿಕಾರಿಯನ್ನು ಕಂಡು, "ನಮ್ಮ ಮಕ್ಕಳು ಹಸಿವಿನಲ್ಲಿ ನರಳುತ್ತಿದ್ದರು ಅದಕ್ಕೆ ನಾವು ಬೌದ್ಧರಾದೆವು, ಇದು ಅಪರಾಧವೆ ?" ಎಂದು ಕೇಳಿದರು. ಕೈಲಿ ಚೂಪಾದ ಕುಡುಗೋಲು ಹಿಡಿದಿದ್ದ ಸುಮಾರು ಎಂಬತ್ತೋ ಅಥವಾ ತೊಂಬತ್ತೋ ಮಹಿಳೆಯರ ಮುಂಚೂಣಿಯಲ್ಲಿ ನಿಂತು ಹುಲ್ಲು ಕತ್ತರಿಸಲು ಕುಳಿತುಕೊಳ್ಳುತ್ತಿದ್ದಂತೆಯೇ ಎರಡು ಮೋಟಾರು ಕಾರುಗಳು ಅಲ್ಲಿಗೆ ಬಂದವು. ಅವರೊಂದಿಗೆ ಸೂಕ್ತವಾಗಿ ಮಾತನಾಡಿ ನಂತರ ಇಂದಿನಿಂದ ಬೌದ್ಧ ಮಹಿಳೆಯರು ಇಲ್ಲಿಗೆ ಬಂದು ಹುಲ್ಲು ಕತ್ತರಿಸಬಹುದು, ಯಾರು ಅವರನ್ನು ತಡೆಯುವಂತಿಲ್ಲ ಎಂಬ ಸರ್ಕಾರಿ ಆದೇಶವನ್ನು ನೀಡಿದರು. ಇಂದೋರಿನ ಒಂದು ಪ್ರದೇಶದಲ್ಲಿ ಡಾ॥ ಬಾಬಾಸಾಹೇಬರ ಪ್ರತಿಮೆ ಕುರಿತು ಅವಮಾನಕರ ಮಾತುಗಳನ್ನಾಡಿದ್ದರಿಂದ ಗಲಭೆಯುಂಟಾಯಿತು. ಆ ಸಂದರ್ಭದಲ್ಲಿ ಆಕೆ ಐದು ಕೊಲೆಗಳನ್ನು ಮಾಡಿದೆನೆಂದು ಪೊಲೀಸರು ದೂರು ದಾಖಲಿಸಿ ೧೩ ತಿಂಗಳು ಜೈಲಿನಲ್ಲಿರಿಸಿದ್ದರು.




***ಹಿಂದೂ ಕೋಡ್‌ಬಿಲ್***

**ಕ್ರಾಂತಿಕಾರಕ ಹಿಂದೂ ಕೋಡ್‌ಬಿಲ್**

ಬಾಬಾಸಾಹೇಬರು ಹಿಂದೂ ಕೋಡ್‌ಬಿಲ್ ರಚಿಸಿ ಫೆಬ್ರವರಿ ೨೪, ೧೯೪೯ರಂದು ಸದನದಲ್ಲಿ ಮಂಡಿಸಿದ್ದು, ಅದಕ್ಕೆ ವಿರೋಧ ವ್ಯಕ್ತವಾದ್ದರಿಂದ ನೊಂದು ಅವರು ಸಚಿವ ಸ್ಥಾನಕ್ಕೆ ರಾಜಿನಾಮೆ ಕೊಟ್ಟದ್ದು ಐತಿಹಾಸಿಕ ವಿಷಯ. ಮಹಿಳೆಯರಿಗೆ ವಿಚ್ಛೇದನ ಹಕ್ಕು, ಆಸ್ತಿ ಹಕ್ಕು, ಮಕ್ಕಳನ್ನು ದತ್ತು ಪಡೆದುಕೊಳ್ಳುವ ಹಕ್ಕು ನೀಡಬೇಕು ಎಂಬಂತಹ ಅಂದಿನ ಕಾಲಕ್ಕೆ ಅತ್ಯಂತ ಕ್ರಾಂತಿಕಾರಕವಾಗಿದ್ದ ವಿಷಯಗಳನ್ನು ಅವರು ಬಿಲ್ ಮೂಲಕ ಮಂಡಿಸಿದ್ದರು. ಅವರ ಸಮಕಾಲೀನರಾದ ಕ್ರಾಂತಿಕಾರರೂ, ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಕೊಂಡಿದ್ದಂತಹವರೂ ಸಹ ಹೌಹಾರಿ ಅದು ಜಾರಿಗೊಳ್ಳದಂತೆ ಮಾಡಿದರು. ಸರೋಜಿನಿ ನಾಯ್ಡು ಅವರೂ ಸಹ ಜಾರಿಗೊಳಿಸಿದರೆ ಉಪವಾಸ ಸತ್ಯಾಗ್ರಹ ಹೂಡುವುದಾಗಿ ಹೇಳಿದ್ದರು. ಆರ್. ಎಸ್. ಎಸ್. ದೆಹಲಿಯೊಂದರಲ್ಲೇ ಸರಣಿ ಪ್ರತಿಭಟನೆಗಳನ್ನು ನಡೆಸಿತು. ಇಷ್ಟೆಲ್ಲ ವಿರೋಧ ಏಕೆ ವ್ಯಕ್ತವಾಯಿತು ಎಂಬುದನ್ನು ಆಳವಾಗಿ ಯೋಚಿಸುವಾಗ ಖಾಸಗಿ ಆಸ್ತಿ, ಪ್ರಭುತ್ವ, ಜಾತಿಶ್ರೇಷ್ಠತೆ, ಪುರುಷ ಪ್ರಾಧಾನ್ಯತೆಗೆ ಆಧಾರವಾಗಿರುವ ಮುಖ್ಯ ವಿಷಯಗಳಲ್ಲಿ ಮಹಿಳೆಯರ ಲೈಂಗಿಕತೆ ಮತ್ತು ದುಡಿಮೆಯ ನಿಯಂತ್ರಣವೂ ಒಂದಾಗಿದೆ ಎಂಬುದು, ಆ ನಿಯಂತ್ರಣವನ್ನು ವಿವಾಹ ಮತ್ತು ಕುಟುಂಬ ಸಂಸ್ಥೆಗಳು ಅತ್ಯಂತ ವ್ಯವಸ್ಥಿತವಾಗಿ ನಿರ್ವಹಿಸುತ್ತವೆ ಎಂಬುದು ತಿಳಿಯುತ್ತದೆ. ವಿವಾಹವಾಗದೆ, ಮಕ್ಕಳನ್ನು ಅದರಲ್ಲೂ ವಾರಸುದಾರನಾಗುವ ಗಂಡು ಮಗುವನ್ನು ಹೆರದೆ, ಗಂಡ ಮತ್ತು ಮನೆಯವರ ಸೇವೆ ಮಾಡಿಕೊಂಡು ಸಂಸಾರದ ಜವಾಬ್ದಾರಿಯನ್ನು ಸೂಕ್ತವಾಗಿ ನಿರ್ವಹಿಸದೆ ಹೆಣ್ಣಿನ ವ್ಯಕ್ತಿತ್ವ ಪರಿಪೂರ್ಣವಲ್ಲ; ಗಂಡ ತೀರಿಹೋದರೆ ಹೆಣ್ಣಿನ ಬದುಕೇ ಮುಗಿದಂತೆ; ಜಾತಿಯ ಹೊರಗೆ ಮದುವೆಯಾಗುವುದು ಜಾತಿ ಶುದ್ಧತೆಗೆ ಮಾರಕ ಎಂಬ ನಂಬಿಕೆಗಳ ಬುಡವನ್ನೇ ಅಲ್ಲಾಡಿಸುವಂತಹ ಕ್ರಾಂತಿಕಾರಕ ಪ್ರಯತ್ನವನ್ನು ಹಿಂದೂ ಕೋಡ್‌ಬಿಲ್ಲಿಗೆ ತಿದ್ದುಪಡಿ ತರುವ ಮೂಲಕ ಅಂಬೇಡ್ಕರ್ ಅವರು ಮಾಡಿದರು. ವಿವಾಹವನ್ನು ಮುರಿದುಕೊಳ್ಳುವ ವಿಚ್ಛೇದನದ ಹಕ್ಕು, ಗಂಡನಿಂದ ಪ್ರತ್ಯೇಕವಾಗಿ ಜೀವನ ನಡೆಸುತ್ತಿರುವ ಮಹಿಳೆಗೂ ಜೀವನಾಂಶದ ಹಕ್ಕು, ಶಾಸ್ತ್ರೋಕ್ತ ವಿವಾಹವಲ್ಲದೆ ನಾಗರಿಕ ವಿವಾಹವನ್ನೂ ಅಧಿಕೃತಗೊಳಿಸುವುದು, ಅಧಿಕಾರದ ಬಹುಮುಖ್ಯ ಆಧಾರವಾದ ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಪಾಲು ಮತ್ತು ತೀರಿಹೋದ ಪತಿಯ ಆಸ್ತಿಯಲ್ಲಿ ಪಡೆದುಕೊಂಡ ಪಾಲಿನ ಮೇಲೆ ವಿಧವೆಗೆ ಸಂಪೂರ್ಣ ಹಕ್ಕು, ವಿವಾಹ ಮತ್ತು ದತ್ತು ಪಡೆದುಕೊಳ್ಳುವ ವಿಷಯದಲ್ಲಿ ಜಾತಿಭೇದವನ್ನು ತೊಡೆದುಹಾಕುವಂತಹ ವಿಷಯವನ್ನು ತಿದ್ದುಪಡಿಯಲ್ಲಿ ಅವರು ತಂದರು.

ಮಹಿಳಾ ವಿಮೋಚನೆಯ ಮೂಲಕ ಜಾತಿವಿನಾಶ ಸಾಧ್ಯವೆಂಬುದು ಬಾಬಾಸಾಹೇಬರ ನಂಬಿಕೆಯಾಗಿತ್ತು. ಕಾರಣ, ಶ್ರೇಣೀಕೃತ ಜಾತಿಪದ್ಧತಿಯಲ್ಲಿ ಮಹಿಳೆಯರ ಲೈಂಗಿಕತೆಯ ನಿಯಂತ್ರಣದ ಮೂಲಕವಷ್ಟೇ ಜಾತಿ ಶುದ್ಧತೆಯನ್ನು ಕಾಪಾಡಿಕೊಳ್ಳಲು ಸಾಧ್ಯವಾಗುವುದು. ಹಾಗಾಗಿಯೇ ಅವರು ಹಿಂದೂ ಕೋಡ್‌ಬಿಲ್ ಜಾರಿಗೆ ಮುಂದಾಗಿದ್ದು. ಹಲವು ಕಟ್ಟುಪಾಡುಗಳನ್ನು ಹೇರಿ ಮಹಿಳೆಯರ ದುಡಿಮೆ ಮತ್ತು ಲೈಂಗಿಕತೆಯ ಮೇಲೆ ನಿಯಂತ್ರಣ ಹೇರುತ್ತಿದ್ದ ವಿವಾಹ ಸಂಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತರುವುದು ಸುಲಭದ ಕೆಲಸವಲ್ಲ. ಲಿಂಗತಾರತಮ್ಯವೆಂಬ ಪುರಾತನ ಕಾಯಿಲೆಯ ಮೂಲವಾದ ಅಸಮಾನ ವಿವಾಹ ಮತ್ತು ಕುಟುಂಬ ವ್ಯವಸ್ಥೆಯನ್ನು ಅಲ್ಲಾಡಿಸುವುದೆಂದರೆ ಗಿಡದ ಬುಡವನ್ನೇ ಅಲ್ಲಾಡಿಸಿ ಹೊಸ ಮಣ್ಣಿಗೆ ನೆಟ್ಟು ಬಾಡದ ಹಾಗೆ ಕಾಪಾಡಿದಂತೆ. ಬೇರು ಊರಿ, ಹೊಸ ಮಣ್ಣು ಮತ್ತು ಬೆಳಕಿನ ಸಾರವ ಹೀರಿಕೊಂಡು ಜೀವ ಸಂಚಲನವಾಗಬೇಕಾದರೆ ಹಳೆಯ ಹೀಚು, ಕಾಯಿ, ಎಲೆಗಳು ಉದುರುತ್ತವೆ, ಮಣ್ಣು, ಬೆಳಕು ಬೇರನ್ನು ಹಿಡಿಯುವವರೆಗೂ ನಿತ್ರಾಣ, ನಿಶ್ಶಕ್ತಿ ಉಂಟಾಗುತ್ತದೆ. ಆದರೆ ಹೊಸ ಚೈತನ್ಯಕ್ಕೆ ಸಾರವಾಗುತ್ತಿದ್ದೇನೆ ಎಂದು ಅರಿಯದಿದ್ದರೆ ತಕ್ಷಣಕ್ಕೆ ಹುಟ್ಟನ್ನು ಕಳೆದುಕೊಳ್ಳುತ್ತಿದ್ದೇನೆ ಎಂಬ ಅಭದ್ರ ಭಾವವೇ ಗಟ್ಟಿಯಾಗಿಬಿಡುತ್ತದೆ. ಹಾಗಾಗಿಯೇ ಸಹಿಸಿಕೊಳ್ಳುವುದೂ ಸುಲಭ ಸಾಧ್ಯವಲ್ಲ.

ಸಮಾಜದ ಮೂಲಭೂತ ಘಟಕಗಳಾದ ಕುಟುಂಬ ಮತ್ತು ವಿವಾಹ ಸಂಸ್ಥೆಗಳು ಒಟ್ಟು ಸಮಾಜದ ಪ್ರತಿಬಿಂಬಗಳೇ ಆಗಿರುತ್ತವೆ, ಹೊರ ಸಮಾಜದ ಶ್ರೇಣೀಕರಣ, ತಾರತಮ್ಯ, ಅಸಮಾನತೆ, ಅಧಿಕಾರದ ಕೇಂದ್ರೀಕರಣ ಇಲ್ಲಿಯೂ ಅಂತರ್ಗತಗೊಂಡಿರುತ್ತವೆ. ಸಮಾಜ ಮತ್ತು ಕುಟುಂಬಗಳೆರಡು ಏಕಕಾಲಕ್ಕೆ ಬದಲಾದಾಗಲೇ ಸಂಪೂರ್ಣ ಬದಲಾವಣೆ ಸಾಧ್ಯವಾಗುವುದು. ಆದ್ದರಿಂದಲೇ ಮಹಿಳಾ ಚಳುವಳಿಯು ವೈಯಕ್ತಿಕವಾದುದಕ್ಕೆ ರಾಜಕೀಯ ಆಯಾಮವಿದೆ ಎಂದು ಪ್ರತಿಪಾದಿಸಿದ್ದು. ನಿಜ ಅರ್ಥದಲ್ಲಿ ಸಂಪೂರ್ಣ ಬದಲಾವಣೆಗಾಗಿ ಬಯಸುವವರು ಮನಸ್ಸು, ಮನೆ ಮತ್ತು ಸಮಾಜದ ಬದಲಾವಣೆಯನ್ನು ಬೇರೆಯಾಗಿ ನೋಡುವುದಿಲ್ಲ. ಹಾಗಾಗಿಯೇ ಅಂಬೇಡ್ಕರ್ ಅವರಿಗೆ ಜಾತಿ ಅಸಮಾನತೆಯ ಮೂಲವಾಗಿರುವ ಲಿಂಗ ಅಸಮಾನತೆಯನ್ನು ಮನೆಯೂ ಸೇರಿದಂತೆ ಸಮಾಜದಲ್ಲಿ ತೊಡೆದುಹಾಕುವುದು ಮುಖ್ಯವಾದದ್ದು ಹಾಗೂ ಏಂಗಲ್ಸ್ ಅವರಿಗೆ ಖಾಸಗಿ ಆಸ್ತಿ ಮತ್ತು ಕುಟುಂಬಕ್ಕೂ ಇರುವ ನಂಟನ್ನು ಗುರುತಿಸಲು ಸಾಧ್ಯವಾದದ್ದು. ಸಂವಿಧಾನದ ಪ್ರಜಾಸತ್ತಾತ್ಮಕ, ಸಮಾಜವಾದಿ ಮೌಲ್ಯಗಳನ್ನು ಮೂಲ ಘಟಕಗಳಾದ ವಿವಾಹ ಮತ್ತು ಕುಟುಂಬಗಳಲ್ಲಿ ಜಾರಿಗೆ ತರದ ಹೊರತು ಒಟ್ಟು ಸಮಾಜದಲ್ಲಿ ಬದಲಾವಣೆ ತರಲು ಸಾಧ್ಯವಾಗುವುದಿಲ್ಲ. ಜಾತಿ, ವರ್ಗ, ಲಿಂಗ ಅಸಮಾನತೆಗಳನ್ನು ಮೈಗೂಡಿಸಿಕೊಂಡ ಮನಸ್ಸುಗಳು ಕಾನೂನು ಸಮರ್ಥಿಸುವ ಸಮಾನತೆಯನ್ನು ಸುಲಭವಾಗಿ ಒಪ್ಪುವುದಿಲ್ಲ. ಪ್ರಜ್ಞಾಪೂರ್ವಕವಾದ ಪ್ರಯತ್ನಗಳಾದಾಗ ಮಾತ್ರವೇ ಸಮಾನತೆ ಎಂಬುದು ನೈತಿಕ ಮೌಲ್ಯವಾಗಲು ಸಾಧ್ಯ. ಈ ನಿಟ್ಟಿನಲ್ಲಿಯೇ ಬಾಬಾಸಾಹೇಬರು ಅಮಾನವೀಯ ಸಾಮಾಜಿಕ ಮೌಲ್ಯಗಳನ್ನು ಎದುರಿಸಲು ಸಂವಿಧಾನಾತ್ಮಕ ನೈತಿಕತೆಯ ಕುರಿತು ಪ್ರಸ್ತಾಪ ಮಾಡಿರುವುದು.

*(ಈ ಲೇಖನದಲ್ಲಿ ಬರುವ ಮಹಿಳಾ ಚಳುವಳಿಗಾರರ ಐತಿಹಾಸಿಕ ಆಕರಗಳನ್ನು ಊರ್ಮಿಳಾ ಪವಾರ ಹಾಗೂ ಮೀನಾಕ್ಷಿ ಮೂನ್ ಅವರ ವೀ ಆಲ್ಸೋ ಮೇಡ್ ಹಿಸ್ಟರಿ ಕೃತಿಯಿಂದ ಪಡೆಯಲಾಗಿದೆ.)*

**ದು. ಸರಸ್ವತಿ**
ಮಹಿಳಾ ಅಧ್ಯಯನ ವಿಭಾಗ, ಜ್ಞಾನಶಕ್ತಿ ಕ್ಯಾಂಪಸ್, ಅಥಣಿ ರಸ್ತೆ, ತೊರವಿ
ವಿಜಯಪುರ – ೫೮೬ ೧೦೮

ನಾನು ಓದಿದ ಪುಸ್ತಕ

# ಕರ್ನಾಟಕದ ಸಮಗ್ರ ದಲಿತ ಚರಿತ್ರೆ ಸಕಾಲಿಕ ಅಧ್ಯಯನ




ದಲಿತರ ಬದುಕು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿರುವ ವಿಚಾರವನ್ನು ಹಲವಾರು ಲೇಖಕರು ಚರ್ಚಿಸಿದ್ದಾರೆ. ಡಾ॥ ಸರಜೂ ಕಾಟ್ಕರ್ ಅವರು ಕರ್ನಾಟಕದ ಬಹುತೇಕ ಎಲ್ಲ ಭಾಗಗಳ ದಲಿತ ಕಾವ್ಯದ ಪರಿಚಯವನ್ನು ಕಾಟ್ಕರ್ ಮಾಡಿದ್ದಾರೆ. ಈ ಮಾಹಿತಿಯು ದಲಿತ ಸಾಹಿತ್ಯ, ವಿಶೇಷವಾಗಿ ಕಾವ್ಯದ ಮೂಲಕ ದಲಿತರ ನೋವುಗಳು ಪ್ರಕಟಗೊಂಡಿರುವ ವಿಧಾನವನ್ನು ವಿಸ್ತೃತವಾಗಿ ವಿವರಿಸುತ್ತದೆ. ದಲಿತರನ್ನು ಕುರಿತಾದ ಕಥೆಗಳಂತೂ ಬದುಕಿನ ವಾಸ್ತವ ಸತ್ಯವನ್ನು ಕಲಾತ್ಮಕವಾಗಿ ಮಾತ್ರವಲ್ಲದೆ, ನಿರ್ಭಿಡೆಯಿಂದ ಓದುಗರ ಮನಸ್ಸಿಗೆ ತಲುಪಿಸುತ್ತವೆ.

ಲೇಖಕರು : **ಡಾ॥ ಎನ್. ಚಿನ್ನಸ್ವಾಮಿ ಸೋಸಲೆ**

ಪುಟಗಳು : ೯೦೦ ಬೆಲೆ : ರೂ. ೮೯೦/-

ಪ್ರಕಾಶಕರು : **ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ

ಬೆಂಗಳೂರು - ೫೬೦ ೦೦೧

ಕನ್ನಡದಲ್ಲಿ ದಲಿತ ಸಂವೇದನೆಯ ಬರಹಗಳೇ ಕಡಿಮೆ. ಸರ್ಕಾರ ವಾಡಿಕೆಯಂತೆ ನಡೆಸುವ ಜನಗಣತಿಯ ಅಂಕಿ-ಅಂಶಗಳಲ್ಲಿ ಅನಿವಾರ್ಯ ವೆಂಬಂತೆ ದಲಿತರ ಬಗ್ಗೆ ಮಾಹಿತಿ ಇರುತ್ತದೆ. ಸೃಜನಾತ್ಮಕ ಕೃತಿಗಳಲ್ಲಿ ದಲಿತರ ಬದುಕಿನ ಎಳೆಗಳನ್ನು ಗುರುತಿಸಬಹುದಷ್ಟೆ. ಚರಿತ್ರೆಯ ರೂಪದಲ್ಲಿ ಗುರುತಿಸಲ್ಪಡುವ ಅವಕಾಶಗಳಿರಲಿಲ್ಲ. ಈಗ ಪರಿಸ್ಥಿತಿ ಬದಲಾಗಿದೆ. ದಲಿತರ ಚರಿತ್ರೆಯನ್ನು ಸಮಗ್ರವಾಗಿ ದಾಖಲಿಸುವ ಅವಕಾಶಗಳು ದೊರೆತಿವೆ. ದೊರೆತ ಅವಕಾಶಗಳನ್ನು ಕೆಲವರು ಸದುಪಯೋಗಪಡಿಸಿಕೊಂಡು ದಲಿತರ ಬಹಿರಂಗ ಮತ್ತು ಅಂತರಂಗಗಳ ಬದುಕನ್ನು ದಾಖಲಿಸುತ್ತಿದ್ದಾರೆ. ಇದು ಒಳ್ಳೆಯ ಸೂಚನೆ.

ಕನ್ನಡದಲ್ಲಿ ದಲಿತ ಸಂವೇದನೆಯ ಬರಹಗಳು ಕಡಿಮೆ. ಅಂಬೇಡ್ಕರ್ ಅವರ ಸಮಗ್ರ ಕೃತಿಗಳು ಮತ್ತು ಅವರನ್ನು ಕುರಿತ ಕೆಲವು ಕೃತಿಗಳ ಜೊತೆಗೆ ಸಿದ್ಧಲಿಂಗಯ್ಯ, ಮ. ನ. ಜವರಯ್ಯ, ಅರವಿಂದ ಮಾಲಗತ್ತಿ, ಎಲ್. ಹನುಮಂತಯ್ಯ, ಬಿ. ಕೃಷ್ಣಪ್ಪ, ಕೆ. ಆರ್. ದುರ್ಗಾದಾಸ್, ಮೂಡ್ನಾಕೂಡು ಚಿನ್ನಸ್ವಾಮಿ, ಪುರುಷೋತ್ತಮ ಬಿಳಿಮಲೆ, ಲಕ್ಷ್ಮೀಪತಿ ಕೋಲಾರ, ಕಾಳೇಗೌಡ ನಾಗವಾರ, ಬಂಜಗೆರೆ ಜಯಪ್ರಕಾಶ್, ಸರಜೂ ಕಾಟ್ಕರ್, ದೇವಯ್ಯ ಹರವೆ, ದೇವನೂರ ಮಹಾದೇವ ಮತ್ತು ಜೊತೆಗೆ ಬರಗೂರು ರಾಮಚಂದ್ರಪ್ಪ ಮುಂತಾದ ಸಮಕಾಲೀನ ಲೇಖಕರ ಮೂಲಕ ದಲಿತರ ಅಂತರಂಗದ ನೋವುಗಳು ಅನಾವರಣಗೊಂಡಿವೆ. ದಲಿತರ ಬಗೆಗಿನ ವಿಚಾರ ಸಂಕಿರಣಗಳಲ್ಲಿ ಹತ್ತು ಹಲವು ಮಹತ್ವದ ವಿಚಾರಗಳ ಚರ್ಚೆಯಾಗಿದೆ. ಸರ್ಕಾರಗಳೂ ದಲಿತರ ಸಲುವಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಇಷ್ಟಾದರೂ ಅವರ ಬವಣೆಗಳು ಉಳಿದಿವೆ. ನಗರವಾಸಿ ದಲಿತರ ಕಷ್ಟಗಳು ಕಡಿಮೆ. ಗ್ರಾಮೀಣ ದಲಿತರ ಬದುಕು ಇಂದಿಗೂ ಅಸಹನೀಯ. ಇದಕ್ಕೆ ಕಾರಣಗಳು ತಿಳಿದರೆ ಪರಿಹಾರ ದೊರೆಯಬಹುದೆ ಎಂಬ ಪ್ರಶ್ನೆಗೆ ಸಕಾರಾತ್ಮಕ ಉತ್ತರವನ್ನು ನೀಡಲಾಗುವುದಿಲ್ಲ. ದಲಿತರ ಜೀವನ ಸುಧಾರಣೆಗೆ ಕಳೆದ ಶತಮಾನದ ಆರಂಭದ ದಶಕದಿಂದ ನಿರಂತರ ಪ್ರಯತ್ನಗಳು ನಡೆದಿದ್ದರೂ, ಅವರ ಜೀವನ ಪೂರ್ಣ ಸುಧಾರಣೆಯಾಗಿಲ್ಲ.

ಇತಿಹಾಸದಲ್ಲಿ ಘಟಿಸಿರುವುದೆಲ್ಲ ಸರಿ ಎಂಬ ಭ್ರಮೆ ಇತಿಹಾಸಕಾರನಿಗೆ ಇರುವುದಿಲ್ಲ. ಕಳೆದ ಕಾಲ ಮತ್ತು ಮುಂದಿನ ಕಾಲಗಳಿಗೆ ಸೇತುವೆಯಾಗುವುದು ವರ್ತಮಾನ; ವರ್ತಮಾನದಲ್ಲಿ ಇತಿಹಾಸವನ್ನು ತಿಳಿಯುವ ಮತ್ತು ತಿಳಿಸುವ ಕೆಲಸವನ್ನು ಪ್ರಜ್ಞಾವಂತರೆಲ್ಲರೂ ಪ್ರಾಮಾಣಿಕವಾಗಿ ಮಾಡಬೇಕು. ಆಗ ಯಾರೂ ದಾರಿ ತಪ್ಪುವುದಿಲ್ಲ. ಇದು ನಿರೀಕ್ಷೆ. ಈ ನಿರೀಕ್ಷೆಗೆ ತಕ್ಕಂತೆ ಕರ್ನಾಟಕದ ದಲಿತರ ಇತಿಹಾಸವನ್ನು ಡಾ॥ ಚಿನ್ನಸ್ವಾಮಿ ಸೋಸಲೆ ಯಶಸ್ವಿಯಾಗಿ ಕಟ್ಟಿಕೊಟ್ಟಿದ್ದಾರೆ.

ಸಮಗ್ರ ಎಂದಾಗ ಇಡಿಯಾಗಿ ಕರ್ನಾಟಕದ ಜೊತೆಗೆ ಅದಕ್ಕೆ ಹೊಂದಿಕೊಂಡ ನೆರೆ ರಾಜ್ಯಗಳ ವಿಷಯವೂ ಪ್ರಸ್ತಾಪಗೊಳ್ಳುವುದು ಅವಶ್ಯಕ. ಅದನ್ನು ಚಿನ್ನಸ್ವಾಮಿ ಸೋಸಲೆ ಪ್ರಾಮಾಣಿಕವಾಗಿ ಮಾಡಿದ್ದಾರೆ. ಎಂಟು ಭಾಗಗಳಲ್ಲಿ ದಲಿತರ ಚರಿತ್ರೆಯನ್ನು ಸಮಗ್ರವಾಗಿ ದಾಖಲಿಸಿದ್ದಾರೆ.

ಡಾ॥ ಸೋಸಲೆ ತಮ್ಮ ಕೃತಿ ರಚನೆಗೆ ಲಭ್ಯವಿರುವ ಬಹುತೇಕ ಎಲ್ಲ ಆಕರಗಳನ್ನೂ ಅಧ್ಯಯನ ಮಾಡಿದ್ದಾರೆ. ಇದು ಸುಲಭದ ಮಾತಲ್ಲ ಎನ್ನುವುದನ್ನು ಸಂಶೋಧನೆಯ ಆಳ ಮತ್ತು ವಿಸ್ತಾರಗಳನ್ನು ಬಲ್ಲವರು ಮಾತ್ರ ಬಲ್ಲರು. ಪತ್ರಾಗಾರ, ಸಂಸತ್ತು, ವಿಧಾನಮಂಡಲ ಇತ್ಯಾದಿ ನೆಲೆಗಳಲ್ಲಿ ನೆಲೆಗೊಂಡಿರುವ ಮತ್ತು ಸಾಮಾನ್ಯವಾಗಿ ಯಾರ ಗಮನವನ್ನೂ ಹೆಚ್ಚಾಗಿ ಸೆಳೆಯದ ದಾಖಲೆಗಳನ್ನು ಆಸಕ್ತಿಯಿಂದ ಮತ್ತು ಪ್ರೀತಿಯಿಂದ ಸಂಗ್ರಹಿಸಿ, ಅಧ್ಯಯನ ಮಾಡಿ ವಿಶ್ಲೇಷಿಸುವ ಕಷ್ಟದ ಕೆಲಸವನ್ನು ಚಿನ್ನಸ್ವಾಮಿ ಸೋಸಲೆ ಶ್ರಮವಹಿಸಿ ಮಾಡಿದ್ದಾರೆ.

ಮೈಸೂರು ಸಂಸ್ಥಾನದ ದಲಿತ ಚರಿತ್ರೆಯನ್ನು ದಾಖಲಿಸುವಾಗ, ನಾಲ್ವಡಿ ಕೃಷ್ಣರಾಜ ಒಡೆಯರ್, ಮಿರ್ಜಾ ಇಸ್ಮಾಯಿಲ್, ಪಂಚಮರ ಗೋಪಾಲಸ್ವಾಮಿ ಅಯ್ಯರ್, ತಲಕಾಡು ರಂಗೇಗೌಡ ಅವರ ದಣಿವರಿಯದ ಕೆಲಸಗಳನ್ನು ವಿವರಿಸಿದ್ದಾರೆ. ೨೦ನೆಯ ಶತಮಾನದ ೨ನೆಯ ದಶಕದಿಂದ ಮೈಸೂರು ಸಂಸ್ಥಾನದ ದಲಿತರ ಬದುಕಿನಲ್ಲಿ ಆದ ಬದಲಾವಣೆಗಳನ್ನು, ವಿಶೇಷವಾಗಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಆದ ಬದಲಾವಣೆಗಳನ್ನು ಪರಿಣಾಮಕಾರಿಯಾಗಿ ವಿವರಿಸಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಳ್ವಿಕೆಯ ಕಾಲದಲ್ಲಿ 'ಶಾಲಾ ಪ್ರವೇಶ ಎಲ್ಲರ ಹಕ್ಕು' ಎಂದು ಹೊರಡಿಸಿದ್ದ ಆಜ್ಞೆಯ ಉಲ್ಲೇಖವಿದೆ. ೧೯೧೮ರ ನವೆಂಬರ್ ೧೯ರಂದು ಮೈಸೂರು ಸರ್ಕಾರ ಗೆಜೆಟ್ ಪ್ರಕಟಣೆಯ ಮೂಲಕ 'ಅನಾದಿಕಾಲದಿಂದಲೂ ವಿದ್ಯೆ ಎಂಬುವುದು ಅಸ್ಪೃಶ್ಯರ ಬಳಿಗೆ ಬಂದಿರಲಿಲ್ಲ. ಅವರು ತಾವಾಗಿಯೇ ವಿದ್ಯೆ ಕಲಿಯಲು ಹಿಂದೂ ಹಾಗೂ ಭಾರತೀಯ ಸಮಾಜಗಳು ಸಮ್ಮತಿಯನ್ನು ನೀಡಿರಲಿಲ್ಲ. ಈ ಸಮಾಜಗಳನ್ನು ಎದುರುಹಾಕಿಕೊಂಡು ಜೀವಿಸುವಂಥ ಧೈರ್ಯವಾಗಲೀ, ಶಕ್ತಿಯಾಗಲೀ ಅಸ್ಪೃಶ್ಯರಿಗೆ ಇರಲಿಲ್ಲ. ಈ ಪರಿಸ್ಥಿತಿಯನ್ನು ನಿವಾರಿಸಲು ಮೈಸೂರು ಸರ್ಕಾರವು ೧೯ನೇ ಶತಮಾನದ ಕೊನೆಯಲ್ಲಿ ಅಸ್ಪೃಶ್ಯರಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ತೆರೆಯಿತು' ಎಂದು ತಿಳಿಸಿದ್ದಾರೆ. ಇದು ಮೈಸೂರು ಸಂಸ್ಥಾನ ತೆಗೆದುಕೊಂಡ ಮಹತ್ವದ ನಿರ್ಧಾರ ಮತ್ತು ಈ ನಿರ್ಧಾರವು ಸಂಸ್ಥಾನದ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ಸಂಸ್ಥಾನ ಕೈಗೊಂಡ ಈ ನಿರ್ಧಾರದ ಹಿಂದೆ ವಿವೇಕಾನಂದರ ಪ್ರಭಾವವೂ ಇದ್ದುದನ್ನು ಸೋಸಲೆ ಗಮನಿಸಿದ್ದಾರೆ.

ಪಂಚಮರ ಗೋಪಾಲಸ್ವಾಮಿ ಎಂದೇ ಹೆಸರು ಪಡೆದಿದ್ದ ಆರ್. ಗೋಪಾಲಸ್ವಾಮಿ ಅಯ್ಯರ್ ಅವರಿಗೆ ಅಸ್ಪೃಶ್ಯರ ವಿಚಾರದಲ್ಲಿದ್ದ ಕಳಕಳಿ

**ಡಾ॥ ಎಚ್. ಎಸ್. ಗೋಪಾಲ ರಾವ್**

ಮತ್ತು ಅವರ ಅಭಿವೃದ್ಧಿಗಾಗಿ ಶ್ರಮಿಸಿದ ಪರಿಯನ್ನು ಸೋಸಲೆಯವರು ಜಿ. ಗೋಪಾಲ್ ಮತ್ತಿತರ ಹಿರಿಯರ ನೆನಪುಗಳ ಮೂಲಕ ಪರಿಚಯಿಸಿದ್ದಾರೆ. ಕೆಲವು ಹಿರಿಯರ ಪ್ರಕಾರ, ಡಾ॥ ಬಿ. ಆರ್. ಅಂಬೇಡ್ಕರ್ ಅವರು ಸಮಗ್ರ ಭಾರತದಲ್ಲಿ ದಲಿತರ ಪರವಾಗಿ ಕಾರ್ಯ ನಿರ್ವಹಿಸಿದರೆ, ಗೋಪಾಲಸ್ವಾಮಿ ಅಯ್ಯರ್ ಅವರು ಮೈಸೂರು ಸಂಸ್ಥಾನದಲ್ಲಿ ದಲಿತೋದ್ಧಾರದ ಕಾರ್ಯಗಳನ್ನು ನಿರ್ವಹಿಸಿದರು.




ಸೋಸಲೆಯವರು ಅಂಕಿ–ಸಂಖ್ಯೆಗಳ ಮಾಹಿತಿಯನ್ನು ಪಡೆದು, ೧೯೨೧–೨೨ರ ಹೊತ್ತಿಗೆ ಮೈಸೂರು ಸಂಸ್ಥಾನದಲ್ಲಿ ಸರ್ಕಾರವೇ ನಡೆಸುತ್ತಿದ್ದ ಲಂಬಾಣಿ ಮತ್ತು ಗಿರಿಜನ ವಸತಿಶಾಲೆಗಳ ಬಗ್ಗೆ ದಾಖಲಿಸಿದ್ದಾರೆ. ಇದು ಆ ಕಾಲಕ್ಕೇ ದಲಿತರ ಶಿಕ್ಷಣ ಕುರಿತಂತೆ ಆಳುವ ವರ್ಗಕ್ಕಿದ್ದ ಕಾಳಜಿಯನ್ನು ಸ್ಪಷ್ಟಪಡಿಸುತ್ತದೆ.

ಬೇರುಬಿಟ್ಟಿದ್ದ ಜಾತಿವ್ಯವಸ್ಥೆಯ ವಿರುದ್ಧ ೧೨ನೆಯ ಶತಮಾನದಲ್ಲೇ ನಡೆದಿದ್ದ ವಚನ ಚಳವಳಿಯ ಪರಿಚಯ ಮಾಡುವ ಸೋಸಲೆಯವರು ನಂತರದ ಕಾಲಘಟ್ಟದಲ್ಲಿ ಆಗಿರುವ ಸುಧಾರಣೆಗಳನ್ನೂ ಗಮನಿಸಿದ್ದಾರೆ. ದಲಿತರ ಬದುಕಿನಲ್ಲಿ ಸುಧಾರಣೆಯ ವಿವಿಧ ಘಟ್ಟಗಳನ್ನು ಸೋಸಲೆ ಗುರುತಿಸುವುದು ಮಾತ್ರವಲ್ಲ; ವಿಶ್ಲೇಷಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ೧೮೮೧ರಲ್ಲೇ ಅಸ್ತಿತ್ವಕ್ಕೆ ಬಂದಿದ್ದ ಪ್ರಜಾಪ್ರತಿನಿಧಿ ಸಭೆ, ಅದರಲ್ಲಿ ದಲಿತರಿಗೂ ಕಡ್ಡಾಯ ಶಿಕ್ಷಣ, ಅರಮನೆಗೆ ಮತ್ತು ದೇವಾಲಯಗಳಿಗೆ ದಲಿತರ ಪ್ರವೇಶ, ದಲಿತರಿಗೆ ಕುಡಿಯುವ ನೀರಿನ ವ್ಯವಸ್ಥೆ, ಭಿಕ್ಷಾಟನಾ ನಿರ್ಮೂಲನೆ ಇತ್ಯಾದಿ ಹಲವು ವಿಚಾರಗಳಲ್ಲಿ ಆದ ಸುಧಾರಣೆಗಳು ಮತ್ತು ಅವುಗಳ ಪರಿಣಾಮಗಳ ಬಗ್ಗೆ ವಿವರಗಳನ್ನು ನೀಡಿದ್ದಾರೆ. ಶಿಕ್ಷಣ, ಅದರಲ್ಲೂ ದಲಿತರ ಶಿಕ್ಷಣದ ವಿಚಾರದಲ್ಲಿ ನಿರಂತರ ಶ್ರಮಿಸುತ್ತಿದ್ದ ಗೋಪಾಲಸ್ವಾಮಿ ಅಯ್ಯರ್ ಅವರಿಗೆ ದೊರೆತಿದ್ದ ಸರ್ಕಾರದ ಸವಲತ್ತುಗಳ ಸದುಪಯೋಗದ ಬಗ್ಗೆ ಸೋಸಲೆ ಅವರು ನೀಡಿರುವ ವಿವರಗಳು ಹಾಗೂ ದಲಿತರಿಗೆ ಪಾಠ ಮಾಡಲು ಯಾರೂ ಮುಂದೆ ಬರದಿದ್ದ ಹೊತ್ತಿನಲ್ಲಿ ಆ ಜವಾಬ್ದಾರಿಯನ್ನು ಒಪ್ಪಿಕೊಂಡು ಅದನ್ನು ತೃಪ್ತಿಕರವಾಗಿ ನಿರ್ವಹಿಸಿದ ತಲಕಾಡು ರಂಗೇಗೌಡರು, ದಲಿತರಿಗಾಗಿ ವಿದ್ಯಾರ್ಥಿ ನಿಲಯಗಳ ಸ್ಥಾಪನೆ, ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಮೂಲಕ ಶಿಸ್ತಿನ ಪಾಠ ಮತ್ತು ಇವುಗಳ ಪರಿಣಾಮಗಳನ್ನು ಸೋಸಲೆ ತಿಳಿಸಿದ್ದಾರೆ.




ನವಕರ್ನಾಟಕ ಪ್ರಕಟಿಸಿರುವ ಡಾ॥ ಸಿ. ಆರ್. ಚಂದ್ರಶೇಖರ್ ಅವರ 'ಮೇಕ್ ಯುವರ್ ಲೈಫ್ ಮೋರ್ ಎಂಜಾಯೆಬಲ್' ಪುಸ್ತಕವನ್ನು ದಿನಾಂಕ ೧೨–೩–೨೦೧೮ರಂದು ರಾಮನಗರದ ನೆಮ್ಮದಿ ಆಶ್ರಮದಲ್ಲಿ ಡಾ॥ ಮನೋಹರಿ ಶ್ರೀನಿವಾಸ್ ಮತ್ತು ಡಾ॥ ಎಂ. ಶ್ರೀನಿವಾಸ್ (ನಿರ್ದೇಶಕರು, ಸ್ಪಂದನ ನರ್ಸಿಂಗ್ ಹೋಮ್, ಬೆಂಗಳೂರು) ಅನಾವರಣಗೊಳಿಸಿದರು.

ಶಿಕ್ಷಣ ಪಡೆದು ಮಹತ್ವದ ಸಾಧನೆ ಮಾಡಿದ ದಲಿತ ಸಾಧಕರ ಪಟ್ಟಿ ದೊಡ್ಡದೇ ಇದೆ. ಮೊಟ್ಟಮೊದಲ ದಲಿತ ಲೇಖಕರೆಂದು ಪರಿಗಣಿತರಾಗಿರುವ ಸೋಸಲೆ ಸಿದ್ದಪ್ಪ, ಮೈಸೂರು ಸಂಸ್ಥಾನದ ಮೊಟ್ಟಮೊದಲ ಪದವೀಧರ ಎನಿಸಿಕೊಂಡ ಸೋಸಲೆ ಬಿ. ರಾಚಪ್ಪ, ಪ್ರಥಮ ದಲಿತ ಐ.ಎ.ಎಸ್. ಅಧಿಕಾರಿಯಾದ ಆರ್. ಭರಣಯ್ಯ, ಲೋಕಸಭಾ ಸದಸ್ಯರಾಗಿದ್ದ ಸೋಸಲೆ ಎಸ್. ಎಂ. ಸಿದ್ದಯ್ಯ, ಡಿ. ಗೋವಿಂದದಾಸ್, ಮೇಸ್ತ್ರು ಮಾದಯ್ಯ, ಜಿ. ವೆಂಕಟಯ್ಯ, ಮಳವಳ್ಳಿ ಎಂ. ಶಂಕರಯ್ಯ, ಡಾ॥ ಡಿ. ರುದ್ರಯ್ಯ, ಡಾ॥ ಜಿ. ಗೋಪಾಲ್, ಎನ್. ಕೆ. ನಂಜಯ್ಯ, ರಾಜ್ಯಪಾಲರಾಗಿದ್ದ ಬಿ. ರಾಚಯ್ಯ, ಡಿ. ಆರ್. ನಂಜಯ್ಯ, ಡಿ. ವೆಂಕಟಯ್ಯ, ಆರ್. ಚನ್ನಿಗರಾಮಯ್ಯ, ಐ.ಎ.ಎಸ್. ಅಧಿಕಾರಿ ಎಲ್. ಲಿಂಗಯ್ಯ, ಶಿಕ್ಷಣತಜ್ಞ ಎಚ್. ಎಂ. ಗಂಗಾಧರಯ್ಯ, ಎಂ. ಆರ್ಯಮೂರ್ತಿ, ಚಿಕ್ಕಹನುಮಂತಯ್ಯ, ಟಿ. ಹನುಮಯ್ಯ, ಎಂ. ಗೋವಿಂದರಾಜು, ಬಿ. ಜಿ. ಬುದ್ದಣ್ಣ, ದೊಡ್ಡ ಓಬಳಯ್ಯ, ಸಚಿವರಾಗಿದ್ದ ಎನ್. ರಾಚಯ್ಯ, ಪ್ರಥಮ ದಲಿತ ಮುಖ್ಯ ನ್ಯಾಯಾಧೀಶ ಜಸ್ಟೀಸ್ ಕೆ. ಭೀಮಯ್ಯ, ಜಿ. ದುಗ್ಗಪ್ಪ, ಸಿ. ರಾಚಯ್ಯ, ಹೆಚ್. ಆರ್. ತಿಪ್ಪಯ್ಯ, ಡಿ. ಚನ್ನಯ್ಯ, ಸಚಿವರಾಗಿದ್ದ ಕೆ. ಎಚ್. ರಂಗನಾಥ್, ಮುರುಗೇಶನ್, ಎಂ. ಚಿಕ್ಕಲಿಂಗಯ್ಯ, ಜಿ. ಎಸ್. ರಾಮಕೃಷ್ಣಯ್ಯ ಇತ್ಯಾದಿ ಸಾಧಕರು ಮಾತ್ರವಲ್ಲದೆ, ಗೌರಮ್ಮ ಎಂಬ ಸಾಧಕಿಯ ಬಗೆಗೂ ಸೋಸಲೆ ಅವರು ಮಹತ್ವದ ಮಾಹಿತಿಗಳನ್ನು ಸಂಗ್ರಹಿಸಿ, ಪರಿಚಯಿಸಿದ್ದಾರೆ. ಇಂತಹವರ ಸಾಧನೆಗಳು ಎಂತಹವರಿಗಾದರೂ ಮಾರ್ಗದರ್ಶಕವಾಗುತ್ತವೆ.

ಈ ಕೃತಿಯಲ್ಲಿ ದಲಿತರ ವಿಚಾರಗಳೇ ಅಲ್ಲದೆ ಸ್ತ್ರೀಯರಿಗೆ ಶಿಕ್ಷಣ, ದೇವದಾಸಿ ಪದ್ಧತಿ ನಿಷೇಧ, ವೇಶ್ಯಾವೃತ್ತಿ ನಿಷೇಧ, ವಿಧವಾ ವಿವಾಹ ಇತ್ಯಾದಿ ವಿಷಯಗಳ ಸಂಬಂಧವಾಗಿ ಮೈಸೂರು ಸಂಸ್ಥಾನ ತೆಗೆದುಕೊಂಡಿದ್ದ ಸುಧಾರಣಾ ಕ್ರಮಗಳ ಬಗ್ಗೆ ಮಾಹಿತಿಗಳಿವೆ.

ಮಹಾರಾಷ್ಟ್ರದ ದಲಿತ ಚರಿತ್ರೆಯ ವಿವರಣೆಗಳು ವಿವಿಧ ಲೇಖಕರ ಲೇಖನಗಳ ಮೂಲಕ ಅಭಿವ್ಯಕ್ತಗೊಂಡಿವೆ. ಮರಾಠಿ ಭಾಷೆಯಲ್ಲಿರುವ ದಲಿತ ಸಾಹಿತ್ಯವನ್ನು ಸರಜೂ ಕಾಟ್ಕರ್ ಕನ್ನಡದಲ್ಲಿ ಪರಿಚಯಿಸುತ್ತಲೇ ವಿಶ್ಲೇಷಿಸಿದ್ದಾರೆ. ದಲಿತ ಸಂವೇದನೆಯು ಮೊದಲಿನಿಂದಲೂ ಮರಾಠಿ ಭಾಷೆಯಲ್ಲಿ ವಿಶಿಷ್ಟವಾಗಿದೆ. ಸಮಾಜಮುಖಿಯಾಗಿದ್ದ ಮುಂಬಯಿ ಕರ್ನಾಟಕದ ಇಂಗಳೆ ದೇವರಾಯರು ನಾಟಕಗಳ ಮೂಲಕ ಮತ್ತು ಅವರ ಸಮಕಾಲೀನರಾದ ಕಕ್ಕಯ್ಯ ಪೋಳರು ಕಥೆ, ಕಾದಂಬರಿಗಳ ಮೂಲಕ ಮತ್ತು ಕುಮಾರ ಕಕ್ಕಯ್ಯ ಅವರು ವಚನಗಳ ಮೂಲಕ ಸಮಕಾಲೀನ ದಲಿತರ ವಿಚಾರಗಳನ್ನು ತಿಳಿಸಿದ್ದಾರೆ. ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಅಸ್ಪೃಶ್ಯತಾ ನಿವಾರಣೆಗೆ ಒತ್ತುಕೊಟ್ಟು ಸಮಾಜ ಸುಧಾರಣೆಗಾಗಿ ಶ್ರಮಿಸಿದ ಪ್ರಮುಖರೆಂದರೆ ವಿಠಲ್ ರಾಮ್‌ಜಿ ಶಿಂಧೆ ಮತ್ತು ಕಾಕಾ ಕಾರಖಾನೀಸರು.

ಕರಾವಳಿ ಕರ್ನಾಟಕದಲ್ಲಿ ದಲಿತರ ಪರವಾದ ಬಹುತೇಕ ಎಲ್ಲ ಕೆಲಸಗಳಲ್ಲೂ ಕೇಳಿಬರುವ ಹೆಸರು ಕುದ್ಮುಲ್ ರಂಗರಾಯರದು. ಮೊದಲಿಗೆ ಅಧ್ಯಾಪಕ ವೃತ್ತಿ, ನಂತರ ವಕೀಲಿ ವೃತ್ತಿ ನಡೆಸುತ್ತಾ, ಬ್ರಹ್ಮಸಮಾಜದ ಸಂಪರ್ಕದಿಂದ ಅಸ್ಪೃಶ್ಯತೆ ಮತ್ತು ಜಾತೀಯತೆಯ ವಿವಿಧ ಸ್ತರಗಳ ಅಸಮಾನತೆಯ ವಿರುದ್ಧ ಸಾತ್ವಿಕ

ಹೋರಾಟ ನಡೆಸಿದ ರಂಗರಾಯರು, ಒಂದು ವಿಚಿತ್ರ ಸನ್ನಿವೇಶದಲ್ಲಿ ಅಸ್ಪೃಶ್ಯರಿಗಾಗಿ ಶಿಕ್ಷಣ ಕೊಡಿಸುವ ವ್ಯವಸ್ಥೆಗೆ ಒಪ್ಪಿಕೊಂಡರು. ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸಂಸ್ಥೆಯ ಮೂಲಕ ಅಸ್ಪೃಶ್ಯರ ಏಳಿಗೆಗಾಗಿ ನಿರಂತರ ಶ್ರಮಿಸಿ, ಸಫಲರಾದರು. ದಲಿತರ ವಿದ್ಯಾಭ್ಯಾಸ ಮತ್ತು ಜೀತಪದ್ಧತಿಯ ನಿವಾರಣೆಗೆ, ಜೀತಪದ್ಧತಿಯಿಂದ ಬಿಡುಗಡೆ ಪಡೆದ ದಲಿತರಿಗೆ ಕೃಷಿಭೂಮಿ ದೊರಕಿಸಿಕೊಟ್ಟು ಅವರ ಜೀವನಕ್ಕೂ ದಾರಿ ಮಾಡಿದ ರಂಗರಾಯರು ಆರ್ಥಿಕ ಮುಗ್ಗಟ್ಟು, ಸವರ್ಣೀಯರಿಂದ ತಮ್ಮ ಮಕ್ಕಳ ಮೇಲಾಗುತ್ತಿದ್ದ ಕಿರುಕುಳ, ತಮ್ಮವರಿಂದಲೇ ಪರೋಕ್ಷ ಬಹಿಷ್ಕಾರ ಇತ್ಯಾದಿ ಕಾರಣಗಳಿಂದ ತೊಂದರೆಗಳನ್ನು ಅನುಭವಿಸಿದರೂ, ಮಹಾತ್ಮಾ ಗಾಂಧಿಯವರಿಂದ 'ಗುರುಪಟ್ಟ' ಪಡೆದು, ದಲಿತೋದ್ಧಾರ ಮತ್ತು ಮಹಿಳೆಯರ ಉನ್ನತಿಗಾಗಿ ಶ್ರಮಿಸಿದ ಸಾಹಸಿಯಾಗಿದ್ದಾರೆ. ಕರಾವಳಿ ಕರ್ನಾಟಕ ಪ್ರದೇಶದಲ್ಲಿ ಕೇರಳದ ನಾರಾಯಣ ಗುರುಗಳ ಪ್ರೇರಣೆ ಮತ್ತು ಪ್ರಭಾವಗಳೂ ದಲಿತರ ಅಭಿವೃದ್ಧಿಗೆ ಕಾರಣವಾಗಿವೆ.



ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ದಲಿತರ ಶಿಕ್ಷಣಕ್ಕೆ ಶ್ರಮಿಸಿದ ಬಿ. ಶ್ಯಾಮಸುಂದರ್ ಅಸ್ಪೃಶ್ಯರಿಗೆ ಭೂ ಒಡೆತನವನ್ನೂ ದೊರಕಿಸಿ ಕೊಟ್ಟರು. ಮೈಸೂರು ವಿಧಾನಸಭಾ ಸದಸ್ಯರಾಗಿದ್ದ ಶ್ಯಾಮಸುಂದರ್ ಗುಲಾಮಿಕೆಯನ್ನು ಸಹಿಸುತ್ತಿರಲಿಲ್ಲ. ದಲಿತರೇ ಭಾರತದ ಮೂಲನಿವಾಸಿಗಳು ಎಂಬ ದೃಢನಂಬಿಕೆಯ ಶ್ಯಾಮಸುಂದರ್ ದಲಿತರು ಸ್ವಾಭಿಮಾನಿಗಳಾಗಬೇಕು ಎಂದು ಹಂಬಲಿಸುತ್ತಿದ್ದರು. ಅದರ ಈಡೇರಿಕೆಗಾಗಿ ಅವರು ಭಾರತೀಯ ಭೀಮಸೇನೆಯನ್ನು ಸ್ಥಾಪಿಸಿದ್ದರು. ಕ್ರಾಂತಿಕಾರಿ ಆಲೋಚನೆಗಳ ಶ್ಯಾಮಸುಂದರ್ ಹಲವು ಕೃತಿಗಳ ಮೂಲಕ ಸಾಹಿತಿಯ ಸ್ಥಾನವನ್ನೂ ಪಡೆದಿದ್ದಾರೆ. ದಲಿತ ಮತ್ತು ಮುಸ್ಲಿಂ ಐಕ್ಯತೆಗಾಗಿ ಶ್ರಮಿಸಿದ ಶ್ಯಾಮಸುಂದರ್ ಉತ್ತಮ ಸಂಸದೀಯಪಟುವಾಗಿದ್ದರು. ಈ ಭಾಗದಲ್ಲಿ ಗೋಪಿನಾಥ ಮಹಾರಾಜರ ಸಮಾಜಮುಖಿ ದಲಿತ ಸಂವೇದನೆಯೂ ಸೇರಿದೆ.

ಲೇಖಕರು ದಲಿತ ಸಂಸ್ಕೃತಿ ಕುರಿತ ಚಾರಿತ್ರಿಕ ವಿಶ್ಲೇಷಣೆಗೆ ಅನುವು, ಮಾಡಿಕೊಂಡಿರುವುದು ವಿಶೇಷವಾಗಿ ಗಮನ ಸೆಳೆಯುತ್ತದೆ. ಮತಾಂತರ ದಲಿತರಿಗೆ ಅವಶ್ಯಕವೆ ?– ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನ ಮಾಡಿರುವ ಸೋಸಲೆ, ಮತಾಂತರದ ವಿವಿಧ ಸ್ವರೂಪಗಳನ್ನು ಕುರಿತು ಚರ್ಚಿಸಿದ್ದಾರೆ. ಯಾರದೇ ಬದುಕು ಚೆನ್ನಾಗಲು ಹಲವು ಶಕ್ತಿಗಳು ಬೇಕು. ಆ ಶಕ್ತಿಗಳಿಲ್ಲದೆ ದಲಿತರು ದಬ್ಬಾಳಿಕೆಯಿಂದ ಬಿಡುಗಡೆ ಪಡೆಯಲು ಸಾಧ್ಯವಿಲ್ಲ ಎಂದು ಸೋಸಲೆ ಪ್ರತಿಪಾದಿಸಿದ್ದಾರೆ. ಮತವೂ ಒಂದು ಶಕ್ತಿ ಎನಿಸಿಕೊಂಡಾಗ ಅದರ ಆಯ್ಕೆಯಲ್ಲಿ ಶಕ್ತಿವಂತ ಮತ ಯಾವುದು ಎಂಬ ಜಿಜ್ಞಾಸೆ ಎದುರಾಗುತ್ತದೆ. ಸೋಸಲೆ ಅವರ ಪ್ರಕಾರ ದಲಿತರ ಬಗ್ಗೆ ತಿಳಿಯಲು ಜನಾಂಗೀಯ ಅಧ್ಯಯನದ ಅವಶ್ಯಕತೆಯೂ ಇದೆ. ಮತಾಂತರಗೊಳ್ಳುವುದು ರಾಜಕೀಯ ಅಥವಾ ಸಾಂಸ್ಕೃತಿಕ ಅಸ್ಮಿತೆಗಾಗಿ; ಭಾರತದಲ್ಲಿರುವ ಎರಡು ಸಂವಿಧಾನಗಳ ಬಗ್ಗೆ ಸೋಸಲೆ ಗಮನ ಸೆಳೆಯುತ್ತಾರೆ. ಒಂದು ಅಂಬೇಡ್ಕರ್ ಅವರು ಸಿದ್ಧಪಡಿಸದ ಲಿಖಿತ ಸಂವಿಧಾನವಾದರೆ ಮತ್ತೊಂದು ಭಾರತೀಯ ಸಮಾಜದ ಅಲಿಖಿತ ಸಂವಿಧಾನ.

ಈ ಕೃತಿಯಲ್ಲಿ ಕರ್ನಾಟಕದಲ್ಲಿ ದಲಿತರ ಮತಾಂತರ ಕುರಿತು ವಿಪುಲವಾದ ಚರ್ಚೆಗಳ ಮಂಥನವಾಗಿದೆ. ಬುದ್ಧ, ಬಸವ ಮತ್ತು ಅಂಬೇಡ್ಕರ್ ಅವರು ದಲಿತರ ಸಮಸ್ಯೆಗಳ ನಿವಾರಣೆಗೆ ಎಷ್ಟು ಪ್ರಸ್ತುತ ಎಂಬ ವಿಚಾರದಲ್ಲೂ ವಿಚಾರಮಂಥನ ಆಗಿದೆ. ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ದಲಿತ ಸಂವೇದನೆ ಹೇಗೆ ಅಭಿವ್ಯಕ್ತಿಗೊಂಡಿದೆ ಎಂದೂ ಚರ್ಚೆ ಆಗಿದೆ. ದಲಿತರು ಮತ್ತು ಮಹಿಳೆಯರಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಸಂಭವಿಸಿರುವ ದೌರ್ಜನ್ಯ ಪ್ರಕರಣಗಳ ವಿವರಗಳು, ದಲಿತರು ಮತ್ತು ಕೆಲವು ಅಮಾನವೀಯ ಆಚರಣೆಗಳು ಇತ್ಯಾದಿ ವಿಚಾರಗಳು ದಾಖಲುಗೊಂಡಿರುವ ಈ ಕೃತಿಯು ಕರ್ನಾಟಕದ ದಲಿತ ಚರಿತ್ರೆಯ ಸಮಗ್ರ ಚಿತ್ರಣವನ್ನು ನೀಡುತ್ತದೆ. ದಲಿತರಿಗೆ ಸಂಬಂಧಿಸಿದ ಹಲವಾರು ಗಲಭೆಗಳು, ಜ್ಯೋತಿಬಾ ಫುಲೆ, ಅವರ ಹೆಂಡತಿ ಸಾವಿತ್ರಿಬಾಯಿ ಫುಲೆ ಅವರ ಧೈರ್ಯ ಮತ್ತು ಸಾಹಸಗಳು ಎಂತಹವರನ್ನೂ ಚಿಂತನೆಗೆ ಗುರಿ ಮಾಡುತ್ತವೆ. ಒಂದು ಪ್ರದೇಶದ ಮತ್ತು ಒಂದು ಕಾಲಘಟ್ಟದ ಚರಿತ್ರೆಯನ್ನು, ವಿಶೇಷವಾಗಿ ದಲಿತ ಚರಿತ್ರೆಯನ್ನು ತಿಳಿಯಲು ಈ ಕೃತಿಯು ಪ್ರಮುಖ ಆಕರ ಗ್ರಂಥವಾಗುವ ಗುಣಗಳನ್ನು ಪಡೆದಿದೆ.

ದಲಿತರ ಬದುಕು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿರುವ ವಿಚಾರವನ್ನು ಹಲವಾರು ಲೇಖಕರು ಚರ್ಚಿಸಿದ್ದಾರೆ. ಡಾ॥ ಸರಜೂ ಕಾಟ್ಕರ್ ಅವರು ಕರ್ನಾಟಕದ ಬಹುತೇಕ ಎಲ್ಲ ಭಾಗಗಳ ದಲಿತ ಕಾವ್ಯದ ಪರಿಚಯವನ್ನು ಕಾಟ್ಕರ್ ಮಾಡಿದ್ದಾರೆ. ಈ ಮಾಹಿತಿಯು ದಲಿತ ಸಾಹಿತ್ಯ, ವಿಶೇಷವಾಗಿ ಕಾವ್ಯದ ಮೂಲಕ ದಲಿತರ ನೋವುಗಳು ಪ್ರಕಟಗೊಂಡಿರುವ ವಿಧಾನವನ್ನು ವಿಸ್ತೃತವಾಗಿ ವಿವರಿಸುತ್ತದೆ. ದಲಿತರನ್ನು ಕುರಿತಾದ ಕಥೆಗಳಂತೂ ಬದುಕಿನ ವಾಸ್ತವ ಸತ್ಯವನ್ನು ಕಲಾತ್ಮಕವಾಗಿ ಮಾತ್ರವಲ್ಲದೆ, ನಿರ್ಭಿಡೆಯಿಂದ ಓದುಗರ ಮನಸ್ಸಿಗೆ ತಲುಪಿಸುತ್ತವೆ. ದೇವನೂರು ಮಹಾದೇವ, ಚೆನ್ನಣ್ಣ ವಾಲೀಕಾರ, ಕಾ. ತ. ಚಿಕ್ಕಣ್ಣ, ಮೊಗಳ್ಳಿ ಗಣೇಶ ಮತ್ತು ಹಲವು ಲೇಖಕಿಯರ ಕಥೆಗಳಲ್ಲಿ ದಲಿತ ಜೀವನ ಚಿತ್ರಿತವಾಗಿರುವುದನ್ನು ವಿಶ್ಲೇಷಿಸಿ, ಅದೂ ದಲಿತ ಚರಿತ್ರೆಯ ಭಾಗ ಎನ್ನುವುದನ್ನು ಮನಗಾಣಿಸಿದ್ದಾರೆ. ಇದರ ಜೊತೆಗೇ ದೇವನೂರು ಮಹಾದೇವ, ಮುಳ್ಳೂರು ನಾಗರಾಜ, ಅರವಿಂದ ಮಾಲಗತ್ತಿ, ಮ. ನ. ಜವರಯ್ಯ, ಬರಗೂರು ರಾಮಚಂದ್ರಪ್ಪ, ಬಿ. ಟಿ. ಲಲಿತಾನಾಯಕ ಮುಂತಾದವರು ತಮ್ಮ ಕಾದಂಬರಿಗಳ ಮೂಲಕ ಅನಾವರಣ ಮಾಡಿರುವ ದಲಿತರ ಬದುಕೂ ಸಹ ಚರಿತ್ರೆಯ ಭಾಗವೇ ಆಗುತ್ತದೆ. ಮರಾಠಿ ಭಾಷೆಯಂತೆ ಕನ್ನಡದಲ್ಲೂ ಕೆಲವು ದಲಿತರ ಆತ್ಮಕಥೆಗಳು ಪ್ರಕಟವಾಗಿವೆ ಮತ್ತು ರಂಗಭೂಮಿಯಲ್ಲೂ ದಲಿತರಿಗೆ ಸಂಬಂಧಿಸಿದ ಕೆಲವು ನಾಟಕಗಳು ಯಶಸ್ವಿಯಾಗಿರುವುದು ಮಾತ್ರವಲ್ಲದೆ, ದಲಿತರ ಬದುಕನ್ನು ಜನರಿಗೆ ಅರ್ಥಮಾಡಿಸುವಲ್ಲಿ ಸಫಲವಾಗಿವೆ. ಇವೆಲ್ಲವೂ ದಲಿತ ಚರಿತ್ರೆಯ ಭಾಗವೇ ಆಗಿವೆ.

ಕರ್ನಾಟಕಕ್ಕೆ ಹೊಂದಿಕೊಂಡಿರುವ ಕೇರಳ, ತಮಿಳುನಾಡು, ಆಂಧ್ರ ಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿನ ದಲಿತರ ಬದುಕನ್ನೂ ಸೋಸಲೆ ಅಧ್ಯಯನಕ್ಕೆ ಸೇರಿಸಿಕೊಂಡಿದ್ದಾರೆ. ಕೇರಳದ ಅಯ್ಯನ್ ಕಾಳಿ, ತಮಿಳುನಾಡಿನ ಬೌದ್ಧ ಅಯೋತಿ ದಾಸ್, ಮಹಾರಾಷ್ಟ್ರದ ಸತ್ಯಶೋಧಕ ಸಮಾಜದ ಜ್ಯೋತಿಬಾ ಫುಲೆ ಮತ್ತು ಸಾವಿತ್ರಿಬಾಯಿ ಫುಲೆ, ಶಾಹು ಮಹಾರಾಜ, ಆಂಧ್ರಪ್ರದೇಶದ ಮಾದಿಗ–ದಂಡೋರ ಚಳುವಳಿ ಇತ್ಯಾದಿಗಳ ವಿವರಗಳೂ ಈ ಕೃತಿಯಲ್ಲಿ ದಾಖಲಾಗಿ ಕೃತಿಯು ಇಡೀ ದಕ್ಷಿಣ ಭಾರತದ ದಲಿತರ ಚರಿತ್ರೆಯನ್ನು ಕಟ್ಟಿಕೊಟ್ಟಿದೆ.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ.ವೈ.ಡಿ. ೨ನೇ ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩

ಮಹಾರಾಷ್ಟ್ರದ ಮಹಾಡ್‌ನಲ್ಲಿ ಡಾ॥ ಅಂಬೇಡ್ಕರ್ ಅವರು ಸ್ಥಾಪಿಸಿದ ಪೀಪಲ್ಸ್ ಎಜುಕೇಷನ್ ಸೊಸೈಟಿಯು ನಡೆಸುತ್ತಿರುವ ಪದವಿ ಕಾಲೇಜಿನಲ್ಲಿ ಹೊಸತು ಪತ್ರಿಕೆಯ ಗೌರವ ಸಂಪಾದಕರಾದ ಡಾ॥ ಜಿ. ರಾಮಕೃಷ್ಣರವರು ೧೯೬೫ರಲ್ಲಿ ತಮ್ಮ ಅಧ್ಯಾಪಕ ವೃತ್ತಿಯನ್ನು ಆರಂಭಿಸಿದ್ದರು. ನಂತರ ಅಲ್ಲಿಂದ ಬೆಂಗಳೂರಿಗೆ ಬಂದ ನಂತರವೂ ಈ ಊರು ಮತ್ತು ಈ ಸಂಸ್ಥೆಯ ಅಧ್ಯಾಪಕರೊಂದಿಗೆ ಅವರ ನಂಟು ಸತತವಾಗಿ ಉಳಿದುಕೊಂಡೇ ಬಂದಿದೆ. ಎಲ್ಲರಿಗೂ ತಿಳಿದಂತೆ ಮಹಾಡ್ ಡಾ॥ ಅಂಬೇಡ್ಕರ್‌ರವರ ರಾಜಕೀಯ ಜೀವನದ ಕರ್ಮಭೂಮಿ. ಭಾರತದ ಚರಿತ್ರೆಯಲ್ಲಿ ಶಾಶ್ವತ ಸ್ಥಾನ ಪಡೆದುಕೊಂಡಿರುವ ಈ ಊರನ್ನು ಭೇಟಿಯಾಗುವ ಸದವಕಾಶ ನನಗೆ ಮೂರ್ನಾಲ್ಕು ಬಾರಿಯಾದರೂ ಸಿಕ್ಕಿದ್ದರೆ, ಅದಕ್ಕೆ ಡಾ॥ ಜಿ. ಆರ್.ರವರು ಕಾರಣ.

**ಡಾ॥ ಎನ್. ಗಾಯತ್ರಿ**

ನಮ್ಮ ದೇಶದ ಭೂಪಟದಲ್ಲಿ ಮಹಾರಾಷ್ಟ್ರದ ರಾಯಗಡ್ ಜಿಲ್ಲೆಗೆ ತನ್ನದೇ ಆದ ವೈಶಿಷ್ಟ್ಯವಿದೆ. ಇದು ಬೌದ್ಧಿಕ ಸಂಪತ್ತಿಗೂ ಭೌಗೋಳಿಕ ಸಿರಿತನಕ್ಕೂ ಹೆಸರಾದ್ದು. ಎಲ್ಲಕ್ಕಿಂತ ಹೆಚ್ಚಾಗಿ ಸಾಮಾಜಿಕ ಕ್ರಾಂತಿಗಳ ತವರೂರು. ಅಲ್ಲಿನ ಸಹ್ಯಾದ್ರಿ ಪರ್ವತ ಶ್ರೇಣಿಗಳ ಮನಮೋಹಕ ದೃಶ್ಯ, ಜೊತೆಗೆ ಸನಿಹದಲ್ಲಿ ಹರಿವ ಸಾವಿತ್ರಿ ನದಿ, ಛತ್ರಪತಿ ಶಿವಾಜಿಯ ಕೋಟೆ, ಗಂಧರ್ಪಲೆ ಬೌದ್ಧ ಗುಹೆಗಳಿಂದ ಕೂಡಿದ ಕೊಂಕಣ ಪ್ರಾಂತ್ಯದ ಈ ಭಾಗ ಉತ್ತಮ ವಿಹಾರ ಸ್ಥಳವೂ ಹೌದು. ಎಲ್ಲಕ್ಕಿಂತ ಮುಖ್ಯವಾಗಿ, ಆಧುನಿಕ ಭಾರತದ ದಲಿತ ಚಳುವಳಿಗೆ ಬೀಜಾಂಕುರವಾದ ತಾಣವಾದ ಮಹಾಡ್ ಈ ಜಿಲ್ಲೆಯ ಭಾಗವಾಗಿರುವುದರಿಂದ ಇದು ಐತಿಹಾಸಿಕವಾಗಿಯೂ ಪ್ರೇಕ್ಷಣೀಯ ತಾಣವಾಗಿದೆ.

ಸಾರ್ವಜನಿಕ ಜಾಗದಲ್ಲಿನ ನೀರನ್ನು ಬಳಸಲು ತಮ್ಮ ಹಕ್ಕುಗಳನ್ನು ಚಲಾಯಿಸಲು ೧೯೨೭ರಲ್ಲಿ ಡಾ॥ ಅಂಬೇಡ್ಕರ್‌ರವರು ಒಂದು ಸತ್ಯಾಗ್ರಹವನ್ನು ಹೂಡಲು ನಿರ್ಧರಿಸಿದರು. ಮಹಾಡ್ ಸತ್ಯಾಗ್ರಹ ಎಂದೇ ಪ್ರಸಿದ್ಧವಾದ, ಭಾರತದಲ್ಲಿ ದಲಿತ ಚಳುವಳಿಗೆ ಅಸ್ತಿಭಾರ ಹಾಕಿದ ಚೌದಾರ್ ತಳೆ ಮಹಾಡ್‌ನಲ್ಲಿ ನೋಡಲೇಬೇಕಾದ ಪ್ರಮುಖ ಸ್ಥಳ.

೧೯೨೭ರ ಮಾರ್ಚ್ ೧೯–೨೦ರಂದು ಮಹಾಡ್‌ನಲ್ಲಿ ಬಹಿಷ್ಕೃತ ಹಿತಕಾರಿಣಿ ಸಭಾ ಮೂಲಕ ಸಂಘಟಿಸಲಾದ ಸಮಾವೇಶದಲ್ಲಿ ಅಂಬೇಡ್ಕರ್ ಅವರು ಸಮ್ಮೇಳನಾಧ್ಯಕ್ಷರಾಗಿದ್ದರು. ಸಮ್ಮೇಳನದಲ್ಲಿ ದಲಿತರಲ್ಲದೆ ಅನೇಕ ಪ್ರಗತಿಪರ ಸವರ್ಣೀಯರೂ ಜೊತೆಗೂಡಿದ್ದರು. ಸಮ್ಮೇಳನದಲ್ಲಿ ದಲಿತರನ್ನು ಬೆಂಬಲಿಸಿ ಮಾತನಾಡಿದ ಸವರ್ಣೀಯ ಹಿಂದೂ ನಾಯಕರಲ್ಲಿ ಒಬ್ಬರಾದ ಶೇಟ್ ಅವರು 'ಮಹಾಡ್ ಮುನಿಸಿಪಾಲಿಟಿ ಈಚೆಗೆ ಕೆರೆಯ ಸಿಹಿ ನೀರನ್ನು ಅಸ್ಪೃಶ್ಯರೂ ಸೇರಿದಂತೆ

( ೩೪ನೇ ಪುಟಕ್ಕೆ )

# ಮಹಾಡ್

## ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಕರ್ಮಭೂಮಿ

ಚೌದಾರ್ ತಳೆ





# ಭಾರತ ಭಾಗ್ಯ ವಿಧಾತ

## ಧ್ವನಿ–ಬೆಳಕು; ದೃಶ್ಯ ವೈಭವಗಳ ರೂಪಕ

ಏಪ್ರಿಲ್ 14, 1891, ಭಾರತೀಯ ತಳ ಸಮುದಾಯಗಳ ಚರಿತ್ರೆಯಲ್ಲಿ ಐತಿಹಾಸಿಕ ದಿನ. ಸಮಾನತೆಯ ಸಮಾಜಕ್ಕಾಗಿ ತಮ್ಮ ಬದುಕನ್ನೇ ಸಮರ್ಪಿಸಿಕೊಂಡ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರು ಜನಿಸಿದ ಸ್ಮರಣೀಯ ದಿನ. ಪ್ರತಿ ವರ್ಷ ಈ ದಿನವನ್ನು ಅಂಬೇಡ್ಕರ್ ಜಯಂತಿ ಹೆಸರಿನಲ್ಲಿ ರಾಷ್ಟ್ರಾದ್ಯಂತ ಸಡಗರ–ಸಂಭ್ರಮಗಳಿಂದ ಆಚರಿಸಲಾಗುತ್ತದೆ. ಅಂತೆಯೇ, 2016ರ ಏಪ್ರಿಲ್ 14ರಿಂದ ಆರಂಭಿಸಿ 1 ವರ್ಷ ಕಾಲ ಅಂಬೇಡ್ಕರ್‌ರವರ 125ನೇ ಜನ್ಮ ದಿನಾಚರಣೆಯ ವರ್ಷವನ್ನಾಗಿ ರಾಜ್ಯದಲ್ಲಿ ಆಚರಿಸಲಾಗುತ್ತಿದೆ. ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಈ ಸಂದರ್ಭದಲ್ಲಿ ಅಂಬೇಡ್ಕರ್‌ರವರ ಜೀವನ ಸಾಧನೆಗಳನ್ನು ಬಿಂಬಿಸುವ ವಿನೂತನ "ಧ್ವನಿ ಬೆಳಕು" ಕಾರ್ಯಕ್ರಮವನ್ನು "ಭಾರತ ಭಾಗ್ಯ ವಿಧಾತ" ಎನ್ನುವ ಹೆಸರಿನಲ್ಲಿ ರಾಜ್ಯದ ಎಲ್ಲ ಜಿಲ್ಲೆಗಳಲ್ಲಿ ಏರ್ಪಡಿಸಿತ್ತು.









ವಾರ್ತಾ ಮತ್ತು ಸಾರ್ವಜನಿಕ
ಸಂಪರ್ಕ ಇಲಾಖೆ









**"ಭಾರತ ಭಾಗ್ಯ ವಿಧಾತ" – ಇದು ಭಾರತದ ತಳ ಸಮುದಾಯಗಳ ಆತ್ಮಸ್ಥೈರ್ಯವನ್ನು ನೂರ್ಮಡಿಗೊಳಿಸಿದ ಮಹಾ ಚೇತನದ ಜೀವನ ಚರಿತೆ ನೊಂದವರ ನೋವಿಗೆ ದನಿಯಾಗಿ ನಿಂತ ಧೀಮಂತ ನಾಯಕನ ಆತ್ಮಕತೆ. ತನ್ನ ಪ್ರತಿಭೆ, ಪರಿಶ್ರಮಗಳಿಂದ ಜಗತ್ತಿನ ಪ್ರತಿಷ್ಠಿತ ವಿಶ್ವವಿದ್ಯಾಲಯಗಳ ಪದವಿ ಪುರಸ್ಕಾರ ಗಳಿಸಿದ ಆರ್ಥಿಕ ತಜ್ಞನ ಯಶೋಗಾಥೆ. ಭಾರತ ಸಂವಿಧಾನದ ಶಿಲ್ಪಿಯೆಂದೇ ಖ್ಯಾತರಾದ ಮಹಾ ಮಾನವತಾವಾದಿಯ ಜೀವಗಾಥೆ.**

ನಮ್ಮ ಭಾರತ ದೇಶ ಹಲವಾರು ಮಹನೀಯರುಗಳ ಕರ್ಮ ಭೂಮಿ. ಸತ್ಯ, ಶಾಂತಿ, ಅಹಿಂಸೆಯೆಂಬ ಮಹಾ ಮೌಲ್ಯಗಳ ಮೂಲಕ ನಮ್ಮ ನಾಡಿಗೆ ಸ್ವಾತಂತ್ರ್ಯ ದೊರಕಿಸಿ, ಭಾರತದ ರಾಷ್ಟ್ರಪಿತನೆಂಬ ಮಹಾಗೌರವಕ್ಕೆ ಪಾತ್ರರಾದವರು ಮಹಾತ್ಮ ಗಾಂಧೀಜಿ. ಹಾಗೆಯೇ ನಮ್ಮ ಭಾರತದ ತಳ ಸಮುದಾಯಗಳ ಆತ್ಮಸ್ಥೈರ್ಯಕ್ಕೆ ಅಡಿಗಲ್ಲಾಗಿ ನಿಂತು ಶತಮಾನಗಳ ಶೋಷಣೆಗೆ ಸಂವಿಧಾನ ರಚನೆಯ ಮೂಲಕ ವಿದಾಯ ಹೇಳಿದವರು ಮಹಾ ಮಾನವತಾವಾದಿ ಸಂವಿಧಾನ ಶಿಲ್ಪಿ, ಭಾರತ ರತ್ನ.

**ಡಾ॥ ಬಿ. ಆರ್. ಅಂಬೇಡ್ಕರ್.**

ಡಾ॥ ಬಿ. ಆರ್. ಅಂಬೇಡ್ಕರ್ ಭಾರತದ ತಳ ಸಮುದಾಯದ ಸ್ಫೂರ್ತಿಯ ಸೆಲೆ, ನೊಂದವರ ಎದೆಯಾಳದ ಆತ್ಮಸ್ಥೈರ್ಯದ ಹಾಡು, ದಮನಿತ ಸಮುದಾಯದ ಚೈತನ್ಯ ಶಕ್ತಿ, ಭಾರತ ಸಂವಿಧಾನದ ಮಹಾಶಿಲ್ಪಿ. ಹಲವಾರು ರಾಷ್ಟ್ರಗಳ ಸಂವಿಧಾನಗಳನ್ನು ತಳಸ್ಪರ್ಶಿಯಾಗಿ ಅಧ್ಯಯನ ಮಾಡಿ ಭಾರತದಲ್ಲಿ ಸಮಾನತೆಯ ಸಮಾಜ ನಿರ್ಮಾಣಕ್ಕಾಗಿ ಪವಿತ್ರ ಸಂವಿಧಾನವನ್ನು ರಚಿಸಿಕೊಟ್ಟ ಮಹಾನ್ ಸಾಂವಿಧಾನಿಕ ತಜ್ಞರು.

ಮಹಾರಾಷ್ಟ್ರದ ಮೆಹರ್ ಎಂಬ ತಳಸಮುದಾಯದಲ್ಲಿ ಜನಿಸಿದ ಅಂಬೇಡ್ಕರ್ ಅಪಮಾನಗಳ ನಡುವೆಯೇ ಬಾಳಿ ಬದುಕಿ ಭಾರತದ ಮಹಾನ್ ಚೇತನವಾಗಿ ಬೆಳಗಿದ ಕಥೆ ಬೆರಗುಗೊಳಿಸುವಂತಹುದು. ಶಾಲಾ ಬಾಲಕನಾಗಿದ್ದಾಗ ತನ್ನದೇ ನಾಡಿನಲ್ಲಿ ಮೇಲ್ವರ್ಗದವರಿಂದ ಅವಮಾನಿತರಾಗಿ ಗಾಡಿಯಿಂದ ಕೆಳಗೆ ದೂಡಿಸಿಕೊಂಡು ಅಪಮಾನ ಅನುಭವಿಸಿದ ಘಟನೆ ಹಾಗೂ ಗಾಂಧೀಜಿಯವರು ದಕ್ಷಿಣ ಆಫ್ರಿಕದ ಡರ್ಬಾನ್‌ನಲ್ಲಿ ಬಿಳಿ ವರ್ಣೀಯರಿಂದ ರೈಲಿನಿಂದ ಕೆಳಗೆ ದೂಡಿಸಿಕೊಂಡ ಘಟನೆಗಳೆರಡೂ ಈ ಇಬ್ಬರು ಮಹಾನ್ ಚೇತನಗಳ ಬದುಕಿನಲ್ಲಿ ಮಹತ್ತರ ಘಟನೆಗಳಾಗಿವೆ. ಈ ಎರಡೂ ಘಟನೆಗಳ ನಂತರವೇ ಈ ಇಬ್ಬರೂ ತಾವು ಅನುಭವಿಸಿದ ಅಪಮಾನ, ನೋವುಗಳನ್ನು ತಮ್ಮ ಸಮುದಾಯದವರು ಅನುಭವಿಸಬಾರದೆಂದು ದೃಢ ಸಂಕಲ್ಪ ತಳೆದು ತಮ್ಮ ಬದುಕನ್ನೇ ಈ ಅಸಮಾನತೆಯ ನಿವಾರಣೆಗಾಗಿ ಮುಡುಪಾಗಿಟ್ಟಿದ್ದು ಈಗ ಇತಿಹಾಸ.

ಕಣ್ತುಂಬಿಸುವ ಬೆಳಕಿನ ಲೋಕ • ಕಿವಿದುಂಬಿಸುವ ಹಿನ್ನೆಲೆ ಸಂಗೀತ • ವೈಚಾರಿಕತೆಯ ಹಿನ್ನೋಟ


ಕರ್ನಾಟಕ ವಾರ್ತೆ
karnatakainformation.gov.in



'ಮನುಸ್ಮೃತಿ ದಹನ'ದ ಸ್ತೂಪದ ಬಳಿ
ಲೇಖಕಿ




ಚೌದಾರ್ ತಳೆ

ಎಲ್ಲರೂ ಬಳಸಿಕೊಳ್ಳಬಹುದು ಎಂಬ ನಿರ್ಣಯ ಮಾಡಿದೆ' ಎಂಬ ಅಂಶವನ್ನು ಸಭೆಯ ಗಮನಕ್ಕೆ ತರುತ್ತಾರೆ. ಇದನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಸಮ್ಮೇಳನದ ಕೊನೆಯಲ್ಲಿ ಸಭೆಗೆ ಆಗಮಿಸಿದ್ದ ಎಲ್ಲ ಜನರೂ ಸಮ್ಮೇಳನಾಧ್ಯಕ್ಷರೊಂದಿಗೆ ಮೆರವಣಿಗೆಯಲ್ಲಿ ಹೊರಟು ನಗರದ ಹೃದಯ ಭಾಗದಲ್ಲಿದ್ದ ಚೌದಾರ್ ತಳೆ ಕೆರೆಯನ್ನು ತಲುಪಿ ಕೆಳಗಿಳಿದು ನೀರು ಕುಡಿದು ಚಾಲ್ತಿಯಲ್ಲಿದ್ದ ಸಾಮಾಜಿಕ ಪದ್ಧತಿಯನ್ನು ಪ್ರತಿಭಟಿಸಿದಾಗ ಎಲ್ಲರಿಗೂ ರೋಮಾಂಚನವೋ ರೋಮಾಂಚನ. ಆ ನಂತರ ಜಾತಿ ಹಿಂದೂಗಳು ಕೆರೆಯ ಒಂದು ತುದಿಯನ್ನು ತೊಳೆದು, ಪೂಜೆ ಮಾಡಿ ಕೆರೆಯನ್ನು ಶುಚಿಗೊಳಿಸಿದರಂತೆ.

ಸಮಾವೇಶ ಮುಗಿಸಿ ಬಂದಿದ್ದ ಜನರು ಊರಿಗೆ ಹೊರಡುವ ಮುನ್ನ ಸಮ್ಮೇಳನಕ್ಕೆ ಬಂದಿದ್ದ ಪ್ರತಿನಿಧಿಗಳು ಸಭಾಂಗಣದ ಪೆಂಡಾಲಿನಲ್ಲಿ ಊಟ ಮಾಡುತ್ತಿದ್ದರು. ಆ ವೇಳೆಗಾಗಲೇ ಅಂಬೇಡ್ಕರ್ ಮತ್ತು ಅವರ ಕೆಲವು ಸಂಗಾತಿಗಳು ಭದ್ರತೆಯ ಕಾರಣಕ್ಕೆ ಸರ್ಕಾರಿ ಪ್ರವಾಸ ಮಂದಿರಕ್ಕೆ ಹೋಗಿ ತಂಗಿದ್ದರು. ಈ ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ವೀರೇಶ್ವರ ದೇವಾಲಯದ ಪೂಜಾರಿಗಳು ಚೌದಾರ್ ಕೆರೆಯನ್ನು ಅಪವಿತ್ರ ಮಾಡಿದ ದಲಿತರು ಈಗ ದೇವಾಲಯವನ್ನೂ ಅಪವಿತ್ರಗೊಳಿಸಲು ಬರುತ್ತಿದ್ದಾರೆ ಎಂದು ಗುಲ್ಲೆಬ್ಬಿಸಿದರು ಮತ್ತು ಊರ ತುಂಬ ಸುಳ್ಳು ಸುದ್ದಿ ಹರಡುತ್ತಾ ಜನರನ್ನು ರೊಚ್ಚಿಗೆಬ್ಬಿಸಿದ ಪರಿಣಾಮ ಸವರ್ಣೀಯರು ಲಾಠಿ ಹಿಡಿದು ವೀರೇಶ್ವರ ದೇವಸ್ಥಾನದ ಮುಂದೆ ನೆರೆದುಬಿಟ್ಟರು. ಆ ವಲಯದ ಪೊಲೀಸ್ ಸೂಪರಿಂಟೆಂಡರು ಅಂಬೇಡ್ಕರ್ ಅವರನ್ನು ಭೇಟಿ ಮಾಡಿದಾಗ 'ನಮಗೆ ದೇವಾಲಯ ಪ್ರವೇಶಿಸುವಲ್ಲಿ ಆಸಕ್ತಿಯೂ ಇಲ್ಲ; ಅಗತ್ಯವೂ ಇಲ್ಲ' ಎಂದು ಹೇಳಿದ ಅಂಬೇಡ್ಕರ್ ಅವರ ಮಾತುಗಳನ್ನು ಕೇಳಿದ ಮೇಲೆ ಪರಿಸ್ಥಿತಿಯನ್ನು ಶಾಂತಗೊಳಿಸಲಾಯಿತು.

ಅಂಬೇಡ್ಕರ್ ಅವರು ಎರಡನೇ ಬಾರಿ ಇದೇ ರೀತಿ ಕೆರೆ ಪ್ರವೇಶ ಮಾಡುವ ಚಳುವಳಿಯನ್ನು ಡಿಸೆಂಬರ್ ೨೬-೨೭ರಂದು ಹಮ್ಮಿಕೊಳ್ಳಬೇಕೆಂದು ನಿರ್ಧರಿಸಿದಾಗ, 'ಚೌದಾರ್ ತಳೆ ಸಾರ್ವಜನಿಕ ಕೆರೆಯಲ್ಲ, ಅದು ಚೌಧರಿ ಎಂಬುವವರಿಗೆ ಸೇರಿದ್ದು', ಎಂದು ಸವರ್ಣೀಯರು ಕೋರ್ಟಿನಲ್ಲಿ ದಾವೆ ಹೂಡಿದರು. ವಿಧಿಯಿಲ್ಲದೆ ಸಬ್ ಜುಡೀಸ್ ಆಗುವುದೆಂದು ಅಂಬೇಡ್ಕರ್ ಅವರು ಆಗ ಹೋರಾಟವನ್ನು ಕೈಬಿಟ್ಟರೂ ಹತ್ತು ವರ್ಷಗಳ ನಂತರ ೧೯೩೭ರಲ್ಲಿ ನಂತರ ಅದರ ನೀರು ಎಲ್ಲರಿಗೂ ಬಳಸಲು ನೀಡಬೇಕೆಂಬುದರಲ್ಲಿ ಗೆಲುವು ಸಾಧಿಸಿದರು.

ಈ ಕೆರೆಯನ್ನು ಈಗ ಒಂದು ಸ್ಮಾರಕವಾಗಿ ಉಳಿಸಿಕೊಳ್ಳಲಾಗಿದೆಯಾದರೂ ಅದರ ಸುತ್ತಲೂ ಕಟ್ಟಡಗಳು ಕಟ್ಟಲ್ಪಟ್ಟು ಸ್ಮಾರಕದ ಸೌಂದರ್ಯಕ್ಕೆ ಧಕ್ಕೆ ಬಂದಿದೆ. ಪಕ್ಕದಲ್ಲೇ ಒಂದು ಸಭಾಭವನವನ್ನು ಕಟ್ಟಿದ್ದಾರೆ. ನಾವು ಅಲ್ಲಿ ಹೋದ ದಿನ ಅಲ್ಲಿ ವಿಚಾರಸಂಕಿರಣವೊಂದು ನಡೆಯುತ್ತಿತ್ತು.

೧೯೨೭ರ ಡಿಸೆಂಬರ್ ೨೫ರಂದು ಅಂಬೇಡ್ಕರ್ ಅವರು ನಡೆಸಿದ "ಮನುಸ್ಮೃತಿ ದಹನ" ಕಾರ್ಯಕ್ರಮ ಚರಿತ್ರಾರ್ಹವಾದುದು ಮತ್ತು ದಲಿತ ಚಳುವಳಿಯಲ್ಲಿ ಒಂದು ಮಹತ್ವದ ಮೈಲಿಗಲ್ಲು ಆಗಿದೆ. ಜಾತಿ ವ್ಯವಸ್ಥೆಯನ್ನು ಪ್ರತಿಪಾದಿಸುವ ಬ್ರಾಹ್ಮಣಶಾಹಿಯ ವಿರುದ್ಧದ ಪ್ರತಿಭಟನೆಯ ಅಸ್ತ್ರವಾಗಿ ಮನುಸ್ಮೃತಿಯನ್ನು ಸುಡಲು ಅಂಬೇಡ್ಕರ್ ಇದೇ ಮಹಾಡ್‌ಅನ್ನು ಆಯ್ಕೆಮಾಡಿಕೊಂಡರು. ವಿಶಾಲವಾದ ಮೈದಾನದ ಮಧ್ಯೆ ಆರು ಅಡಿ ಆಳದ ಮತ್ತು ಒಂದೂವರೆ ಅಂಗುಲ ಚೌಕಾಕಾರದ ಗುಂಡಿಯನ್ನು ತೋಡಿ ಅದರಲ್ಲಿ ಚಂದನದ ಚೂರುಗಳನ್ನು ತುಂಬಲಾಗಿತ್ತು. ಅದರ ಇಕ್ಕೆಲಗಳಲ್ಲಿ ಮೂರು ಬ್ಯಾನರ್‌ಗಳು ರಾರಾಜಿಸುತ್ತಿದ್ದವು. 'ಮನುಸ್ಮೃತಿಯ ದಹನ ಭೂಮಿ', 'ಅಸ್ಪೃಶ್ಯತೆ ತೊಲಗಲಿ' ಮತ್ತು 'ಬ್ರಾಹ್ಮಣೀಯತೆಯನ್ನು ಹೂತು ಹಾಕಿ' ಎಂಬ ಬ್ಯಾನರ್‌ಗಳಿದ್ದವು. ಡಿಸೆಂಬರ್ ೨೫ರಂದು ರಾತ್ರಿ ೯ ಗಂಟೆಗೆ ಮನುಸ್ಮೃತಿ ಪುಸ್ತಕವನ್ನು ಈ ಪೀಠದ ಮೇಲಿಟ್ಟಿದ್ದರು. ಬಾಪುಸಾಹಿಬ್ ಸಹಸ್ರ ಬುದ್ಧೆಯವರು ಈ ಪುಸ್ತಕಕ್ಕೆ ಬೆಂಕಿಯಿಟ್ಟಾಗ ಅವರೊಂದಿಗೆ ಐದು ದಲಿತ ಸಾಧುಗಳು ಜೊತೆಯಲ್ಲಿದ್ದರು. ಅಂದಿನಿಂದ ಇಂದಿನವರೆಗೂ ಈ ಘಟನೆಯ ವಾರ್ಷಿಕೋತ್ಸವವನ್ನು ಆಚರಿಸಲು ಹಲವಾರು ಮಂದಿ ಇಲ್ಲಿಗೆ ಬಂದು ಮನುಸ್ಮೃತಿಯ ಪ್ರತಿಗಳನ್ನು ಸುಡುತ್ತಾರೆ.

ಮಹಾಡ್‌ನ ಮತ್ತೊಂದು ಭಾಗದಲ್ಲಿ ಮನುಸ್ಮೃತಿ ದಹನದ ಸ್ಮಾರಕವಿದೆ. ಅದೊಂದು ವಿಶಾಲವಾದ ಮೈದಾನ. ಮೈದಾನದ ಮಧ್ಯದಲ್ಲಿ ಮನುಸ್ಮೃತಿ ಸುಟ್ಟ ಜಾಗದಲ್ಲಿ ಒಂದು ಪೀಠದ ಮೇಲೆ ಅಂಬೇಡ್ಕರ್ ಅವರ ಪ್ರತಿಮೆಯನ್ನು ಇಟ್ಟಿದ್ದಾರೆ; ಅದರ ಹಿಂದುಗಡೆ ಒಂದು ಕ್ರಾಂತಿ ಜ್ವಾಲೆಯನ್ನು ತೋರುವ ಸ್ತೂಪವಿದೆ. ಅಲ್ಲೇ ಪಕ್ಕದಲ್ಲಿ ಮಾತಾ ರಮಾಬಾಯಿಯವರ ಹೆಸರಿನ ವಿಹಾರ ಮಂದಿರವಿದೆ. ಮಹಿಳೆಯಾಗಿ ಈ ಚರಿತ್ರಾರ್ಹ ಮಹಾಸ್ತೂಪದ ಮುಂದೆ ನಿಂತಾಗ ಮೈ ಜುಮ್ಮೆನಿಸಿತು. ಇಲ್ಲಿ ಎಷ್ಟೋ ಮನುಸ್ಮೃತಿಗಳನ್ನು ಸುಟ್ಟುಹಾಕಿರಬಹುದು. ಆದರೂ ಜನರ ಸ್ಮೃತಿಯೊಳಗೆ ಅಡಗಿರುವ ಮನುವನ್ನು ಅಳಿಸಲು ಇನ್ನೆಷ್ಟು ಕಾಲ ಬೇಕಾಗುವುದೋ ! ಎಂಬ ಭಾವ ಮತ್ತು ಆತಂಕ ಮನಸ್ಸಿನಲ್ಲಿ ಸುಳಿದುಹೋಯಿತು.




ಚೌದಾರ್ ತಳೆಯ ರಾಷ್ಟ್ರೀಯ ಸ್ಮಾರಕ

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

# ಡಾ॥ ಅಂಬೇಡ್ಕರ್ ಮತ್ತು ಧಾರವಾಡ

ಸದಾಶಿವ ಮರ್ಜಿ

**ಡಾ॥** ಅಂಬೇಡ್ಕರರು ೧೯೨೯ನೇ ಡಿಸೆಂಬರ್ ೨೮ರಂದು ಧಾರವಾಡ ಜಿಲ್ಲಾ ಪ್ರಥಮ ಡಿಪ್ರೆಸ್ಡ್ ಕ್ಲಾಸಸ್ ಪರಿಷತ್ ಪ್ರಥಮ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಅಧ್ಯಕ್ಷೀಯ ಭಾಷಣದ ಪೂರ್ಣಪಾಠವನ್ನು 'ಗ್ಯಾನ್ ಪ್ರಕಾಶ' ಸಂಚಿಕೆಯಲ್ಲಿ (ಜನವರಿ, ೧೯೩೦) ಪ್ರಕಟಿಸಲಾಗಿದೆ. ಈ ಸಮ್ಮೇಳನದಲ್ಲಿ ರಾಜಕೀಯ ಅಧಿಕಾರ ಪಡೆದುಕೊಳ್ಳಲು ಹೋರಾಟ ಮಾಡಬೇಕಾದ ಐತಿಹಾಸಿಕ ಅನಿವಾರ್ಯತೆಯ ಬಗ್ಗೆ ಒತ್ತಿ ಹೇಳಿದ ಡಾ॥ ಅಂಬೇಡ್ಕರರು ಅಸ್ಪೃಶ್ಯರು ಮತ್ತು ದಮನಿತ ವರ್ಗಗಳು ಸಂಘಟಿತರಾಗಿ ತಮ್ಮ ಶಕ್ತಿ–ಸಾಮರ್ಥ್ಯಗಳ ಮೇಲೆ ನಂಬಿಕೆ ಇರಿಸಿಕೊಂಡು ಸ್ವವಿಮೋಚನೆಗೆ ಪ್ರಯತ್ನಿಸಬೇಕೆಂದು ಕರೆ ನೀಡಿರುವರು. ಸ್ಪೃಶ್ಯರು ನಿಮ್ಮೊಂದಿಗೆ ಸೌಜನ್ಯದಿಂದ ವರ್ತಿಸಬಹುದು, ನಿಮ್ಮ ಸಮಸ್ಯೆಗಳ ಬಗ್ಗೆ ಅನುಕಂಪ ತೋರಿಸಬಹುದು, ನಿಮ್ಮನ್ನು ಮೇಲೆತ್ತುವುದಕ್ಕೆ ಪ್ರಯತ್ನಿಸಬಹುದು. ಆದರೆ ಆ ಎಲ್ಲ ಕ್ರಮಗಳು ಅಸ್ಪೃಶ್ಯರು ಮತ್ತು ದಮನಿತ ತಳ ಸಮುದಾಯಗಳ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಒದಗಿಸಲಾರವು. ರಾಜಕೀಯ ಅಧಿಕಾರವೊಂದೇ ನಿಮಗುಳಿದಿರುವ ಪ್ರಬಲ ಅಸ್ತ್ರ. ಅದರಿಂದ ನಿಮ್ಮ ಬದುಕಿನಲ್ಲಿ ಬೆಳಕು ಕಾಣಬಹುದು. ರಾಜಕೀಯ ಅಧಿಕಾರ ಪಡೆಯಲು ನೀವು ಪ್ರಯತ್ನ ಮಾಡದೇ ಹೋದರೆ ಅದರಿಂದ ಅಸ್ಪೃಶ್ಯ ಸಮುದಾಯಕ್ಕೆ ತೀವ್ರ ಹಿನ್ನಡೆ ಉಂಟಾಗುವ ಎಲ್ಲ ಸಾಧ್ಯತೆಗಳಿವೆ ಎಂದು ಎಚ್ಚರಿಸಿದ ಡಾ॥ ಅಂಬೇಡ್ಕರ ಸಂಘಟಿತ ಹೋರಾಟದ ಮೂಲಕ ನಿಮ್ಮ ಹಕ್ಕುಗಳ ಪ್ರಾಪ್ತಿಗಾಗಿ ಮತ್ತು ರಾಜಕೀಯ ಅಧಿಕಾರ ಹೊಂದುವುದಕ್ಕಾಗಿ ಪ್ರಯತ್ನಿಸಬೇಕೆಂದು ಹೇಳಿದರು. ಇದೇ ಸಂದರ್ಭದಲ್ಲಿ ಧಾರವಾಡದಲ್ಲಿ ಬೋರ್ಡಿಂಗ್ ಹಾಸ್ಟೆಲ್ ಪ್ರಾರಂಭಿಸಿ ದಮನಿತ ತಳಸಮುದಾಯದ ಮಕ್ಕಳ ಶ್ರೇಯೋಭಿವೃದ್ಧಿಗೆ ಶ್ರಮಿಸಲು ಸೂಚಿಸಿದ ಅವರು ಆ ಕಾರ್ಯದ ಸಾಫಲ್ಯಕ್ಕಾಗಿ ದೇಣಿಗೆ ನೀಡುವಂತೆ ಪ್ರೇರೇಪಿಸಿದರು. ಅವರ ಪ್ರಯತ್ನದಿಂದಾಗಿಯೇ ಧಾರವಾಡದಲ್ಲಿ ದಮನಿತ ತಳಸಮುದಾಯದ ಅಸ್ಪೃಶ್ಯರಿಗಾಗಿ 'ಬುದ್ಧ ರಕ್ಷಿತ ಶಾಲೆ'ಯ ಬೋರ್ಡಿಂಗ್ ಹಾಸ್ಟೆಲನ್ನು ಪ್ರಾರಂಭಿಸಿದರು.

ಡಾ॥ ಬಾಬಾ ಸಾಹೇಬ ಅಂಬೇಡ್ಕರರು ಧಾರವಾಡಕ್ಕೆ ಬರುವುದಕ್ಕೆ ಪ್ರೇರಣೆ ನೀಡಿದ ಘಟನೆಯು ನಡೆದದ್ದು ೧೮೫೬ರಲ್ಲಿ ಎಂಬುದು ಅತ್ಯಂತ ಕುತೂಹಲಕಾರಿ ಸಂಗತಿಯಾಗಿದೆ. ಡಾ॥ ಅಂಬೇಡ್ಕರರು ಜನಿಸುವ ಪೂರ್ವದಲ್ಲಿಯೇ ಮುಂಬೈ ಕರ್ನಾಟಕದ ಭಾಗವಾಗಿದ್ದ ಧಾರವಾಡದ ಓರ್ವ ಮಹಾರ್ ಬ್ರಿಟಿಷ್ ಸರಕಾರಕ್ಕೆ ಮನವಿ ಸಲ್ಲಿಸಿ ಶಿಕ್ಷಣ ಪಡೆಯಲು ಶಾಲೆಯಲ್ಲಿ ಪ್ರವೇಶ ನೀಡಬೇಕೆಂದು ಒತ್ತಾಯಿಸಿದ್ದ ಮಾತ್ರವಲ್ಲ, ಬೇರೆಯವರು ಯಾವ ರೀತಿ ಫೀಜು ಕಟ್ಟುತ್ತಾರೋ ಅದೇ ರೀತಿ ನಾನು ಕೂಡ ಫೀಜು ಕಟ್ಟುವುದಾಗಿ ತನಗೆ ಶಾಲೆ ಸೇರಲು ಪ್ರವೇಶ ನೀಡಬೇಕೆಂದು ಬ್ರಿಟಿಷ್ ಸರಕಾರಕ್ಕೆ ಕೇಳಿಕೊಂಡಿದ್ದ. ಈ ಘಟನೆ ನಡೆದಿದ್ದು ೧೮೫೬ರಲ್ಲಿ. ಈಸ್ಟ್ ಇಂಡಿಯಾ ಕಂಪನಿಯ ಆಡಳಿತವಿದ್ದ ಕಾಲಘಟ್ಟದಲ್ಲಿ ನಡೆದ ಈ ಘಟನೆಯು ದಮನಿತ ಸಮುದಾಯಗಳಿಗೆ ಶಿಕ್ಷಣ ನೀಡುವ ಸಂಬಂಧ ಇಂಗ್ಲೆಂಡಿನಾದ್ಯಂತ ಹೊಸದೊಂದು ಚರ್ಚೆಯನ್ನು ಹುಟ್ಟುಹಾಕಿತು. ಈ ಕುರಿತು ಹಲವಾರು ರೀತಿಯಲ್ಲಿ ವಾದ–ವಿವಾದಗಳು ಏರ್ಪಟ್ಟವು. ಈ ಘಟನೆಯು ಹೊಸ ಮನ್ವಂತರವೊಂದು ಹುಟ್ಟಿಕೊಳ್ಳುವಂತಹ ಪರಿಸ್ಥಿತಿಗೆ ಕಾರಣೀಭೂತವಾದ ಸಂಗತಿಯಾಗಿದ್ದಿತು.

ಅಸ್ಪೃಶ್ಯ ಮಹಾರ ಬ್ರಿಟಿಷ್ ಸರಕಾರಕ್ಕೆ ಮನವಿಯನ್ನು ಸಲ್ಲಿಸಿ ಇತರರಂತೆ ತನಗೂ ಶಾಲೆಗೆ ಪ್ರವೇಶ ನೀಡಬೇಕೆಂದು ಕೋರುವುದಕ್ಕಿಂತ ಮುಂಚೆಯೇ ಜ್ಯೋತಿಬಾ ಫುಲೆ ಮತ್ತು ಸಾವಿತ್ರಿಬಾಯಿ ಫುಲೆಯವರು (೧೮೪೮–೧೮೫೨) ಎರಡು ಶಾಲೆಗಳನ್ನು ಪ್ರಾರಂಭಿಸಿ ಶಿಕ್ಷಣ ನೀಡಲು ಪ್ರಯತ್ನಿಸಿರುವುದು ಐತಿಹಾಸಿಕ ಸಂಗತಿ. ಇಂಗ್ಲಿಷ್ ಶಿಕ್ಷಣವನ್ನು ಸಮಾಜದ ಎಲ್ಲ ವರ್ಗಗಳಿಗೂ ತೆರೆದಿಡಬೇಕು. ಯಾವ ಸಮುದಾಯಗಳಿಗೂ ನಿಷೇಧ ಹೇರಬಾರದು. ಶಿಕ್ಷಣವು ಎಲ್ಲ ವರ್ಗಗಳಿಗೂ ಮುಕ್ತವಾಗಿರಬೇಕು. ಜನಸಂಖ್ಯೆ ಆಧಾರಿತ ನೈಸರ್ಗಿಕ ಮತ್ತು ರಾಷ್ಟ್ರೀಯ ಸಂಪನ್ಮೂಲಗಳ ಸಮಾನ ಹಂಚಿಕೆಯಾಗಬೇಕು. ಜಾತಿ ವಿನಾಶವಾಗಬೇಕು. ಅಸ್ಪೃಶ್ಯತೆಯು ಅಳಿಯಬೇಕು. ಪುರೋಹಿತಶಾಹಿ ವ್ಯವಸ್ಥೆಯ ಶೋಷಣೆಯಿಂದ ಎಲ್ಲ ಶೂದ್ರಾತಿಶೂದ್ರ ಜಾತಿಗಳಿಗೆ ವಿಮೋಚನೆ ಸಿಗಬೇಕೆಂದು ಫುಲೆ ದಂಪತಿ ಪ್ರಯತ್ನಿಸಿದ್ದರು.

೧೮೫೦ರ ದಶಕದಲ್ಲಿ ಇಡೀ ವಿಶ್ವದಾದ್ಯಂತ ಹಲವಾರು ವಿಪ್ಲವಗಳು, ಸಂಘರ್ಷಗಳು, ರಾಜಕೀಯ ಚಳುವಳಿಗಳು ಹಾಗೂ ರಾಜಕೀಯ ಸ್ಥಾನಪಲ್ಲಟವಾಗುವಂತಹ ಘಟನೆಗಳು ಸಂಭವಿಸಿದವು. ೧೮೪೮ರಲ್ಲಿ ಕಾರ್ಲ್‌ಮಾರ್ಕ್ಸ್ ತನ್ನ ಕಮ್ಯುನಿಸ್ಟ್ ಪಾರ್ಟಿ ಪ್ರಣಾಳಿಕೆ ಪ್ರಕಟಿಸಿ ಸಮಾಜವಾದ ಮತ್ತು ಕಮ್ಯುನಿಸ್ಟ್ ವಾದಕ್ಕೆ ಪುಷ್ಟಿ ನೀಡಿದ ಸಂದರ್ಭ, ರೈಲ್ವೆ ಮತ್ತು ದೂರಸಂಪರ್ಕ ಮಾಧ್ಯಮಗಳನ್ನು ಪ್ರಾರಂಭಿಸಿದ್ದು, ಏಕರೂಪದ ಕಾನೂನು ವ್ಯವಸ್ಥೆ ಜಾರಿಗೊಳಿಸಿದ್ದು, ಸಿಪಾಯಿ ದಂಗೆ ಉಂಟಾದದ್ದು, ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಕೊನೆಗೊಂಡು ಬ್ರಿಟಿಷ್ ಸಾಮ್ರಾಜ್ಯದ ಆಡಳಿತ ಘಟಕವಾಗಿ ದೇಶ ರೂಪುಗೊಂಡು ಬ್ರಿಟಿಷ್ ಆಧಿಪತ್ಯಕ್ಕೆ ಒಳಗಾದದ್ದು ಇತ್ಯಾದಿ ನಿರ್ಣಾಯಕ ಘಟನೆಗಳು ಸಂಭವಿಸಿದ್ದು ಈಕಾಲ ಘಟ್ಟದಲ್ಲಿಯೇ ಇಂತಹ ಸನ್ನಿವೇಶದಲ್ಲಿಯೇ ಮಹಾರ ಅಸ್ಪೃಶ್ಯನೋರ್ವ ಬ್ರಿಟಿಷ್ ಸರಕಾರಕ್ಕೆ ಮನವಿ ಸಲ್ಲಿಸಿ ಶಾಲೆ ಸೇರಲು ಪ್ರವೇಶ ಕೋರಿದ ಘಟನೆಯು ಹಲವಾರು ರೀತಿಯಲ್ಲಿ ಬಹುದೊಡ್ಡ ಚರ್ಚೆಯನ್ನು ಭಾರತ ಮತ್ತು ಇಂಗ್ಲೆಂಡ್‌ನಲ್ಲಿ ಹುಟ್ಟುಹಾಕುವುದಕ್ಕೆ ಕಾರಣೀಭೂತವಾದ ಘಟನೆಯಾಗಿದ್ದಿತು.

ಧಾರವಾಡದಲ್ಲಿ ಶಾಲೆಗೆ ಸೇರಲು ಪ್ರವೇಶ ಕೋರಿ ಮಹಾರ ಹುಡುಗ ಸಲ್ಲಿಸಿದ್ದ ಮನವಿಯನ್ನು ಮುಂಬೈ ಸರ್ಕಾರವು ೧೮೫೬ರಲ್ಲಿ ನಿರಾಕರಿಸಿತು. ಆ ಮನವಿಯನ್ನು ತಿರಸ್ಕರಿಸುವಾಗ ಉಲ್ಲೇಖಿಸಿದ ಕಾರಣಗಳೆಂದರೆ (೧) 'ಮಹಾರ ಮನವಿದಾರನು ಅಸ್ಪಷ್ಟವಾದ ನ್ಯಾಯ ಹೊಂದಿರುವನೆನ್ನುವ ಬಗ್ಗೆ ಯಾವುದೇ ಸಂಶಯವಿಲ್ಲ; ಧಾರವಾಡದಲ್ಲಿ ಶಿಕ್ಷಣ ಹೊಂದುವ ವಿಧಾನಗಳು ಆತನಿಗೆ ಮಾರಕವಾಗುವ ಪೂರ್ವಗ್ರಹಗಳ ಬಗ್ಗೆ ಸರ್ಕಾರಕ್ಕೆ ನಂಬಿಕೆ ಇರುವುದು. ಅವುಗಳನ್ನು ಈ ಹಿಂದೆಯೇ ತೆಗೆದುಹಾಕಲಾಗಿರುವುದು (೨) ಸರ್ಕಾರವು ಶತಮಾನಗಳಿಂದ ರೂಢಿಗತವಾಗಿ ಬಂದಿರುವ ಪೂರ್ವಗ್ರಹಗಳೊಂದಿಗೆ ಒಬ್ಬ ವ್ಯಕ್ತಿಗಾಗಿ ಇಲ್ಲವೆ ಕೆಲವು ವ್ಯಕ್ತಿಗಳಿಗಾಗಿ ಹಸ್ತಕ್ಷೇಪ ಮಾಡಲು ಇಚ್ಛಿಸುವುದಿಲ್ಲ. ಏಕೆಂದರೆ ಅದರಿಂದಾಗಿ ಶಿಕ್ಷಣಕ್ಕೆ ಹೆಚ್ಚಿನ ಹಾನಿ ಉಂಟಾಗಲಿರುವುದು. ಮನವಿದಾರನ ಪ್ರತಿಕೂಲತೆಯು ಸರ್ಕಾರದಿಂದ ಹುಟ್ಟಿರುವಂತಹದ್ದಲ್ಲ, ಅರ್ಜಿದಾರನು ಸರ್ಕಾರವನ್ನು ಕೋರಿರುವಂತೆ ಸರ್ಕಾರವು ಮನವಿದಾರನ ಪರವಾಗಿ ರೂಢಿಗತ ಪೂರ್ವಗ್ರಹಗಳ ವಿರುದ್ಧ ಹಸ್ತಕ್ಷೇಪ ಮಾಡಲಾಗುವುದಿಲ್ಲ.'

ಹಂಟರ್ ಕಮಿಷನ್ ಈ ಘಟನೆಯು ನಡೆದ ೨೬ ವರ್ಷಗಳ ನಂತರ 'ಜಾತಿಯ ಆಧಾರದ ಮೇಲೆ ಸರ್ಕಾರಿ ಶಾಲೆ ಮತ್ತು ಕಾಲೇಜಿನಲ್ಲಿ ಯಾವುದೇ ವ್ಯಕ್ತಿಗೆ ಪ್ರವೇಶ ನಿರಾಕರಿಸಬಾರದೆನ್ನುವ ತತ್ವವನ್ನು ಸರ್ಕಾರವು ಸ್ವೀಕರಿಸಬೇಕು. ಈ ತತ್ವ ಅನುಷ್ಠಾನಗೊಳಿಸುವಾಗ ಅಗತ್ಯವಿರುವ ಎಲ್ಲಾ ಉಪಯುಕ್ತ ಕ್ರಮ ಕೈಗೊಳ್ಳುವುದು ಅವಶ್ಯವಾಗಿದೆ ಎಂದು ಪರಿಭಾವಿಸಲಾಗಿದೆ. ತತ್ವ ಅನುಷ್ಠಾನದಲ್ಲಿ ಬಲ ಪ್ರಯೋಗಿಸಬಾರದೆಂಬುದೇ ಆ ಎಚ್ಚರಿಕೆಯಾಗಿದೆ.'

ಈ ಘಟನೆಯಿಂದಾಗಿ ಪ್ರಭಾವಿತರಾದ ಡಾ॥ ಅಂಬೇಡ್ಕರರು ಧಾರವಾಡಕ್ಕೆ ಭೇಟ್ಟಿ ನೀಡಿದರು ಮಾತ್ರವಲ್ಲ, ಅವರು ಪ್ರಾರಂಭಿಸಿದ್ದ ಸ್ವಾಭಿಮಾನ ಹೋರಾಟವು ಬೆಳಗಾವಿ, ಹುಬ್ಬಳ್ಳಿ, ಗದಗ, ನಿಪ್ಪಾಣಿ, ಅಥಣಿ, ವಿಜಾಪುರಗಳಾದ್ಯಂತ ಪಸರಿಸಿತು. ಮುಂಬೈ ಪ್ರಾಂತ್ಯದ ಆಡಳಿತಕ್ಕೊಳಪಟ್ಟ ಈ ಭಾಗದಲ್ಲಿ ಡಾ॥ ಅಂಬೇಡರ್ಕರು ಹಲವಾರು ಸಾರ್ವಜನಿಕ ಸಭೆ–ಸಮಾರಂಭವೇರ್ಪಡಿಸಿ ದಮನಿತ ಅಸ್ಪೃಶ್ಯ ತಳಸಮುದಾಯಗಳನ್ನು ಸಂಘಟಿಸುವ ಕಾರ್ಯಕ್ಕೆ ಹೊಸ ರೂಪ ಸಿಕ್ಕಂತಾಯಿತು. ಬೆಳಗಾವಿ ಜಿಲ್ಲೆಯ ರಾಯಭಾಗದ ದೇವರಾಯ ರಾಮಜಿ ಇಂಗಳೆ, ಧಾರವಾಡದ ಬಲವಂತ, ಹನುಮಂತ, ವರಾಳೆ, ಬಸಣ್ಣ ಸಾಂಬ್ರಾಣಿ, ಗದುಗಿನ ಜಿವಾಜಿ ಮೂಸಾಜಿ ಬನಸೊಡೆ, ಆರ್. ಡಿ. ಚಲವಾದಿ, ಚಿಕ್ಕೋಡಿಯ ಸೀತಾರಾಮ, ನಾಮದೇವ ಶಿವತರಕರ, ವಿಜಾಪುರದ ಆಕಾಶರಂತಹ ಅಸ್ಪೃಶ್ಯ ತಳಸಮುದಾಯದ

ನಾಯಕರು ಡಾ॥ ಅಂಬೇಡ್ಕರರ ಪ್ರಭಾವಕ್ಕೊಳಗಾಗಿ ಉತ್ತರ ಕರ್ನಾಟಕದ ಈ ಭಾಗಗಳಲ್ಲಿ ಸ್ವಾಭಿಮಾನ ಚಳುವಳಿಯನ್ನು ಪ್ರಾರಂಭಿಸಿದರು. ಇದರ ಪರಿಣಾಮದಿಂದಾಗಿಯೇ ಬೇರೆ ಭಾಗಗಳಿಗಿಂತ ಇಲ್ಲಿಯ ಅಸ್ಪೃಶ್ಯ ತಳ ಸಮುದಾಯಗಳು ಮೊದಲ ಹಂತದಲ್ಲಿಯೇ ಶಿಕ್ಷಣ ಪಡೆಯುವಂತಾಯಿತು.

ಡಾ॥ ಅಂಬೇಡ್ಕರರು ಧಾರವಾಡದಲ್ಲಿ ಬೋರ್ಡಿಂಗ್ ಹಾಸ್ಟೆಲ್ ಪ್ರಾರಂಭಿಸಲು ೧೯೨೯ರಲ್ಲಿ ನೀಡಿದ್ದ ಕರೆಯ ಹಿನ್ನೆಲೆಯಲ್ಲಿ ಈ ಭಾಗದ ಅಸ್ಪೃಶ್ಯ ತಳಸಮುದಾಯಗಳ ಜನ ಉದಾರ ದೇಣಿಗೆ ನೀಡಿದರು. ಶಂಕರ ಭಿವಾಜಿ ಗಾವಡೆ, ಆರ್. ಡಿ. ಚಲವಾದಿ, ಜಿವಾಜಿ ಮೂಸಾಜಿ ಬನಸೊಡೆ, ಗದುಗಿನ ಸ್ಕೂಲ್ ಬೋರ್ಡ್ ಮೆಂಬರ್ ಆಗಿದ್ದ ರಾಜಪ್ಪ ಪರಸಪ್ಪ ತೇರದಾಳ, ಮಹಾದೇವ, ಬಸಪ್ಪ ಕತ್ತಿ, ಹಾಗೂ ಗದಗ ಮುನಿಸಿಪಾಲಿಟಿ ಮೆಂಬರ್ ನೀಲಪ್ಪ. ಯಲ್ಲಪ್ಪ ಬಲ್ಲೋಡಿ ಹಾಸ್ಟೆಲ್‌ಗೆ ದೇಣಿಗೆ ನೀಡಿರುವರು.

ವಿಧವೆಯರು ಮತ್ತು ತೀವ್ರ ಬಡತನದಲ್ಲಿ ಬದುಕುತ್ತಿದ್ದ ಜಯಾಬಾಯಿ ತುಳಸಿರಾಮ ಗಾಯಕವಾಡ ಹಾಗೂ ಆಯಬಾ ಬಾಯಿ, ರಾಘುಜಿ ಕದಂ ಅಸ್ಪೃಶ್ಯ ಜಾತಿ ಮಕ್ಕಳ ಶಿಕ್ಷಣ ಪ್ರಸಾರದ ಉದ್ದೇಶದಿಂದ ಧಾರವಾಡದಲ್ಲಿ ಪ್ರಾರಂಭಿಸಿದ್ದ ಬೋರ್ಡಿಂಗ್ ಹಾಸ್ಟೆಲ್ ನಡೆಸಲು ಎಂಟಾಣಿಯ ದೇಣಿಗೆ ನೀಡಿರುವರು. ತಮ್ಮ ಸ್ವಕಷ್ಟದ ಪರಿಸ್ಥಿತಿಯಲ್ಲಿಯೂ ವಿಧವೆಯರಾದ ಇವರೆಲ್ಲರ ತ್ಯಾಗವು ಅತ್ಯಂತ ಅನುಕರಣೀಯವಾದಂತಹದ್ದಾಗಿದೆ. ಅದರ ಹಿಂದಿನ ಪ್ರೇರಣೆಯೇ ಡಾ॥ ಅಂಬೇಡ್ಕರರಾಗಿದ್ದರು.



ಮಾತೋಶ್ರೀ ರಮಾಬಾಯಿಯವರು ಡಾ॥ ಅಂಬೇಡ್ಕರ ಅವರೊಂದಿಗೆ ಆಗಾಗ್ಗೆ ಧಾರವಾಡಕ್ಕೆ ಭೇಟಿ ನೀಡಿ 'ಬುದ್ಧ ರಕ್ಷಿತ' ವಸತಿ ಶಾಲೆಯಲ್ಲಿಯೇ ಇದ್ದ ತಮ್ಮ ಕೊಠಡಿಯಲ್ಲಿ ತಂಗುತ್ತಿದ್ದುದು ಕೂಡ ಧಾರವಾಡದ ಬಗ್ಗೆ ಅವರು ಹೊಂದಿದ್ದ ಕಾಳಜಿಯನ್ನು ತೋರಿಸುತ್ತದೆ. ಒಂದು ಬಾರಿ ರಮಾಬಾಯಿಯವರು ಧಾರವಾಡಕ್ಕೆ

## ಹುಬ್ಬಳ್ಳಿಯ ಸರ್ ಸಿದ್ಧಪ್ಪ ಕಂಬಳಿ ಹಾಗೂ ಡಾ॥ ಅಂಬೇಡ್ಕರ

ಹುಬ್ಬಳ್ಳಿಯ ಮುನಿಸಿಪಾಲಟಿಯಲ್ಲಿ ಸದಸ್ಯರೆಂದು ೧೯೧೭ರಲ್ಲಿ ಆಯ್ಕೆಯಾದ ಸರ್ ಸಿದ್ಧಪ್ಪ ಕಂಬಳಿಯವರು ೧೯೩೭ರ ಚುನಾವಣೆಯಲ್ಲಿ ಸೋಲುವವರೆಗೂ ಮುಂಬೈ ಶಾಸನ ಸಭೆಯ ಸದಸ್ಯರಾಗಿ ಹಾಗೂ ಶಿಕ್ಷಣ ಮತ್ತು ಅಬಕಾರಿ ಸಚಿವರಾಗಿ ಜನಪರವಾಗಿ ಕೆಲಸ ಮಾಡಿದವರು.

ಬ್ರಾಹ್ಮಣೇತರ ಚಳುವಳಿಯ ಹರಿಕಾರರಾಗಿದ್ದ ಸರ್ ಸಿದ್ಧಪ್ಪ ಕಂಬಳಿಯವರು ಶಿಕ್ಷಣದಿಂದ ವಂಚಿತರಾಗಿದ್ದ ಬಹುಸಂಖ್ಯಾತ ಹಿಂದುಳಿದ ಬ್ರಾಹ್ಮಣೇತರರಿಗೆ ಶಿಕ್ಷಣ ಸಿಗುವಂತೆ ಹಾಗೂ ಸಾರ್ವಜನಿಕ ಸೇವೆಗಳಲ್ಲಿ ಪ್ರಾತಿನಿಧ್ಯ ಸಿಗುವಂತೆ ಹೋರಾಡಿದರು. ಕೊಲ್ಹಾಪುರದ ಶಾಹೂ ಮಹಾರಾಜರು ನಡೆಸುತ್ತಿದ್ದ ಬ್ರಾಹ್ಮಣೇತರ ಚಳುವಳಿಗೆ ಮಾರುಹೋಗಿದ್ದರು. ಕಂಬಳಿಯವರು ತಮಿಳುನಾಡಿನ ಬ್ರಾಹ್ಮಣೇತರ ನಾಯಕ ಪೆರಿಯಾರ್‌ರೊಂದಿಗೆ ಸಂಪರ್ಕ ಹೊಂದಿದ್ದರು. ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಹಾಗೂ ಅವರ ಸೋದರ ಆರ್ಕಾಟ್ ಲಕ್ಷ್ಮಣಸ್ವಾಮಿ ಮೊದಲಿಯಾರ್‌ರೊಂದಿಗೆ ಸ್ನೇಹ ಹೊಂದಿದ್ದರು ಹಾಗೂ ಬ್ರಾಹ್ಮಣೇತರರ ವಿಮೋಚನೆಯ ಬಗ್ಗೆ ಅವರೊಂದಿಗೆ ಚಿಂತನ ಮಂಥನ ಮಾಡುತ್ತಿದ್ದರು. ಹುಬ್ಬಳ್ಳಿಯಲ್ಲಿ ಪ್ರಥಮ ಬ್ರಾಹ್ಮಣೇತರ ಪರಿಷತ್ತನ್ನು ಸಂಘಟಿಸಿದ್ದ ಸರ್ ಸಿದ್ಧಪ್ಪ ಕಂಬಳಿಯವರ ಆಹ್ವಾನವನ್ನು ಒಪ್ಪಿಕೊಂಡ ಮದ್ರಾಸಿನ ಸರ್. ಪಿ. ತ್ಯಾಗರಾಜ ಚೆಟ್ಟಿಯವರು ಪರಿಷತ್ ಅಧ್ಯಕ್ಷತೆ ವಹಿಸಿಕೊಳ್ಳಲು ಹಾಗೂ ಕೊಲ್ಹಾಪುರದ ಶಾಹೂ ಮಹಾರಾಜರು ಪರಿಷತ್ ಉದ್ಘಾಟಿಸಲು ಒಪ್ಪಿಕೊಂಡಿದ್ದರ ಹಿಂದೆ ಸರ್ ಸಿದ್ಧಪ್ಪ ಕಂಬಳಿಯವರ ಜನಪ್ರಿಯತೆ ಎದ್ದು ಕಾಣುವುದು.

ಉತ್ತರ ಕರ್ನಾಟಕದ ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದ ಹುಬ್ಬಳ್ಳಿಯಲ್ಲಿ ಬ್ರಾಹ್ಮಣೇತರ ಪರಿಷತ್ತು ಸ್ಥಾಪಿಸಿ ಅದರ ಮೂಲಕವೇ ಚುನಾವಣೆಯಲ್ಲಿ ಗೆದ್ದು ಶಿಕ್ಷಣ ಮಂತ್ರಿಯಾಗಿದ್ದ ಸರ್ ಸಿದ್ಧಪ್ಪ ಕಂಬಳಿಯವರು ಡಾ॥ ಅಂಬೇಡ್ಕರರಿಗೆ ಮುಂಬೈಯ ಸರಕಾರಿ ಕಾನೂನು ಕಾಲೇಜಿನಲ್ಲಿ ಪ್ರಾಧ್ಯಾಪಕ ಹುದ್ದೆಗೆ ನೇಮಕ ಮಾಡಿರುವುದು ಅತ್ಯಂತ ವಿಶಿಷ್ಟವಾದ ಘಟನೆಯಾಗಿರುವುದು. ಡಾ॥ ಅಂಬೇಡ್ಕರರು ಕಾನೂನು ಕಾಲೇಜಿನಲ್ಲಿ ಲೆಕ್ಚರರ್ ಹುದ್ದೆಗೆ ನೇಮಕ ಮಾಡುವಂತೆ ಸರ್ ಸಿದ್ಧಪ್ಪ ಕಂಬಳಿಯವರನ್ನು ಕೋರಿದ್ದರು. ಆದರೆ ಡಾ॥ ಅಂಬೇಡ್ಕರರನ್ನು ನೇರವಾಗಿ ಪ್ರಾಧ್ಯಾಪಕ ಹುದ್ದೆಗೆ ನೇಮಿಸಿದ ಸರ್ ಸಿದ್ಧಪ್ಪ ಕಂಬಳಿಯವರು ಬ್ರಾಹ್ಮಣೇತರರ ನಾಯಕರೆನ್ನುವುದನ್ನು ಸಾಬೀತುಪಡಿಸಿರುವರು.

ಡಾ॥ ಅಂಬೇಡ್ಕರರು ದುಂಡುಮೇಜಿನ ಪರಿಷತ್ತಿನಲ್ಲಿ ಹೋರಾಟ ಮಾಡಿ ಗಳಿಸಿದ್ದ ಪ್ರತ್ಯೇಕ ಚುನಾಯಿಕಗಳು ಮತ್ತು ಕೋಮುವಾರು ಪ್ರಾತಿನಿಧ್ಯದ ವಿರುದ್ಧ ಮಹಾತ್ಮ ಗಾಂಧೀಜಿಯವರು ಯರವಾಡ ಜೈಲಿನಲ್ಲಿ ಉಪವಾಸ ಸತ್ಯಾಗ್ರಹ ನಡೆಸಿದರು. ಇದರಿಂದ ಹಿಂದೂ ಧರ್ಮ ಒಡೆದು ಚೂರು ಚೂರಾಗುವುದೆನ್ನುವ ಭಯದಿಂದ ಗಾಂಧೀಜಿಯವರು ಉಪವಾಸ ಕೈಕೊಂಡು ಪ್ರತ್ಯೇಕ ಚುನಾಯಿಕಗಳನ್ನು ಬಿಡಬೇಕೆಂದು ಒತ್ತಾಯಿಸಿದ್ದರು. ಗಾಂಧೀಜಿಯವರ ಪ್ರಾಣರಕ್ಷಣೆಯ ಹೊಣೆಯ ಜೊತೆಗೆ ಅಸಂಖ್ಯಾತ ದಮನಿತ ಅಸ್ಪೃಶ್ಯ ತಳ ಜಾತಿಗಳ ರಾಜಕೀಯ ಭವಿಷ್ಯವು ಸೇರಿಕೊಂಡಿದ್ದಿತು. ಡಾ॥ ಅಂಬೇಡ್ಕರರ ಮೇಲೆ ಅಗಾಧ ಒತ್ತಡ ಹೇರಲಾಯಿತು. ಗಾಂಧೀಜಿ ಜೀವಕ್ಕೆ ಅಪಾಯವಾದರೆ ಹಳ್ಳಿ ಹಳ್ಳಿಗಳಲ್ಲಿ ಹರಿದು ಹಂಚಿಹೋಗಿರುವ ಅಸ್ಪೃಶ್ಯರ ಬದುಕು ನಿರ್ನಾಮವಾಗುವುದೆನ್ನುವ ಸಂಕಟ, ಇನ್ನೊಂದೆಡೆ ಗಾಂಧೀಜಿಯವರ ಬೇಡಿಕೆ ಒಪ್ಪಿದರೆ ಅಸ್ಪೃಶ್ಯರ ಹಿತಾಸಕ್ತಿಗೆ ತಿಲಾಂಜಲಿ ಇಡಬೇಕಾಗಬಹುದೆನ್ನುವ ಐತಿಹಾಸಿಕ ಸತ್ಯದ ಅಲುಗಿನ ಮೇಲೆ ಡಾ॥ ಅಂಬೇಡ್ಕರ ನಡೆಯಬೇಕಾದ ಪರಿಸ್ಥಿತಿ, ಇಂತಹ ಪರಿಸ್ಥಿತಿಯಲ್ಲಿ ಡಾ॥ ಅಂಬೇಡ್ಕರರ ನೆರವಿಗೆ ಬಂದವರು ಸರ್ ಸಿದ್ಧಪ್ಪ ಕಂಬಳಿಯವರು. ಗಾಂಧೀಜಿಯವರ ಪ್ರಭಾವದಿಂದ ದೂರವೇ ಉಳಿದಿದ್ದ ಸರ್ ಸಿದ್ಧಪ್ಪ ಕಂಬಳಿಯವರು ಡಾ॥ ಅಂಬೇಡ್ಕರರಿಗೆ ನೈತಿಕ ಬೆಂಬಲವನ್ನು ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನೀಡಿದ್ದರೆಂಬುದು ಹಾಗೂ ಪೂನಾ ಒಪ್ಪಂದದ ಐತಿಹಾಸಿಕ ತೀರ್ಮಾನವನ್ನು ಡಾ॥ ಅಂಬೇಡ್ಕರ ಅವರು ತೆಗೆದುಕೊಳ್ಳುವ ಮುಂಚೆ ಸರ್ ಸಿದ್ಧಪ್ಪ ಕಂಬಳಿ ಅವರೊಂದಿಗೆ ಸುದೀರ್ಘವಾಗಿ ಸಮಾಲೋಚಿಸಿದ್ದರು ಎಂಬುದರಿಂದ ಸರ್ ಸಿದ್ಧಪ್ಪ ಕಂಬಳಿಯವರು ನಿರ್ವಹಿಸಿದ ಪಾತ್ರದ ಅರಿವು ಉಂಟಾಗುವುದು.

ಬಂದಾಗ ಬೋರ್ಡಿಂಗ್ ಹಾಸ್ಟೆಲ್‌ನಲ್ಲಿ ಮಕ್ಕಳಿಗೆ ಊಟ ಮಾಡುವುದಕ್ಕೇನೂ ಇಲ್ಲದ್ದನ್ನು ನೋಡಿ ತಮ್ಮ ಒಡವೆಗಳನ್ನು ಮಾರಿ ಅದರಿಂದ ಬಂದ ಹಣದಿಂದ ಮಕ್ಕಳಿಗೆ ಊಟ ಮಾಡಿಸಿ ಸಂಭ್ರಮಪಟ್ಟಿದ್ದು ಆ ತಾಯಿಯ ಮಾತೃವಾತ್ಸಲ್ಯಕ್ಕೆ ಸಾಕ್ಷಿಯಾಗಿರುವುದು.

ಡಾ॥ ಅಂಬೇಡ್ಕರರು ತಮ್ಮ ಹೋರಾಟದ ಆರಂಭಿಕ ದಿನಗಳಲ್ಲಿ ಧಾರವಾಡ ದೊಂದಿಗೆ ಹೊಂದಿದ್ದ ನಂಟು ಅವರ ಕೊನೆಯುಸಿರಿರುವವರೆಗೂ ಮುಂದುವರಿದಿದ್ದು ವಿಶೇಷವಾದ ಸಂಗತಿಯಾಗಿರುವುದು. ದುಂಡುಮೇಜಿನ ಪರಿಷತ್ತಿನಲ್ಲಿ ಸತತ ಹೋರಾಟ ನಡೆಸಿ ರಾಜಕೀಯ ಪ್ರಾತಿನಿಧ್ಯ ಗಳಿಸುವ ವಿಚಾರದ ಮೊಳಕೆಯೊಡೆದದ್ದೇ ಧಾರವಾಡದ ಮಣ್ಣಿನಲ್ಲಿ. ಅವರು ೧೯೨೯ರಲ್ಲಿ ಧಾರವಾಡದಲ್ಲಿ ಮಾಡಿದ ಭಾಷಣ ಐತಿಹಾಸಿಕವಾದುದು. ಈ ಭಾಷಣದಲ್ಲಿ (೧) ಕೇವಲ ಮೇಲ್ಜಾತಿಯವರು ವ್ಯಕ್ತಪಡಿಸುವ ಸಹಾನೂಭೂತಿ ಮತ್ತು ಅನುಕಂಪವು ದಮನಿತ ತಳಸಮುದಾಯಗಳ ಏಳ್ಗೆಯನ್ನು ಮಾಡಲು ಸಾಧ್ಯವಿಲ್ಲ, (೨) ಶೋಷಿತ ತಳಸಮುದಾಯಗಳು ತಮ್ಮ ಸ್ವ ವಿಮೋಚನೆಗೆ ಮುಂದಾಗಬೇಕು ಹಾಗೂ ಅದಕ್ಕಾಗಿ ತಮ್ಮ ಶಕ್ತಿ-ಸಾಮರ್ಥ್ಯ ವೃದ್ಧಿಸಿಕೊಳ್ಳಲು ಶಿಕ್ಷಣ ಪಡೆಯಬೇಕು, (೩) ಶಿಕ್ಷಣವನ್ನು ಅಸ್ಪೃಶ್ಯರಿಗೆ ನೀಡಲು ಸ್ವ ಸಹಾಯ ಪದ್ಧತಿಯನ್ನು ಅನುಸರಿಸಬೇಕು ಹಾಗೂ ತಮ್ಮ ಮೂಲಭೂತ ಸೌಕರ್ಯವನ್ನು ಸ್ವ ಸಹಾಯದ ಮೂಲಕ ಮಾಡಿಕೊಳ್ಳಬೇಕು, (೪) ಮೇಲ್ಜಾತಿಗಳ ಸಹಾನುಭೂತಿ ಮತ್ತು ಸಹಭೋಜನದಿಂದ ಆಮೂಲಾಗ್ರ ಬದಲಾವಣೆ ಅಸ್ಪೃಶ್ಯರ ಬದುಕಿನಲ್ಲಿ ತರಲು ಸಾಧ್ಯವಿಲ್ಲ. ಅದರ ಸಾಕಾರಕ್ಕಾಗಿ ರಾಜಕೀಯ ಅಧಿಕಾರವು ಅನಿವಾರ್ಯ. ರಾಜಕೀಯ ಅಧಿಕಾರ ಪಡೆದುಕೊಳ್ಳಲು ಸಂಘಟಿತ ಹೋರಾಟವೊಂದೇ ನಮಗೆ ಉಳಿದಿರುವ ಏಕೈಕ ಮಾರ್ಗವೆಂದು ಡಾ॥ ಅಂಬೇಡ್ಕರರು ಅಭಿಪ್ರಾಯಪಟ್ಟಿರುವರು.

ಈ ದೃಷ್ಟಿಯಿಂದ ಡಾ॥ ಅಂಬೇಡ್ಕರರು ಧಾರವಾಡರೊಂದಿಗೆ ಹೊಂದಿದ್ದ ಅವಿನಾಭಾವ ಸಂಬಂಧದಿಂದಾಗಿ ಉತ್ತರಕರ್ನಾಟಕದ ಧಾರವಾಡ, ಬೆಳಗಾವಿ, ವಿಜಾಪುರ ಜಿಲ್ಲೆಗಳಲ್ಲಿ ಸ್ವಾಭಿಮಾನ ಚಳುವಳಿ ಪ್ರಸಾರಗೊಂಡಿತು. ಮಾತ್ರವಲ್ಲ, ಬೇರೆ ಭಾಗಗಳಿಗೆ ಹೋಲಿಸಿದರೆ ಇಲ್ಲಿಯ ಅಸ್ಪೃಶ್ಯರು ಬೇರೆಯವರಿಗಿಂತ ಮುಂಚೆಯೇ ಶಿಕ್ಷಣ ಪಡೆದುಕೊಳ್ಳಲು ಸಹಾಯವಾಯಿತೆಂಬುದು ವಾಸ್ತವ.

# ಧಾರವಾಡದಲ್ಲಿ ಡಾ॥ ಬಿ. ಆರ್. ಅಂಬೇಡ್ಕರರ ಭಾಷಣ

## (೨೮ ನೇ ಡಿಸೆಂಬರ್, ೧೯೨೯)

ಸಭಾ ಸದರೆ,

ತನ್ನ ಅರ್ಹತೆಯ ಬಗ್ಗೆ ತಾನೇ ನಿರ್ಧರಿಸುವುದು ಯಾವ ವ್ಯಕ್ತಿಗೂ ಸಾಧ್ಯವಿಲ್ಲದ ಕೆಲಸ; ಆದರೆ ಜನರು ಮಾತ್ರ ಯಾವುದೇ ವ್ಯಕ್ತಿಯ ಅರ್ಹತೆ ಗುರುತಿಸಬಲ್ಲರು. ನನ್ನ ಉನ್ನತ ವ್ಯಾಸಂಗವನ್ನು ಮುಗಿಸಿ ಇಂಗ್ಲೆಂಡಿನಿಂದ ಭಾರತಕ್ಕೆ ಹಿಂತಿರುಗಿದಾಗಿನಿಂದ ಕೆಲವು ಜನ ನನ್ನನ್ನು ಸನ್ಮಾನಿಸಬೇಕೆಂದು ಪ್ರಯತ್ನಿಸುತ್ತಲೇ ಇದ್ದರು. ಆದರೆ ನಾನು ಅದನ್ನು ನಿರಾಕರಿಸಿದೆ. ಅವರ ಇಚ್ಛೆಗೆ ಅನುಸಾರವಾಗಿ ನಾನು ಸನ್ಮಾನಕ್ಕೆ ಒಪ್ಪಿಕೊಳ್ಳಲಿಲ್ಲ. ಸನ್ಮಾನ ಪಡೆಯಲು ವ್ಯಕ್ತಿಯು ಅರ್ಹನಾಗಿರುವುದು ಅವಶ್ಯವೆಂಬುದೇ ನನ್ನ ಬಲವಾದ ನಂಬಿಕೆಯಾಗಿದೆ; ಕೇವಲ ಶಿಕ್ಷಣದಿಂದ ಮಾತ್ರ ಅರ್ಹತೆ ಬರುತ್ತದೆ ಎಂಬುದನ್ನು ನಾನು ಒಪ್ಪಲಾರೆ.

ವ್ಯಕ್ತಿಯು ಜಾಣನಾದರೆ ಮಾತ್ರ ಸಾಲದು ಆತ ಸಮಾಜಕ್ಕೆ ಒಳಿತುಂಟುಮಾಡು ವಂತಹವನಾಗಬೇಕು. ಅದು ಸತ್ಯವಾದ ಮಾತಾಗಿದೆ. ಜಾಣ ವ್ಯಕ್ತಿಗಳು ಎಲ್ಲ ರೀತಿಯ ದುರಾಚಾರ, ದುರ್ಗುಣಗಳನ್ನು ಹೊಂದಿರಬಹುದು; ಆತ ಓರ್ವ ಕಳ್ಳನಾಗಿರಬಹುದು, ವ್ಯಭಿಚಾರಿಯಾಗಿರಬಹುದು, ಅನೈತಿಕತೆಯಿಂದ ಕೂಡಿರುವಂತಹನಾಗಿರಬಹುದು ಇತ್ಯಾದಿ, ಹಲವಾರು ಶತಮಾನಗಳಿಂದ ಅಸ್ಪೃಶ್ಯರೊಂದಿಗೆ ಮೇಲ್ಜಾತಿಯ ಮುಂದು ವರಿದ, ಸುಶಿಕ್ಷಿತ ಮತ್ತು ಬುದ್ಧಿವಂತರು ಹೇಗೆ ನಡೆದುಕೊಳ್ಳುತ್ತಾರೆಂಬುದು ನಿಮಗೆಲ್ಲರಿಗೂ ಅರಿವಿರುವಂತಹದೆ. ನಮ್ಮ ಸಮಾಜದಿಂದ ಅಸ್ಪೃಶ್ಯತೆಯು ಯಾವಾಗ ನಿರ್ನಾಮ ವಾಗುವುದೋ ಯಾರಿಗೂ ತಿಳಿಯದಂತಹ ಖಚಿತವಾದ ಸಂಗತಿಯಾಗಿರುವುದು.

ಅಸ್ಪೃಶ್ಯತೆಯನ್ನು ನಿರ್ನಾಮಗೊಳಿಸುವ ಅಥವಾ ನಿರ್ಮೂಲನೆ ಮಾಡುವುದಕ್ಕಾಗಿ ಹಲವಾರು ಮಾರ್ಗಗಳಿವೆ, ಅವುಗಳಲ್ಲಿ ಅತ್ಯಂತ ಮಹತ್ವದ್ದಾಗಿರುವಂತಹದೆಂದರೆ ಅದು ರಾಜಕೀಯ ಅಧಿಕಾರವನ್ನು ಪಡೆಯುವಂಥದ್ದಾಗಿದೆ. ನಿಮ್ಮ ಪರಿಸ್ಥಿತಿಯನ್ನು ಸುಧಾರಿಸುವುದಕ್ಕೋಸ್ಕರ ಮೇಲ್ಜಾತಿಯ ಸ್ಪೃಶ್ಯ ಹಿಂದೂಗಳು ನಿಮ್ಮೊಂದಿಗೆ ಒಡನಾಟ ಇಟ್ಟುಕೊಂಡಿರುವುದನ್ನು ನಾನು ಗಮನಿಸಿದ್ದೇನೆ. ಕೆಲವು ಅಧಿಕಾರಿಗಳು ಕೂಡ ತಮ್ಮ ಸಹಾನುಭೂತಿಯನ್ನು ವ್ಯಕ್ತಪಡಿಸುವರು. ಅದೇ ವೇಳೆಗೆ ತಮ್ಮ ಕೊಳಕು ನಿವಾರಿಸಿಕೊಂಡು ಶುಚಿತ್ವ ಕಾಪಾಡಿಕೊಳ್ಳಲು ಮತ್ತು ಅಭಿವೃದ್ಧಿ ಹೊಂದಲು ಸೂಚ್ಯವಾಗಿ ಹೇಳುವರು. ಮುಂದುವರಿದು ತಮ್ಮ ಬದುಕು ಸುಧಾರಿಸಿಕೊಳ್ಳಲು ಮತ್ತು ವೈಚಾರಿಕ ದೃಷ್ಟಿಕೋನವನ್ನು ಅಭಿವೃದ್ಧಿಪಡಿಸಿಕೊಳ್ಳಲು ತಿಳಿಸುವರು. ನಾನು ತಪ್ಪು ಅಥವಾ ಸರಿಯಾದುದಲ್ಲ ಎಂದು ಹೇಳುವುದಿಲ್ಲ. ಅವರು ಸರಿಯಾಗಿಯೇ ಹೇಳಿರುವರು. ಆದರೆ ರಾಜಕೀಯ ಅಧಿಕಾರವಿಲ್ಲದೇ ಆ ಎಲ್ಲ ಸಂಗತಿಗಳು ಸಾಧ್ಯವಿಲ್ಲ ಎಂಬುದನ್ನು ನೀವು ದಯವಿಟ್ಟು ನೆನಪಿಟ್ಟುಕೊಳ್ಳಿ. ರಾಜಕೀಯ ಅಧಿಕಾರವನ್ನು ನೀವು ಪಡೆದುಕೊಂಡ ತಕ್ಷಣ ಅವು ನಿಮ್ಮ ಬದುಕನ್ನು ಹಿಂಬಾಲಿಸುತ್ತವೆ. ರಾಜಕೀಯ ಅಧಿಕಾರವಿಲ್ಲದೆಯೇ ಅವೆಲ್ಲವೂ ಕೇವಲ ಸುಧಾರಣೆ ಎನಿಸಿಕೊಳ್ಳುವುವು. ರಾಜಕೀಯ ಅಧಿಕಾರವನ್ನು ಪಡೆದುಕೊಂಡ ನಂತರವೇ ನೈಜವಾದ ಮತ್ತು ವಾಸ್ತವವಾದ ಬದಲಾವಣೆ ಬರುವುದು. ಇತ್ತೀಚೆಗೆ ಸ್ಟೂವರ್ಟ್ ಸಮಿತಿಯ ಎದುರು ನಮ್ಮ ಅಹವಾಲು ಸಲ್ಲಿಸುವ ಸಂದರ್ಭದಲ್ಲಿ 'ಜಂಗಲಿ ಆದಿವಾಸಿ'ಗಳೆಂದು ಕರೆಸಿಕೊಳ್ಳುವ ಸಮುದಾಯದವರ ಕುರಿತು ತಿಳಿದುಕೊಂಡೆವು. ನಮ್ಮ ಮತ್ತು ಅವರ ನಡುವಿನ ವ್ಯತ್ಯಾಸವೇನು ? ಉಡುಪು-ವಸ್ತ್ರಗಳೇ ನಮ್ಮ ಅವರ ನಡುವಿನ ನಿಶ್ಚಿತ ವ್ಯತ್ಯಾಸ. ಏನೇ ಬಂದರೂ ಕೂಡ ತಮ್ಮ ವೇಷ-ಭೂಷಣಗಳನ್ನು ಬದಲಿಸಲು ಸುತಾರಾಂ ಒಪ್ಪದಂತಹ ಆದಿವಾಸಿಗಳಾಗಿರುವರು. ಅವರ ವಿಶಿಷ್ಟ ವೇಷ-ಭೂಷಣಗಳಿಂದ ಅವರು ವಿಶೇಷವಾಗಿ ಗೋಚರಿಸುತ್ತಾರೆ. ಆ ವಿಶಿಷ್ಟ ವೇಷ-ಭೂಷಣ ಹಾಗೂ ಉಡುಪುಗಳಿಂದಾಗಿಯೇ ಅವರು ಅಭಿವೃದ್ಧಿ ಹೊಂದುವುದಿಲ್ಲ ಎಂಬುದು ಕೂಡ ಖಚಿತವಾದ ಸಂಗತಿಯಾಗಿದೆ. ಯಾವುದೇ ರೀತಿಯ ಏಳ್ಗೆಗೆ ಮತ್ತು ಅಭಿವೃದ್ಧಿಗೆ ಅವು ನಿರರ್ಥಕವಾದವುಗಳಾಗಿವೆ. ಆ ಎಲ್ಲ ಆದಿವಾಸಿಗಳು, ಹಿಂದೂ ಸಮಾಜ ಮತ್ತು ಅಸ್ಪೃಶ್ಯರ ನಡುವೆ ಸಾಕಷ್ಟು ವ್ಯತ್ಯಾಸಗಳಿರುವುವು. ಸಂಪ್ರದಾಯಗಳು ಮತ್ತು ರೀತಿ-ರಿವಾಜುಗಳು ವ್ಯತ್ಯಾಸ ಹೊಂದಿರುವವು.

ಸರಕಾರವು ಅಸ್ಪೃಶ್ಯರ ಸುಧಾರಣೆಗಾಗಿ ಯಾವುದೇ ಕಾನೂನುಗಳನ್ನು ಮಾಡದಿರುವುದಕ್ಕೆ ಕಾರಣ ಅದು ಸ್ಪೃಶ್ಯರ ಆಕ್ರೋಶ ಮತ್ತು ಕ್ರೋಧ ಆಹ್ವಾನಿಸಿ ಕೊಳ್ಳಲು ಸಿದ್ಧವಿಲ್ಲದಿರುವುದೇ ಆಗಿದೆ. ರಾಜಕೀಯ ಅಧಿಕಾರವು ನಮ್ಮ ಕೈಯಲ್ಲಿ ಬರದ ಹೊರತು ಯಾವುದೇ ಸುಧಾರಣ ಕ್ರಮಗಳು ಅರ್ಥಪೂರ್ಣವಾಗಿರುವುದಿಲ್ಲ. ರಾಜಕೀಯ ಅಧಿಕಾರ ಪ್ರಾಪ್ತಿಗಾಗಿ ನಾವು ಹೋರಾಟ ಮಾಡಬೇಕಿರುವುದು ಮೇಲ್ಜಾತಿಯ ಜನರು ನಡೆಸುವ ದೌರ್ಜನ್ಯಗಳು ಮತ್ತು ಶೋಷಣೆಯ ವಿರುದ್ಧ ನಾವು ಸಂಘರ್ಷಿಸುವುದು ಕೂಡ ಅಗತ್ಯವಾಗಿರುವುದು ಮತ್ತು ಆ ನಿಟ್ಟಿನಲ್ಲಿ ಎಲ್ಲ ರೀತಿಯ ಪ್ರಯತ್ನಗಳನ್ನು ನಾವು ಮಾಡುವುದು ಅವಶ್ಯಕವಾಗಿದೆ. ಕೊಂಕಣ ಪ್ರದೇಶದಲ್ಲಿರುವ ಗ್ರಾಮಗಳಲ್ಲಿ ಅಸ್ಪೃಶ್ಯರು ಮೇಲ್ಜಾತಿಯವರ ಮರ್ಜಿ (ಮುಲಾಜು) ಯನ್ನು ಕಾಯಬೇಕಾದ ಪರಿಸ್ಥಿತಿ ಇದೆ. ಗ್ರಾಮದ ಮುಖಂಡನಾದ ಪಟೇಲನ ಆಣತಿ ಅವರಿಗೆ ಇರಲೇಬೇಕು. ಆತ ಕೋಪಿಸಿಕೊಂಡರೆ ಅಥವಾ ಇರುಸುಮುರುಸಿ ಗೊಳಗಾದರೆ ಆತ ಮತ್ತು ಆತನ ಗೂಂಡಾಗಳು ಮತ್ತು ರೌಡಿಗಳು ಅಸ್ಪೃಶ್ಯರನ್ನು ಹಿಂಸಿಸಿ ಹಿಪ್ಪಿಹಿಂಡಿ ಮಾಡಿ ಬಿಸಾಕುವರು. ಅಸ್ಪೃಶ್ಯರನ್ನು ಬಹಿಷ್ಕಾರಕ್ಕೆ ಒಳಪಡಿಸ ಲಾಗುವುದು. ತಮ್ಮ ಸರ್ವ ಅಭ್ಯುದಯಕ್ಕಾಗಿ ಸಾಮಾಜಿಕ ಚಳುವಳಿಯನ್ನು ಸೇರುವುದಕ್ಕಾಗಿ ಅಸ್ಪೃಶ್ಯರು ಭಯಭೀತರಾಗಿರುವರು. ಇಂದಿಗೂ ಅಸ್ಪೃಶ್ಯರ ಪರಿಸ್ಥಿತಿಯು ಅತ್ಯಂತ ಚಿಂತನಾಜನಕವಾಗಿರುವುದು.

ಭಾರತದಲ್ಲಿ ಬ್ರಿಟಿಷ್ ಆಡಳಿತವಿರುವವರೆಗೆ ಅಸ್ಪೃಶ್ಯರ ಏಳ್ಗೆ ಮತ್ತು ಅಭ್ಯುದಯಕ್ಕಾಗಿ ಯಾವುದೇ ಕಾನೂನುಗಳು ಜಾರಿಯಾಗದಂತಹ ಕಠಿಣ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗಳಿರುವವು. ನಮ್ಮಷ್ಟಕ್ಕೆ ನಾವೇ ನಮ್ಮ ಅಭ್ಯುದಯಕ್ಕಾಗಿ ಸ್ವರಾಜ್ ಬೇಡಿಕೆಯನ್ನು ಸರಕಾರದ ಮುಂದಿಡಬೇಕಾಗಿರುವುದು

ಪರಿಸ್ಥಿತಿಯು ಒತ್ತಡದಿಂದ ಕೂಡಿರುವುದೆಂದು ನನ್ನ ಖಚಿತವಾದ ಅಭಿಪ್ರಾಯ ವಾಗಿರುವುದು. ಅಸ್ಪೃಶ್ಯರಿಗಾದರೂ ಈ ದೇಶಕ್ಕೆ ಸ್ವರಾಜದ ಅವಶ್ಯಕತೆ ಇರುವುದು. ಸ್ವರಾಜಕ್ಕಾಗಿ ಸಂವಿಧಾನ ರಚನೆಯ ಪ್ರಕ್ರಿಯೆ ಜಾರಿಯಲ್ಲಿರುವುದು. ಅದರಲ್ಲಿ ನಮ್ಮ ಜನರಿಗೆ ಅವರ ಪಾಲು ದೊರೆಯಬೇಕು. ಆದರೆ ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಸಂಧಾನ ಮತ್ತು ವಿಚಾರ ವಿನಿಮಯ ನೋಡಿದರೆ ಅದರಿಂದ ಏನೋ ಆಗುವ ಸಂಭವವೇ ಹೆಚ್ಚಾಗಿರುವುದು. ಬ್ರಿಟಿಷ್ ಸರಕಾರವನ್ನು ನಾನು ನಂಬುವುದೇ ಇಲ್ಲ. ಅದನ್ನು ನಿಮ್ಮ ಮುಂದೆ ನಾನು ಸ್ಪಷ್ಟಪಡಿಸಲೇಬೇಕಿದೆ. ನಮ್ಮ ಏಳ್ಗೆಗಾಗಿ ಮತ್ತು ಸುಧಾರಣೆಗಾಗಿ ಈ ಸರಕಾರವು ಏನನ್ನು ಮಾಡುವುದಿಲ್ಲ. ನಾವು ನಮ್ಮಷ್ಟಕ್ಕೆ ನಾವೇ ಪರಸ್ಪರ ಸಹಾಯ ಪಡೆಯಬೇಕಿದೆ. ಸ್ವ ಸಹಾಯವು ಪರಮವಾದುದು.

ತತ್ವಾದರ್ಶಗಳು ಮತ್ತು ನೀತಿ ನಿಯಮಗಳನ್ವಯ ನಡೆದುಕೊಳ್ಳುವ ಮತ್ತು ಕಾರ್ಯ ನಿರ್ವಹಿಸುವಂತಹ ಸರ್ಕಾರವು ಬ್ರಿಟಿಷ್ ಸರ್ಕಾರವಾಗಿರುವುದಿಲ್ಲ. ಅವರು ಪಕ್ಕಾ ವ್ಯಾಪಾರಸ್ಥರಾಗಿರುವರು; ಯಾರೂ ಎಷ್ಟೇ ಕೂಗಿದರೂ, ಹೋರಾಟ ಮಾಡಿದರೂ ಮತ್ತು ಬೇಡಿಕೆ ಈಡೇರಿಕೆಗಾಗಿ ಹಗಲಿರುಳು ಸಂಘರ್ಷಿಸಿದರೂ ಅದಕ್ಕೆ ಸೊಪ್ಪು ಹಾಕದೇ ಯಾರಿಗೂ ಸ್ವರಾಜ್‌ವನ್ನು ಬ್ರಿಟಿಷರು ದಯಪಾಲಿಸುವುದಿಲ್ಲ. ತಮ್ಮ ಬ್ರಿಟಿಷ್ ಸಾಮ್ರಾಜ್ಯವು ಸುರಕ್ಷಿತವಾಗಿದೆಯೋ ಇಲ್ಲವೆಂಬುದನ್ನು ಅದು ಪ್ರಥಮದಲ್ಲಿ ನೋಡುವುದು, ಅವರು ತಮ್ಮ ಹಿತಾಸಕ್ತಿಗೆ ಅಡೆತಡೆ ಒಡ್ಡುವವರು ಯಾರಿದ್ದಾರೋ ಅಂತಹವರನ್ನು ಮಾತ್ರ ಸಂತುಷ್ಟಿಪಡಿಸುವರು. ನಮ್ಮ ಆಂತರಿಕ ಸಮಸ್ಯೆಗಳು ಮತ್ತು ಸಂಘರ್ಷಗಳ ಬಗ್ಗೆ ಅವರು ಕಿಂಚಿತ್ತೂ ಯೋಚಿಸುವುದಿಲ್ಲ. ನಿಮ್ಮ ಮತ್ತು ನನ್ನ ಶಾಂತಿಗಾಗಿ ಅವರು ಸ್ವರಾಜ್‌ವನ್ನು ನೀಡುವುದಿಲ್ಲ. ಡೊಮಿನಿಯನ್ ಅಂತಸ್ತಿನ ಬಗ್ಗೆ ಚೌಕಾಶಿಗಳು ನಡೆಯುತ್ತಲೇ ಇವೆ. ಅದರಲ್ಲಿ ನಮ್ಮನ್ನು ಅವರು ಸಂಪರ್ಕಿಸಿ ಇರುವುದಿಲ್ಲ. ಮಹಾತ್ಮಾ ಗಾಂಧಿ, ಸಪ್ರೂ, ನೆಹರು ಮತ್ತು ಜಿನ್ನಾ ಅವರೊಂದಿಗೆ ಬ್ರಿಟಿಷ್ ಸರ್ಕಾರವು ಚೌಕಾಶಿ ವ್ಯವಹಾರ ನಡೆಸುತ್ತಿರುವುದು. ಈ ಎಲ್ಲ ನಾಯಕರು ನಮ್ಮ ಹಿತಾಸಕ್ತಿಗಳ ಬಗ್ಗೆ ಯಾವ ನಿಲುವು ತಳೆಯಲು ಸಾಧ್ಯವೆಂಬುದೇ ಎಲ್ಲರ ಊಹೆಗೆ ಬಿಟ್ಟ ಸಂಗತಿಯಾಗಿರುವುದು. ಆದುದರಿಂದ ಪ್ರತ್ಯೇಕವಾಗಿಯೇ ನಾವು ಸ್ವರಾಜ್‌ದ ಬೇಡಿಕೆಯನ್ನಿಡುವುದು ಅಗತ್ಯವಾಗಿರುವುದು. ಆ ಸ್ವರಾಜ್‌ವನ್ನು ಅನುಭವಿಸುವ ಅರ್ಹತೆಗಳನ್ನು ನಾವು ಹೊಂದಿರಬೇಕಾಗುವುದು. ಆ ಸ್ವರಾಜ್ಯದ ಫಲಗಳನ್ನು ಉಪಭೋಗಿಸಲು ನಾವು ಸುಶಿಕ್ಷಿತರಾಗುವುದು ಮತ್ತು ಜ್ಞಾನಶೀಲರಾಗುವುದು ಅಗತ್ಯವಾಗಿರುವುದು.

ನಮ್ಮ ದೇಶದಲ್ಲಿರುವ ಸಾಮಾಜಿಕ ವ್ಯವಸ್ಥೆಯು ವಿಶಿಷ್ಟವಾಗಿರುವುದು. ಜಾತಿಗಳು, ಸಮುದಾಯಗಳು ಮತ್ತು ವರ್ಗಗಳಲ್ಲಿರುವ ಭೇದಗಳು ಬೇರೆ ಸಮಾಜಗಳಲ್ಲಿ ಇದ್ದರೂ ಕೂಡ ನಮ್ಮ ದೇಶದ ಸಾಮಾಜಿಕ ವ್ಯವಸ್ಥೆಯು ವಿಶಿಷ್ಟವೂ ಮತ್ತು ವಿಭಿನ್ನವೂ ಆಗಿರುವುದು. ಜಾತಿಗಳು ಮತ್ತು ಪ್ರತಿಭೆಗಳ ಆಧಾರದ ಮೇಲಿನ ವಿಭಿನ್ನತೆ ಅಥವಾ ಸಮಾನಾಂತರ ಆಗಿಯೇ ಇರುವವು. ವಿಶ್ವದ ಬೇರೆ ಯಾವುದೇ ರಾಷ್ಟ್ರಗಳಲ್ಲಿ ಇಂತಹ ಪರಿಸ್ಥಿತಿ ಇರುವುದಿಲ್ಲ. ಶತ ಶತಮಾನಗಳಿಂದ ವಂಶ ಪಾರಂಪರ್ಯದ ಆಧಾರದ ಮೇಲೆ ಪ್ರತಿಭೆ ಗುರುತಿಸುವಂತಹ ವ್ಯವಸ್ಥೆಯನ್ನು ನಾವು ಸ್ವೀಕರಿಸಿದ್ದರ ಕೆಟ್ಟಪರಿಣಾಮದಿಂದಾಗಿಯೇ ನೋವು ಅನುಭವಿಸಬೇಕಾಗಿರುವುದು.

ಅಸ್ಪೃಶ್ಯ ಎಷ್ಟೇ ಬುದ್ಧಿವಂತ ಮತ್ತು ಕುಶಾಗ್ರಮತಿಯಾಗಿದ್ದರೂ ಆತನು ಪ್ರತಿಭಾ ಸಂಪನ್ನನೆಂದು ಪರಿಗಣಿಸಲ್ಪಡುವುದಿಲ್ಲ. ಆದರೆ ಓರ್ವ ಮೂರ್ಖ ಬ್ರಾಹ್ಮಣನು ಸಾಮಾಜಿಕ ಸ್ತರದ ಮೇಲ್ತುದಿಯಲ್ಲಿಯೇ ಇರುವನು. ಕೇವಲ ಜನ್ಮದ ಆಧಾರದ ಮೇಲೆ ಓರ್ವ ಬ್ರಾಹ್ಮಣನು ಪ್ರತಿಭಾ ಸಂಪನ್ನನೆನ್ನಿಸಿಕೊಳ್ಳುವನು, ಆದರೆ ಕೃತಿಯಲ್ಲಿ ಅಲ್ಲ. ನಮ್ಮಲ್ಲಿರುವ ಮೌಢ್ಯಗಳು ಮತ್ತು ಅಂಧಶ್ರದ್ಧೆಗಳಿಂದಾಗಿಯೇ ಈ ತಾರತಮ್ಯದಿಂದ ಕೂಡಿರುವ ವ್ಯವಸ್ಥೆಯು ಮುಂದುವರಿಯುತ್ತಿರುವುದು. ಇಂತಹ ಅಂಧಶ್ರದ್ಧೆ ಮತ್ತು ಮೌಢ್ಯಗಳು ನಮ್ಮಲ್ಲಿ ಇಲ್ಲದಿದ್ದರೆ ಸಮಾನತೆ ಮತ್ತು ಮಾನವ ಹಕ್ಕುಗಳಿಗಾಗಿ ಹೋರಾಟವು ಎಷ್ಟೋ ಶತಮಾನಗಳ ಮುಂಚೆಯೇ ಪ್ರಾರಂಭವಾಗಬೇಕಿತ್ತು.

ಜನ್ಮದ ಆಧಾರದ ಮೇಲೆ ಸಾಮಾಜಿಕ ಅಂತಸ್ತು ಮತ್ತು ಪ್ರತಿಭೆಯನ್ನು ಪರಿಗಣಿಸುವ ವ್ಯವಸ್ಥೆಯನ್ನು ಕೊನೆಗಾಣಿಸಲೇಬೇಕಿರುವುದು. ಅಸ್ಪೃಶ್ಯರಲ್ಲಿ ಶಿಕ್ಷಣ ಪ್ರಸಾರ ಮತ್ತು ಸಾಮಾಜಿಕ ಅರಿವಿನಿಂದ ಮಾತ್ರ ಇಂತಹ ವ್ಯವಸ್ಥೆಯನ್ನು ಕೊನೆಗಾಣಿಸುವುದಕ್ಕೆ ಸಾಧ್ಯವಿದೆ. ಲಭ್ಯವಿರುವ ಅವಕಾಶಗಳ ಸಂಪೂರ್ಣ ಸದುಪಯೋಗವನ್ನು ಪಡೆದುಕೊಳ್ಳಲು ಇರುವ ದೊಡ್ಡ ಕಂದರವೇ ಅನಕ್ಷರತೆ ಹಾಗೂ ಅವಿದ್ಯಾವಂತತನ. ನಾವು ನಮ್ಮ ಎಲ್ಲ ಶಕ್ತಿಯನ್ನು ಒಗ್ಗೂಡಿಸಿಕೊಂಡು ನಮ್ಮ ಹಕ್ಕುಗಳನ್ನು ಪಡೆಯಲು ಪ್ರಯತ್ನಿಸಬೇಕಿರುವುದು.

ನಮ್ಮದು ಮಾನವ ಹಕ್ಕುಗಳಿಗಾಗಿ ನಡೆಸುವಂತಹ ಹೋರಾಟವಾಗಿದ್ದು, ಸತ್ಯಾಗ್ರಹ ಹೂಡುವ ಮೂಲಕ ಅದನ್ನು ಸಾಕ್ಷಾತ್ಕಾರಕ್ಕೊಳಪಡಿಸಬಹುದಾಗಿದೆ. ಸತ್ಯಾಗ್ರಹವು ನಮ್ಮ ಕೊನೆಯ ಅಸ್ತ್ರವಾಗಿರುವುದು. ಅದು ನಮ್ಮವರ ಮತ್ತು ಪರದೇಶಿಯವರ ವಿರುದ್ಧ ನಡೆಯುವ ಸಂಘರ್ಷವಾಗಿರುವುದು. ಸ್ಪೃಶ್ಯರು ಮತ್ತು ಪರದೇಶಿಯವರ ಆಡಳಿತಗಾರರಿಂದ ಬರುವ ವಿರೋಧಗಳನ್ನು ಎದುರಿಸಲು ವಿವಿಧ ವಿಧಾನಗಳನ್ನು ನಾವು ರೂಪಿಸಿಕೊಳ್ಳಬೇಕಿರುವುದು. ಪಾಂಡವರು ಮತ್ತು ಕೌರವರ ನಡುವೆ ಘನಘೋರ ಯುದ್ಧ ಏಕೆ ನಡೆಯಿತೆಂಬುದನ್ನು ನೀವು ಅರಿತುಕೊಳ್ಳಬೇಕಿದೆ. ಅದು ಸಾಮ್ರಾಜ್ಯಕ್ಕಾಗಿ ನಡೆದ ಯುದ್ಧವಾಗಿರುವುದು. ಅಸ್ಪೃಶ್ಯತೆಯ ಮುಂದುವರಿಕೆಯು ಇಡೀ ಭಾರತೀಯ ಸಮಾಜದ ಪ್ರಗತಿಯನ್ನು ಕುಂಠಿತಗೊಳಿಸುವ ಕಾರಣವೇ ಆಗಿರುವುದು. ನಾವು ನಮ್ಮ ಅಂತಸ್ತು ಸುಧಾರಿಸಿಕೊಂಡು ನಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಬೇಕಿರುವುದು ಮೇಲ್ಜಾತಿಗಳಲ್ಲಿ ಸಂಪ್ರದಾಯಶೀಲತೆ ಮುಂದುವರಿಯುವುದೇ ಆಗಿದೆ, ಅದನ್ನು ನೀವು ದೂರೀಕರಿಸಲಾಗಲಿ ಅಥವಾ ಹೊಡೆದೋಡಿಸಲಾಗಲಿ ಸಾಧ್ಯವಿರುವುದಿಲ್ಲ.

ಕೊನೆಯದಾಗಿ, ಸ್ವ ನಂಬಿಕೆ ಮತ್ತು ಸ್ವ ಅವಲಂಬನೆ ಮಾರ್ಗವನ್ನು ಅನುಸರಿಸುವಂತೆ ನಾನು ನಿಮಗೆ ಸಲಹೆಯನ್ನು ನೀಡುತ್ತೇನೆ. ಪ್ರಸಕ್ತ ಅವಲಂಬಿತ ಅಂತಸ್ತಿನ ಕುರಿತು ಮತ್ತು ಕೆಲವು ವಿಶೇಷ ಸವಲತ್ತುಗಳ ಬಗ್ಗೆ ನೀವು ಹೊಂದಿರುವ ಹುಸಿ ಅಭಿಮಾನದ ಬಗ್ಗೆ ನಾನೇನೂ ಅವಲಂಬಿತ ವರ್ಗವಾಗಿ ರೂಪಿಸಿದೆ ಎಂಬುದರ ಅರಿವು ತಮಗಿದೆಯೇ ಮತ್ತು ಅದರ ಹುಸಿ ಅಭಿಮಾನ ಹೇಗೆ ನಿಮ್ಮನ್ನು ಕುಬ್ಜರನ್ನಾಗಿಸಿದೆ ? ಗ್ರಾಮಗಳಲ್ಲಿ ಮಹಾರ ವತನ ಪದ್ಧತಿಯ ಮಹಾರವನ್ನು ನಿರಂತರ ಬಂಧನಕ್ಕೊಳಪಡಿಸಿದೆ. ಮಹಾರ ಎಂದರೆ ಸರ್ಕಾರಿ ಭಿಕ್ಷುಕ. ಮಹಾರ ವತನದಿಂದಾಗಿ ಎಲ್ಲ ಗ್ರಾಮಗಳಲ್ಲಿ ಇಂತಹ ಸರ್ಕಾರಿ ಭಿಕ್ಷುಕರನ್ನು ಹೊಂದಿದೆ. ಮಹಾರ ವತನ ಮೇಲೆ ಮಹಾರರು ಅವಲಂಬಿತರಾಗಬಾರದು; ಅದರಿಂದ ಹೊರಗೆ ಬರಲು ತಮ್ಮ ಎಲ್ಲ ಶಕ್ತಿ-ಸಾಮರ್ಥ್ಯಗಳಿಂದ ಹೋರಾಟ ಮಾಡಬೇಕಿರುವುದು. ತಮ್ಮ ಸ್ವ ಶಕ್ತಿ-ಸಾಮರ್ಥ್ಯಗಳ ಮೇಲೆ ಶಿಕ್ಷಣದ ಅಂತಃಸತ್ವವನ್ನು ಪಡೆದುಕೊಳ್ಳಬೇಕಿರುವುದು. ಯಾರೂ ಅವರನ್ನು ಮೇಲೆತ್ತುವುದಿಲ್ಲ. ಯಾರೂ ಅವರಿಗೆ ಸಹಾಯಹಸ್ತ ಚಾಚುವುದಿಲ್ಲ ಕೆಲವು ಜನರನ್ನು ಹೊರತುಪಡಿಸಿ.

ಮಹಾರರು ಕಡಿಮೆ ಸಂಖ್ಯೆಯಲ್ಲಿರುವವರೆ ? ಅದು ಸತ್ಯವಾದುದಲ್ಲ. ಮಹಾರರು ಒಗ್ಗೂಡಿಕೊಂಡು ದೇಣಿಗೆ ಸಂಗ್ರಹಿಸಿ ಶಿಕ್ಷಣವನ್ನು ತಮ್ಮ ಸಮುದಾಯದವರಿಗೆ ನೀಡಬೇಕಿರುವುದು. ಧಾರವಾಡ ಜಿಲ್ಲೆಯೊಂದರಲ್ಲಿಯೇ ಕನಿಷ್ಠ ಒಂದು ಲಕ್ಷ ಮಹಾರರು ಇರುವರು. ಅವರು ತಲಾ ಒಂದು ರೂಪಾಯಿ ದೇಣಿಗೆ ನೀಡಿದರೂ ಅದರಿಂದ ಒಂದು ಲಕ್ಷ ರೂಪಾಯಿಗಳು ಸಂಗ್ರಹವಾಗುವುವು. ಅದರಿಂದ ೧೦೦ ವಿದ್ಯಾರ್ಥಿಗಳಿಗೆ ಬೋರ್ಡಿಂಗ್ ಹಾಸ್ಟೆಲ್ ನಡೆಸಬಹುದು. ಇತ್ತೀಚೆಗೆ ಒಂದು ಸರ್ಕಾರಿ ಹಾಸ್ಟೆಲ್ಲನ್ನು ಇಲ್ಲಿ ಪ್ರಾರಂಭಿಸಿರುವುದು ಸತ್ಯವಾದ ಸಂಗತಿಯಾಗಿದ್ದರೂ, ಅದಕ್ಕೆ ನೀಡುವಂತಹ ಅನುದಾನವು ಹೆಚ್ಚು ವಿದ್ಯಾರ್ಥಿಗಳಿಗೆ ವಸತಿ ಮತ್ತು ಊಟದ ವ್ಯವಸ್ಥೆ ಕಲ್ಪಿಸಲು ಸಾಕಾಗುವುದಿಲ್ಲ. ಪ್ರಸಕ್ತ ಕೇವಲ ೧೫ ಜನ ವಿದ್ಯಾರ್ಥಿಗಳಿರುವರು. ನೀವು ಸರ್ಕಾರವನ್ನು ಒತ್ತಾಯಿಸಿದರೆ ಮತ್ತು ಅದಕ್ಕಾಗಿ ಹೋರಾಟ ಮಾಡಿದರೆ ಆ ವಿದ್ಯಾರ್ಥಿಗಳ ಸಂಖ್ಯೆಯು ಇಮ್ಮಡಿಗೊಳ್ಳಬಹುದು. ಅದರ ಬದಲಾಗಿ ನೀವೇ ಬೋರ್ಡಿಂಗ್ ಹಾಸ್ಟೆಲ್ಲನ್ನು ಪ್ರಾರಂಭಿಸಿ. ಈ ಉದ್ದೇಶಕ್ಕಾಗಿ ಒಂದು ಸಮಿತಿಯನ್ನು ರಚಿಸಿ, ಈ ಜಿಲ್ಲೆಯಿಂದಾದರೂ ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಸಹಾಯ ಮಾಡಲು ಪ್ರಯತ್ನಿಸಿರಿ. ಅದನ್ನು ನೀವು ಖಂಡಿತವಾಗಿ ಮಾಡುತ್ತೀರೆಂದು ಭಾವಿಸುವೆ.

*ಡಾ॥ ಬಾಬಾಸಾಹೇಬ ಭೀಮರಾವ್ ಆರ್. ಅಂಬೇಡ್ಕರರು ದಿನಾಂಕ ೨೮ನೇ ಡಿಸೆಂಬರ್, ೧೯೨೯ರಂದು ಧಾರವಾಡದಲ್ಲಿ ಸಂಘಟಿಸಿದ್ದ ಧಾರವಾಡ ಜಿಲ್ಲಾ ಡಿಪ್ರೆಸ್ಡ್ ಕ್ಲಾಸಸ್ ಪರಿಷತ್‌ನ ಪ್ರಥಮ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡಿದ ಅಧ್ಯಕ್ಷೀಯ ಭಾಷಣ. ಜನವರಿ ೧, ೧೯೩೦ರ 'ಗ್ಯಾನ್ ಪ್ರಕಾಶ್'ದಲ್ಲಿ ವರದಿಸಲ್ಪಟ್ಟಂತೆ. ಬಾಬಾ ಸಾಹೇಬ ಅಂಬೇಡ್ಕರ ಬರಹ ಮತ್ತು ಭಾಷಣಗಳು, ಸಂಪುಟ, ೧೮(೧), ಪುಟಸಂಖ್ಯೆ ೧೯೧-೫ರಲ್ಲಿ ಪುನರ್ ಮುದ್ರಿಸಿದಂತೆ.*

ಇಂಗ್ಲಿಷ್ ಅನುವಾದ : **ನರೇಂದ್ರ ಜಾಧವ್**

ಕನ್ನಡಕ್ಕೆ : **ಸದಾಶಿವ ಮರ್ಜಿ**

ರಾಸೋನಿ ಬಿಲ್ಡಿಂಗ್, ಉದಯ ಹಾಸ್ಟೆಲ್ ಹತ್ತಿರ, ಬಾರಾಕೋಟ್ರಿ ರಸ್ತೆ, ಧಾರವಾಡ - ೫೮೦ ೦೦೭




'ವೇದ ನಡುನಡುಗಿತ್ತು (ಏಕೆ ?), ನಮ್ಮ ಕೂಡಲಸಂಗಮ ದೇವರು ಮಾದಾರ ಚನ್ನಯ್ಯನ ಮನೆಯಲ್ಲುಂಡ ಕಾರಣ' ಅನ್ನುತ್ತಾ ಬಸವಣ್ಣ ನಮ್ಮ ಪರಂಪರೆಯಲ್ಲಿ ಮಾದಾರ ಚನ್ನಯ್ಯನ ಸಂತತಿಯನ್ನು ಹೇಗೆ ನಡೆಸಿಕೊಳ್ಳಲಾಗಿದೆ ಎಂಬುದರ ಬಗ್ಗೆ ನಮ್ಮ ಗಮನವನ್ನು ತನ್ನ ವಚನವೊಂದರಲ್ಲಿ ಸೆಳೆಯುತ್ತಾನೆ. ಹಾಲ ನೇಮ, ಹಾಲ ಕೆನೆಯ ನೇಮ, ಬೆಲ್ಲದ ನೇಮ, ಬೆಣ್ಣೆಯ ನೇಮಗಳಿಗೆ ಎದುರಿಗೆ 'ಅಂಬಲಿ ನೇಮದ ಮಾದಾರ ಚನ್ನಯ್ಯ'ನನ್ನಿಟ್ಟು ಅಸಮಾನತೆಯ ನೆಲೆಯನ್ನು ಮತ್ತೊಂದು ವಚನದಲ್ಲಿ ತೋರಿಸುತ್ತಿದ್ದಾನೆ. ಹೀಗೆ ತನ್ನ ವೈಚಾರಿಕ ಪ್ರಣಾಳಿಕೆಯಲ್ಲಿ ಮಾದಾರ ಚನ್ನಯ್ಯನ ಸಂತತಿಗೆ ಆದ್ಯತೆಯನ್ನು ನೀಡುವುದರ ಮೂಲಕ ಬಸವಣ್ಣ ತನಗೆ ಗೊತ್ತಿಲ್ಲದ ಹಾಗೆ ಸಾಮಾಜಿಕ ನ್ಯಾಯ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದಾನೆ. ಎಲ್ಲಿಯ ವರೆಗೆ ಒಂದು ಸಮಾಜದಲ್ಲಿ ಅಭಿವೃದ್ಧಿ ಅನ್ನುವುದು ಉಳ್ಳವರನ್ನು ಪ್ರಜ್ಞಾಪೂರ್ವಕವಾಗಿ ಪೋಷಿಸುತ್ತಿರುತ್ತದೋ, ಎಲ್ಲಿಯವರೆಗೆ ಸಮಾಜದಲ್ಲಿ ಯಾರು ವಂಚಿತರಾಗಿರುತ್ತಾರೋ, ಅಂಚಿನಲ್ಲಿ ಬದುಕನ್ನು ದೂಡುತ್ತಿರುತ್ತಾರೋ ಅವರಿಗೆ ಅಭಿವೃದ್ಧಿ ಅಭಿಮುಖಿಯಾಗಿರುವುದಿಲ್ಲವೋ ಅಲ್ಲಿಯವರೆಗೆ ಅಲ್ಲಿ ಅಸಮಾನತೆಯನ್ನು ತೊಡೆದುಹಾಕುವುದು ಸಾಧ್ಯವಾಗುವುದಿಲ್ಲ, ಬಡತನವನ್ನು ನಿವಾರಿಸುವುದು ಸಾಧ್ಯವಿಲ್ಲ ಮತ್ತು ಅಭಿವೃದ್ಧಿ ಅನ್ನುವುದಕ್ಕೆ ಅರ್ಥವೂ ಇರುವುದಿಲ್ಲ. ಸಾವಿರಾರು ವರ್ಷಗಳಿಂದ ಪರಿಶಿಷ್ಟರ ಮೇಲೆ ನಡೆದ ಶೋಷಣೆಯ ಪರಂಪರೆಯನ್ನು ಬದಿಗಿಟ್ಟು ಕೇವಲ ೫೦–೬೦ ವರ್ಷಗಳ ಹಿನ್ನೆಲೆಯ ಸಂವಿಧಾನಾತ್ಮಕ ಮೀಸಲಾತಿಯ ಬಗ್ಗೆ ಇಂದು ಜನರು ಅಸಹನೆಯಿಂದ, ಅಸಮಾಧಾನದಿಂದ, ಅಸೂಯಾಪರರಾಗಿ ಮಾತನಾಡುತ್ತಿದ್ದಾರೆ. ಬಡತನ, ಹಸಿವು, ಅಸಮಾನತೆ, ಅಸಹಾಯಕತೆ ಮುಂತಾದವು ಸಮಾಜದ ಎಲ್ಲ ವರ್ಗ–ಸಮುದಾಯಗಳಲ್ಲಿಯೂ ಇರುತ್ತವೆ. ಆದರೆ ಪರಿಶಿಷ್ಟರ ಶೋಷಣೆಯ ಪರಿಯನ್ನು ಸಾಮಾನ್ಯ ಜನರ ದುಸ್ಥಿತಿಯ ಚೌಕಟ್ಟಿನಲ್ಲಿ ಅರಿಯುವುದಕ್ಕೆ ಪ್ರಯತ್ನಿಸುವುದು ಸರಿಯಲ್ಲ. ಸಮಾಜದ ಎಲ್ಲ ವರ್ಗಗಳ–ಸಮುದಾಯ ಗಳಲ್ಲಿರುವ ಹಸಿವು, ಬಡತನ, ಅಸಮಾನತೆಗಳನ್ನು ನಿವಾರಿಸುವುದು ಅಗತ್ಯ. ಆದರೆ ಒಂದು ಲಾಗಾಯ್ತಿನಿಂದ ಬೆಳೆಸಿಕೊಂಡು ಬಂದಿರುವ ಅಸಮಾನತೆಯಿಂದ ಕೂಡಿರುವ ಸಮಾಜದಲ್ಲಿ ಅಭಿವೃದ್ಧಿ ಕ್ರಮಗಳು ಸಮಾನತೆಯಿಂದ ಕೂಡಿದ್ದರೆ ಅಲ್ಲಿ ಅಸಮಾನತೆಯು ಹೆಚ್ಚಾಗುತ್ತದೆ ವಿನಾ ಕಡಿಮೆಯಾಗ ಲಾರದು. ಅನೇಕರು ಭಾವಿಸಿರುವಂತೆ ನಮ್ಮ ಸಮಾಜದಲ್ಲಿ ಅಸ್ಪೃಶ್ಯತೆ ಅನ್ನುವುದು ನಾಶವಾಗಿಲ್ಲ. ಅದು ಬೇರೆ ಬೇರೆ ರೂಪದಲ್ಲಿ ನಮ್ಮ ಸಮಾಜವನ್ನು ಇಂದಿಗೂ ಕಾಡುತ್ತಿದೆ. ಪರಿಶಿಷ್ಟ ಜಾತಿಗಳ ಜನರಿಗೆ ಉನ್ನತ ವರ್ಗದ ಬಡಾವಣೆಗಳಲ್ಲಿ ಬಾಡಿಗೆಗೆ ಮನೆ ದೊರೆಯದಿರುವ ಸಂಗತಿಯನ್ನು, ನಿವೇಶನವನ್ನು ಕೊಳ್ಳಲು ಸಾಧ್ಯವಿಲ್ಲದಿರುವುದನ್ನು, ಪರಿಶಿಷ್ಟ ಕುಟುಂಬಗಳು ಡೈರಿಗೆ ಸರಬರಾಜು ಮಾಡುವ ಹಾಲಿಗೆ ಸಾಮಾನ್ಯರಿಗೆ ನೀಡುವ ಸಬ್ಸಿಡಿಗೆ ಪ್ರತಿಯಾಗಿ ಹೆಚ್ಚಿಗೆ ನೀಡುವುದನ್ನು ವಿರೋಧಿಸುವ ಕ್ರಮವನ್ನು, ಆ ಜನರ ಗುಡಿ ಪ್ರವೇಶದ ಪ್ರಶ್ನೆ ನಮ್ಮ ಪ್ರಣಾಳಿಕೆಯ ಭಾಗವಲ್ಲ ಅನ್ನುವ ಒಂದು ರಾಜಕೀಯ ಪಕ್ಷದ ಮನೋಭಾವವನ್ನು ಅಸ್ಪೃಶ್ಯತೆಯ ಚೌಕಟ್ಟನ್ನು ಬಿಟ್ಟು ಹೇಗೆ ಅರ್ಥ ಮಾಡಿಕೊಳ್ಳುವುದು ?

**ಡಾ|| ಟಿ. ಆರ್. ಚಂದ್ರಶೇಖರ**

**ಬಸವಣ್ಣ ಹೇಳುತ್ತಿರುವಂತೆ ಮಾದಾರ ಚನ್ನಯ್ಯನ ಮನೆಗೆ ಕೂಡಲಸಂಗಮದೇವ ಬರುವುದನ್ನು ಕಂಡು ವೇದಗಳಿಗೆ ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನಡೆಯಬಾರದ್ದು ನಡೆದಿದೆ ಎಂದು ಅವು ನಡುಗುತ್ತಿವೆ. ಹಾಲು, ಹಾಲ ಕೆನೆ, ಬೆಲ್ಲ, ಬೆಣ್ಣೆಗಳ ವಾರಸುದಾರರನ್ನು ಸಮಾಜ ಪೋಷಿಸುತ್ತದೆ ವಿನಾ ಅಂಬಲಿ ನೇಮದವರನ್ನಲ್ಲ. ಅದಕ್ಕಾಗಿ ಅಂಬಲಿಯವರನ್ನು ಪೋಷಿಸುವ ಅಭಿವೃದ್ಧಿಯನ್ನು ರೂಪಿಸಬೇಕಾಗಿದೆ. ಅಭಿವೃದ್ಧಿಯ ಆರಂಭವು ಪರಿಶಿಷ್ಟರ ಪದತಲದಿಂದ ಆರಂಭವಾಗಬೇಕು.**




# ಬಿಕ್ಕುಗಳು

ಅವಳೆದೆಯ ಬಿಳಿ ಹಾಲಿನಂತೆ ತೊಟ್ಟಿಕ್ಕುತ್ತಿದೆ ಈ ಪ್ರೀತಿ.
ಕ್ಷಮಿಸಿ ನಾನು ಆಕಾಶಕ್ಕೆ ಮುತ್ತಿಡುತ್ತೇನೆ.
ನಾನೀಗ ನಿನ್ನೊಡಲಲ್ಲಿ ಕುಡಿ ಒಡೆಯುವ ಹೊತ್ತು
ನಿನ್ನ ನೆನಪಿನಂಗಳಕ್ಕೆ ನಾನೊಬ್ಬ ಭಿಕಾರಿ.
ನಿನ್ನುಸಿರ ಪ್ರತಿಕಣವೂ ನನ್ನ ನೆನಪಿನ ಚಿಗುರು
ನಿನ್ನ ಪ್ರೇಮ ಬೋಧಿಯ ಕೆಳಗೆ ನಾನೇ ಬುದ್ಧ.

ನಿನ್ನೊಲವ ಸೌಧದಲ್ಲೂ ನಾನೊಬ್ಬ ಅನಾಥ
ನಿನ್ನ ಸಿಂಗಾರದೊ ಸಂತದಲ್ಲಿ ನಾನು ಒಂಟಿ ಮರ.
ನಿನ್ನ ಅಂತಿಮ ಚಿರನಿದ್ರೆಯಲ್ಲಿ ನಾನೊಬ್ಬ ಫಕೀರ.
ಲಯತಪ್ಪಿದ ನಿನ್ನುಸಿರಾಟದಲಿ ನನ್ನೆದೆಯ
ಭಿತ್ತಿಗೆ ಮರುಜನ್ಮ

**ಇಸ್ಮಾಯಿಲ್‌ಜಬೀರ್ ಬಾವಾಜಿ**
೫ನೇ ವಾರ್ಡ್, ಉರ್ದು ಶಾಲೆ ಹತ್ತಿರ, ಹೂವಿನಹಡಗಲಿ
ಬಳ್ಳಾರಿ ಜಿಲ್ಲೆ – ೫೮೩ ೨೧೯

ಪ. ಜಾ. ಮತ್ತು ಪ. ಪಂ.ಗಳ ಅಭಿವೃದ್ಧಿಗಾಗಿ ೧೯೭೦ರ ದಶಕದಲ್ಲಿ ಕೇಂದ್ರ ಸರ್ಕಾರವು 'ಪರಿಶಿಷ್ಟ ಜಾತಿ ವಿಶೇಷ ಘಟಕ ಯೋಜನೆ' (ಎಸ್‌ಸಿಪಿ) ಎಂಬ ಮತ್ತು ಪ. ಪಂ.ಗಳ ಅಭಿವೃದ್ಧಿಗಾಗಿ 'ಪರಿಶಿಷ್ಟ ಪಂಗಡ ವಿಶೇಷ ಘಟಕ ಯೋಜನೆ' (ಟಿಎಸ್‌ಪಿ)ಗಳನ್ನು ಜಾರಿಗೊಳಿಸಿದ್ದು ಸರಿಯಷ್ಟೆ. ಈ ಯೋಜನೆಗಳನ್ನು ರಾಜ್ಯಗಳೂ ಅನುಷ್ಠಾನಗೊಳಿಸುತ್ತಿವೆ. ಈ ಯೋಜನೆಗಳು ಎಷ್ಟರಮಟ್ಟಿಗೆ ಪರಿಶಿಷ್ಟರ ದುಸ್ಥಿತಿಯನ್ನು ನಿವಾರಿಸುವುದರಲ್ಲಿ ಯಶಸ್ವಿಯಾಗಿವೆ, ಈ ಕಾರ್ಯಯೋಜನೆಗಳನ್ನು ಬ್ಯುಸಿನೆಸ್ ಆಸ್ ಯೂಷುಯಲ್ ಅನ್ನುವ ರೀತಿಯಲ್ಲಿ ನಿರ್ವಹಿಸಲಾಗುತ್ತಿದೆಯೋ ಅಥವಾ ಪ್ರಜ್ಞಾಪೂರ್ವಕವಾಗಿ ಜಾರಿಗೊಳಿಸಲಾಗುತ್ತಿದೆಯೋ, ಸಮಾಜದ ತಳಮಟ್ಟದಲ್ಲಿ ಇದು ಹೇಗೆ ಅನುಷ್ಠಾನಗೊಳ್ಳುತ್ತಿದೆ, ಅಭಿವೃದ್ಧಿ ಇಲಾಖೆಗಳಲ್ಲಿ ಯಾವ ಇಲಾಖೆಗಳು ಇದರಲ್ಲಿ ಹೆಚ್ಚಿನ ಪಾಲು ಪಡೆಯುತ್ತಿವೆ ಮುಂತಾದ ಸಂಗತಿಗಳನ್ನು ಗಮನಿಸಬೇಕು. ಕೇಂದ್ರ ಸರ್ಕಾರದ ಮಟ್ಟದಲ್ಲಿ ಮತ್ತು ರಾಜ್ಯಮಟ್ಟದ ಸರ್ಕಾರದಲ್ಲಿ ಕಾರ್ಯಯೋಜನೆಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳೇನು ಎಂಬುದನ್ನೂ ಪರಿಶೀಲಿಸಬೇಕು.

### ಭಾಗ–೧

### ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ : ಕೇಂದ್ರದ ಧೋರಣೆ

ಪರಿಶಿಷ್ಟ ಜಾತಿ ಉಪಯೋಜನೆ (ಎಸ್‌ಸಿಎಸ್‌ಪಿ)ಯು ೧೯೭೯–೮೦ರಲ್ಲಿ ಮತ್ತು ಬುಡಕಟ್ಟು ಉಪಯೋಜನೆ (ಟಿಎಸ್‌ಪಿ)ಯು ೧೯೭೪–೭೫ರಲ್ಲಿ ಜಾರಿಗೆ ಬಂದವು. ಆದರೆ ಈ ಕಾರ್ಯಯೋಜನೆಗಳ ಬಗ್ಗೆ ಕೇಂದ್ರದ ಧೋರಣೆ ಇಂದು ಬದಲಾಗಿದೆ. ಇಂದಿನ ಕೇಂದ್ರದ ಅಭಿವೃದ್ಧಿ ಸೂತ್ರ 'ಸಬ್‌ಕ ಸಾತ್, ಸಬ್‌ಕ ವಿಕಾಸ್' ಎಂದು ಹೇಳಲಾಗಿದೆ. ಈ ಕಾರಣದಿಂದಾಗಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಪರಿಶಿಷ್ಟ ಪಂಗಡ ಉಪಯೋಜನೆ ಅನ್ನುವ ಶೀರ್ಷಿಕೆಗಳನ್ನು ಕೈಬಿಟ್ಟು ಸರ್ಕಾರ ತನ್ನ ೨೦೧೭–೨೦೧೮ನೆಯ ಸಾಲಿನ ಬಜೆಟ್ಟಿನಲ್ಲಿ ಅವುಗಳಿಗೆ ಪ. ಜಾ. ಕಲ್ಯಾಣ ವಿನಿಯೋಜನೆ ಮತ್ತು ಪ. ಪಂ. ಕಲ್ಯಾಣ ವಿನಿಯೋಜನೆ ಎಂದು ಹೊಸ ಶೀರ್ಷಿಕೆಗಳನ್ನು ನೀಡಿದೆ.

ಕೇಂದ್ರದ ಹಣಕಾಸು ಮಂತ್ರಿಗಳು ೨೦೧೭–೨೦೧೮ನೆಯ ಸಾಲಿನ ತಮ್ಮ ಬಜೆಟ್ ಭಾಷಣದಲ್ಲಿನ 'ಬಡವರು ಮತ್ತು ತಳವರ್ಗದವರು' ಎಂಬ ನಾಲ್ಕನೆಯ ಭಾಗವನ್ನು ಮೇಲ್ಕಂಡ ಘೋಷಣೆಯನ್ನು ಉಲ್ಲೇಖಿಸುತ್ತಾ ಆರಂಭಿಸುತ್ತಾರೆ. ಈ ಬಜೆಟ್ ದಾಖಲೆಗಳಲ್ಲಾಗಲಿ ಅಥವಾ ೨೦೧೬–೧೭ರ ಆರ್ಥಿಕ ಸಮೀಕ್ಷೆಯಲ್ಲಾಗಲಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ ಪದಗಳನ್ನು ಬಳಸಿಲ್ಲ. ವಾಸ್ತವವಾಗಿ ತಮ್ಮ ಬಜೆಟ್ ಭಾಷಣದಲ್ಲಿ ಪ. ಜಾ. ಮತ್ತು ಪ. ಪಂ.ಗಳ ಕಲ್ಯಾಣದ ಬಗ್ಗೆ ಹಣಕಾಸು ಮಂತ್ರಿಗಳು ಕೇವಲ ನಾಲ್ಕು ವಾಕ್ಯಗಳನ್ನು ಆಡಿದ್ದಾರೆ (ಹಣಕಾಸು ಮಂತ್ರಿಗಳ ಬಜೆಟ್ ಭಾಷಣ : ಭಾಗ–೪, ಕಂಡಿಕೆ : ೬೯, ಪುಟ : ೨೭). ಆರ್ಥಿಕ ಸಮೀಕ್ಷೆಯಲ್ಲಿ ಮರುವಿತರಣೆ ಬಗ್ಗೆ ಒಂದು ಅಧ್ಯಾಯವಿದೆ. ಆದರೆ ಅದು ನಾವು ಇದುವರೆವಿಗೂ ಅರ್ಥ ಮಾಡಿಕೊಂಡಿರುವ ಅಥವಾ ಅರ್ಥಶಾಸ್ತ್ರದಲ್ಲಿ ಪ್ರತಿಪಾದಿಸುವ ಸಮಾನತೆಗೆ ಸಂಬಂಧಿಸಿದ ರೀಡಿಸ್ಟ್ರಿಬ್ಯುಷನ್ ಅಲ್ಲ. ಏಕೆಂದರೆ ಕೇಂದ್ರದ ಬಜೆಟ್ಟಿನಲ್ಲಾಗಲಿ ಅಥವಾ ೨೦೧೬–೧೭ರ ಆರ್ಥಿಕ ಸಮೀಕ್ಷೆಯಲ್ಲಾಗಲಿ 'ಸಮಾನತೆ' ಬಗ್ಗೆ ಅಪ್ಪಿತಪ್ಪಿಯೂ ಉಲ್ಲೇಖ ದೊರೆಯುವುದಿಲ್ಲ. ಅಲ್ಲಿ ಅವರು ರಾಜ್ಯಗಳ ನೈಸರ್ಗಿಕ ಸಂಪನ್ಮೂಲಗಳಿಗೆ ಸಂಬಂಧಿಸಿದ ಸಂಗತಿಗಳ ಬಗ್ಗೆ ಮಾತನಾಡುತ್ತಾರೆ. ಅದರಲ್ಲಿ ಆರ್ಥಿಕತೆಯ ಬಗ್ಗೆ, ಆರ್ಥಿಕ ವಲಯಗಳ ಬಗ್ಗೆ, ಉದ್ದಿಮೆಗಳ ಬಗ್ಗೆ, ಬ್ಯಾಂಕಿಂಗ್ ಬಗ್ಗೆ ಮಾತನಾಡಲಾಗಿದೆ ವಿನಾ 'ಜನರ' ಬಗ್ಗೆ ಮಾತನಾಡಿರುವುದು ಕಾಣುವುದಿಲ್ಲ. ಒಟ್ಟಾರೆ ಇಡೀ ಆರ್ಥಿಕತೆಯಲ್ಲಿ ವಿನಿಯೋಗಿಸುವ ವೆಚ್ಚದಲ್ಲಿ ಎಲ್ಲರಿಗೂ ಪಾಲು ದೊರೆಯುತ್ತದೆ ಎಂಬುದು ಇಲ್ಲಿನ ಗೃಹೀತವಾಗಿದೆ. ಬಡವರಿಗೆ, ವಂಚಿತರಿಗೆ, ಸಮಾಜದ ಅಂಚಿನಲ್ಲಿರುವವರಿಗೆ ಪ್ರತ್ಯೇಕವಾಗಿ ಸಾರ್ವಜನಿಕ ವೆಚ್ಚವನ್ನು ಮೀಸಲಿಡುವ ಕ್ರಮದ ಬಗ್ಗೆ ಅನೇಕ ಪ್ರಶ್ನೆಗಳನ್ನು ಎತ್ತಲಾಗುತ್ತಿದೆ.

ಕೇಂದ್ರ ಸರ್ಕಾರ ೨೦೧೭–೧೮ರ ಬಜೆಟ್ಟಿನಲ್ಲಿ ಯೋಜನೆ ಮತ್ತು ಯೋಜನೇತರ ವೆಚ್ಚ ಎಂಬ ವರ್ಗೀಕರಣವನ್ನು ರದ್ದುಪಡಿಸಿದೆ. ಕೇಂದ್ರದ ೨೦೧೭–೧೮ನೆಯ ಸಾಲಿನ ಬಜೆಟ್ ಗಾತ್ರ ರೂ. ೨೧.೨೬ ಲಕ್ಷ ಕೋಟಿ. ಇದರಲ್ಲಿ ಪ. ಜಾ. ಕಲ್ಯಾಣಕ್ಕೆ ಮೀಸಲಿಟ್ಟ ಹಣ ರೂ. ೫೨೩೯೩ ಕೋಟಿಯಾದರೆ ಪ. ಪಂ. ಕಲ್ಯಾಣಕ್ಕೆ ತೆಗೆದಿರಿಸಿರುವ ಹಣ ರೂ. ೩೧೯೨೦ ಕೋಟಿ. ಒಟ್ಟು ಬಜೆಟ್ ವೆಚ್ಚದಲ್ಲಿ

ಇವುಗಳ ಪಾಲು ಕ್ರಮವಾಗಿ ಶೇ. ೨.೪೪ ಮತ್ತು ಶೇ. ೧.೪೯. ಇವು ೨೦೧೬–೧೭ರಲ್ಲಿ ಕ್ರಮವಾಗಿ ಶೇ. ೨.೦೩ ಮತ್ತು ಶೇ. ೧.೨೭ ಹಾಗೂ ೨೦೧೫–೧೬ನೆಯ ಸಾಲಿನಲ್ಲಿ ಇದು ಕ್ರಮವಾಗಿ ಶೇ. ೨.೧೭ ಮತ್ತು ಶೇ. ೧.೩೪ರಷ್ಟಿದ್ದವು. ಜನಗಣತಿ ೨೦೧೧ರ ಪ್ರಕಾರ ಭಾರತದಲ್ಲಿ ಪ. ಜಾ. ಜನಸಂಖ್ಯೆ ೨೦.೧೪ ಕೋಟಿ ಮತ್ತು ಪ. ಪಂ. ಜನಸಂಖ್ಯೆ ೧೦.೪೩ ಕೋಟಿ. ಹಿಂದೆ ಯೋಜನಾ ಆಯೋಗ ನೀಡಿದ್ದ ಮಾರ್ಗದರ್ಶಿ ಸೂತ್ರದ ಪ್ರಕಾರ ಪ. ಜಾ. ಮತ್ತು ಪ. ಪಂ. ಜನಸಂಖ್ಯೆಯ ಪರಿಮಾಣಕ್ಕನುಗುಣವಾಗಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿಗೆ ಅನುದಾನ ನೀಡಬೇಕು.

ಈ ಹಿಂದೆ ಸದರಿ ಯೋಜನೆಗಳ ಬಗ್ಗೆ ಇದ್ದ ಜಾದವ್ ಮಾರ್ಗದರ್ಶನದಂತೆ ಲೆಕ್ಕ ಹಾಕಿದರೆ ಪ. ಜಾ. ಉಪಯೋಜನೆಗೆ ೨೦೧೭–೧೮ನೆಯ ಸಾಲಿನ ಒಟ್ಟು ಬಜೆಟ್ ವೆಚ್ಚದಲ್ಲಿ ಶೇ. ೪.೬೩ರಷ್ಟು (ರೂ. ೯೬೬೩೮ ಕೋಟಿ) ಮತ್ತು ಪ. ಪಂ. ಉಪ ಯೋಜನೆಗೆ ಶೇ. ೨.೩೯ರಷ್ಟು (ರೂ. ೪೯೯೨ ಕೋಟಿ) ದೊರೆಯಬೇಕಾಗಿತ್ತು. ಈಗ ನೀಡಿರುವುದಕ್ಕೂ ಮತ್ತು ಜಾದವ್ ಮಾರ್ಗದರ್ಶನದಂತೆ ನೀಡಬೇಕಾಗಿದ್ದ ಮೊತ್ತಗಳ ನಡುವಿನ ಕಡಿತ ಕ್ರಮವಾಗಿ ರೂ. ೪೪೨೪೫ ಕೋಟಿ ಮತ್ತು ರೂ. ೧೮೦೭೨ ಕೋಟಿ.

ಪ್ರಾಸಂಗಿಕವಾಗಿ ಹೇಳುವುದಾದರೆ ಸಮಾಜದಲ್ಲಿ ೨೦.೧೪ ಕೋಟಿಯಿರುವ ಪ. ಜಾ. ೧೦.೪೩ ಕೋಟಿಯಿರುವ ಪ. ಪಂ.ಗಳ ಬಗ್ಗೆ ಪ್ರತ್ಯೇಕ ಜನಗಣತಿ ಮಾಹಿತಿ ದೊರೆಯುತ್ತದೆ, ಬಜೆಟ್ಟಿನಲ್ಲಿ ಈ ವರ್ಗಗಳಿಗೆ ವಿಶೇಷ ಅನುದಾನ ನೀಡಲಾಗುತ್ತದೆ. ಆದರೆ ೧೭.೨೨ ಕೋಟಿಯಷ್ಟಿರುವ ಅಲ್ಪಸಂಖ್ಯಾತ ಮುಸ್ಲಿಮರ ಬಗ್ಗೆ ಯಾವುದೇ ಜನಗಣತಿ ಮಾಹಿತಿಯೂ ಇಲ್ಲ, ವಿಶೇಷ ಅನುದಾನವೂ ಇಲ್ಲ (ಸುಮಾರು ರೂ. ೪೧೩೦ ಕೋಟಿ ಅಲ್ಪಸಂಖ್ಯಾತರಿಗೆ ಬಜೆಟ್ಟಿನಲ್ಲಿ ಮೀಸಲಿಡಲಾಗಿದೆ. ಇದು ಒಟ್ಟು ಬಜೆಟ್ ಗಾತ್ರದ ಶೇ. ೦.೧೯ ರಷ್ಟಾಗುತ್ತದೆ).

**ಭಾಗ–೨**

**ಕರ್ನಾಟಕದಲ್ಲಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ**

ಕರ್ನಾಟಕ ಸರ್ಕಾರವು ಪ. ಜಾ. ಉಪಯೋಜನೆ ಮತ್ತು ಪ. ಪಂ. ಉಪಯೋಜನೆಗಳ ಮೇಲೆ ಅವರ ಜನಸಂಖ್ಯೆಗೆ ಅನುಗುಣವಾಗಿ ಅನುದಾನವನ್ನು ಬಜೆಟ್ಟಿನಲ್ಲಿ ಒದಗಿಸುತ್ತಾ ಬಂದಿದೆ. ಎಸ್‌ಸಿಎಸ್‌ಪಿಗೆ ೨೦೧೨–೧೩ರಲ್ಲಿ ನೀಡಿದ್ದ ಅನುದಾನ ರೂ. ೫೧೨೫.೦೧ ಕೋಟಿಯಾದರೆ ಟಿಎಸ್‌ಪಿಗೆ ನೀಡಿದ ಅನುದಾನ ರೂ. ೨೦೭೫.೬೦ ಕೋಟಿ. ಇದು ೨೦೧೫–೧೬ರಲ್ಲಿ ಕ್ರಮವಾಗಿ ರೂ. ೧೧೭೭೩.೫೫ ಕೋಟಿಗೆ ಮತ್ತು ರೂ. ೪೫೭೮.೧೬ ಕೋಟಿಗೇರಿದೆ.

ನಮ್ಮ ರಾಜ್ಯದಲ್ಲಿ ಎಸ್‌ಸಿಎಸ್‌ಪಿಯಲ್ಲಿನ ಅನುದಾನದಲ್ಲಿ ಎರಡು ಭಾಗಗಳಿರುತ್ತವೆ. ಮೊದಲನೆಯದು ರಾಜ್ಯ ವಲಯ ಮತ್ತು ಎರಡನೆಯದು ಜಿಲ್ಲಾ ವಲಯ. ಈ ಬಗೆಯ ವರ್ಗೀಕರಣ ಟಿಎಸ್‌ಪಿಯಲ್ಲಿಲ್ಲ. ಕರ್ನಾಟಕದಲ್ಲಿ ೨೦೧೨–೧೩ನೆಯ ಸಾಲಿನಲ್ಲಿನ ಅನುದಾನ ರೂ. ೫೧೨೫.೦೧ ಕೋಟಿಯಲ್ಲಿ ರಾಜ್ಯ ವಲಯದ ಪಾಲು ರೂ. ೪೪೬೮.೧೦ ಕೋಟಿ (ಶೇ. ೮೭.೧೮) ಯಾದರೆ ಜಿಲ್ಲಾ ವಲಯದ ಪಾಲು ರೂ. ೬೫೬.೯೧ ಕೋಟಿ. ಇದು ೨೦೧೫–೧೬ರಲ್ಲಿ ರಾಜ್ಯ ವಲಯದ ಪಾಲು ಶೇ. ೮೨.೦೧. ಸಾಮಾನ್ಯವಾಗಿ ಇದರಲ್ಲಿ ಅನುದಾನದ ಮೊತ್ತದಲ್ಲಿ ವೆಚ್ಚದ ಪ್ರಮಾಣ ಶೇ. ೮೧ ಮೀರಿಲ್ಲ.

> **ಅಭಿನಂದನೆ...**
>
> ಕರ್ನಾಟಕ ಸಂಘ, ಶಿವಮೊಗ್ಗ ಇವರು ವಿಜ್ಞಾನ ಸಾಹಿತ್ಯ ಕ್ಷೇತ್ರದಲ್ಲಿ ಜೀವಮಾನ ಸಾಧನೆಗಾಗಿ ನೀಡುವ 'ಡಾ॥ ಶಿವರಾಮ ಕಾರಂತ ವಿಜ್ಞಾನ ಪ್ರಶಸ್ತಿ'ಯನ್ನು ೨೦೧೬ರ ಸಾಲಿಗಾಗಿ ಡಾ॥ ಟಿ. ಆರ್. ಅನಂತರಾಮು ಅವರಿಗೆ ನೀಡಲಿದ್ದಾರೆ. ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ಈ ಉಪಯೋಜನೆಗಳ ಬಗ್ಗೆ ಕರ್ನಾಟಕದ ವಿಶೇಷತೆಯೆಂದರೆ ಅದು ಜಾರಿಗೊಳಿಸಿರುವ ಕರ್ನಾಟಕ ಪ. ಜಾ. ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ (ಯೋಜನೆ, ವಿನಿಯೋಜನೆ, ಹಣಕಾಸು ಸಂಪನ್ಮೂಲದ ಬಳಕೆ) ಕಾಯಿದೆ ೨೦೧೩. ಈ ಕಾಯಿದೆಯಲ್ಲಿ ಸದರಿ ಉಪಯೋಜನೆಗಳಿಗೆ ನೀಡಲಾದ ಅನುದಾನವನ್ನು ಯಾವ ವರ್ಷಕ್ಕೆ ಒದಗಿಸಲಾಗಿದೆಯೋ ಆ ವರ್ಷವೇ ವೆಚ್ಚ ಮಾಡದಿದ್ದರೆ ಅಂತಹ ಇಲಾಖೆಯ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳುವ ಅವಕಾಶವನ್ನು ನೀಡಲಾಗಿದೆ. ಪರಿಶಿಷ್ಟರ ಅಭಿವೃದ್ಧಿಯನ್ನು ಗಂಭೀರವಾಗಿ ಸರ್ಕಾರ ಪರಿಗಣಿಸಿರುವುದನ್ನು ಇದು ಸೂಚಿಸುತ್ತದೆ. ಆದರೆ ರಾಜ್ಯದಲ್ಲಿ ಅವುಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಮಸ್ಯೆಗಳಿವೆ.

ನಮ್ಮ ರಾಜ್ಯದಲ್ಲಿನ ಪ. ಜಾ. ಜನಸಂಖ್ಯೆ ೨೦೧೧ರಲ್ಲಿ ೧೦೪.೭೫ ಲಕ್ಷವಾದರೆ ಪ. ಪಂ. ಜನಸಂಖ್ಯೆ ೪೨.೪೯ ಲಕ್ಷ. ಒಟ್ಟು ಜನಸಂಖ್ಯೆಯಲ್ಲಿ ಇವರ ಪ್ರಮಾಣ ಶೇ. ೨೪.೧೦. ರಾಜ್ಯದ ಹಿಂದುಳಿದ ಜಿಲ್ಲೆಗಳಾದ ಚಿತ್ರದುರ್ಗ, ಕೊಪ್ಪಳ, ರಾಯಚೂರು, ಚಾಮರಾಜನಗರ, ಯಾದಗಿರ್, ಕೋಲಾರ ಮುಂತಾದ ಜಿಲ್ಲೆಗಳಲ್ಲಿ ಪ. ಜಾ. ಮತ್ತು ಪ. ಪಂ.ಗಳ ಪ್ರಮಾಣ ಶೇ. ೩೫ರಷ್ಟಿದೆ. ಈ ಹಿನ್ನೆಲೆಯಲ್ಲಿ ಹಿಂದುಳಿದ ಜಿಲ್ಲೆಗಳಲ್ಲಿ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ ಯೋಜನೆಗಳನ್ನು ವ್ಯಾಪಕವಾಗಿ ಜಾರಿಗೊಳಿಸುವ ಅಗತ್ಯವಿದೆ ಮತ್ತು ಅವು ಉತ್ತಮ ಫಲಗಳನ್ನು ನೀಡುವಂತೆ ಅನುಷ್ಠಾನಗೊಳಿಸಬೇಕು. ಈ ಉಪಯೋಜನೆಗಳ ಅನುಷ್ಠಾನವನ್ನು ಬಿಗಿಗೊಳಿಸುವುದಕ್ಕಾಗಿ ಕಾಯಿದೆಗಳನ್ನು ಜಾರಿಗೊಳಿಸಲಾಗಿದೆ. ಆದರೆ ಕಾಯಿದೆಗಳೇ ಎಲ್ಲವೂ ಅಲ್ಲ ತಾನೆ! ಸಮಾಜವು ಅದಕ್ಕೆ ಪೋಷಣೆ ನೀಡಬೇಕು.

ಇಂದಿಗೂ ರಾಜ್ಯದಲ್ಲಿ ಉಪಯೋಜನೆಗಳಿಗೆ ನೀಡಿದ ಅನುದಾನದಲ್ಲಿ ಶೇ. ೮೦ರಿಂದ ಶೇ. ೮೫ರಷ್ಟು ವ್ಯಯವಾಗುತ್ತಿದೆ. ಈ ಉಪಯೋಜನೆಗಳಡಿಯಲ್ಲಿ ಅಕ್ಷರಶಃ ನೂರಾರು ಕಾರ್ಯಕ್ರಮಗಳಿವೆ. ಅವುಗಳನ್ನೆಲ್ಲ ಸಂಘಟಿಸಿ ಕೇಂದ್ರೀಕೃತ ಯೋಜನೆಯನ್ನು ರೂಪಿಸುವ ಅಗತ್ಯವಿದೆ. ಈ ಯೋಜನೆಗಳು ಅನುಷ್ಠಾನಕ್ಕೆ ಬಂದ ಎರಡು – ಮೂರು ದಶಕಗಳಾಗಿದ್ದರೂ ಪ. ಜಾ. ಮತ್ತು ಪ. ಪಂ. ಅಭಿವೃದ್ಧಿಯ ಒಂದು ಮುನ್ನೋಟ ವರದಿಯನ್ನು ನಮಗೆ ಸಿದ್ಧಪಡಿಸುವುದು ಸಾಧ್ಯವಾಗಿಲ್ಲ. ಈಗ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿಗಳ ಅನುದಾನವನ್ನು ರಾಜ್ಯದಲ್ಲಿ ಸುಮಾರು ೩೦ರಿಂದ ೩೪ ಇಲಾಖೆಗಳಿಗೆ ಹಂಚಲಾಗುತ್ತದೆ. ಆದರೆ ಅವುಗಳಿಗೆ ಇಂತಹ ವಿಶೇಷ ಉಪಯೋಜನೆಯಡಿಯಲ್ಲಿ ಕಾರ್ಯಕ್ರಮಗಳನ್ನು ರೂಪಿಸುವ ಮತ್ತು ಅವುಗಳನ್ನು ಅನುಷ್ಠಾನಗೊಳಿಸುವ ತರಬೇತಿ, ಮಾರ್ಗದರ್ಶನಕ್ಕೆ ಸಂಬಂಧಿಸಿದಂತೆ ಯಾವುದೇ ಕ್ರಮಗಳು ಕಂಡುಬರುತ್ತಿಲ್ಲ. ಇದರಿಂದಾಗಿ ಅಲ್ಲಿ ಬ್ಯುಸಿನೆಸ್ ಆಸ್ ಯೂಷುವಲ್ ಅನ್ನುವಂತೆ ಕೆಲಸ ನಡೆಯುತ್ತದೆ.

**ಭಾಗ–೩**

**ಉಪಯೋಜನೆಗಳಿಗೆ ಸಂಬಂಧಿಸಿದ ಸಮಸ್ಯೆಗಳು**

ಈ ಉಪಯೋಜನೆ ಕ್ರಮಗಳು ಜಾರಿಗೆ ಬಂದು ಮೂರು–ನಾಲ್ಕು ದಶಕಗಳು ಕಳೆದಿವೆ. ಅವುಗಳ ಪೂರ್ಣ ಸಾಮರ್ಥ್ಯವನ್ನು ಪರಿಶಿಷ್ಟರ ಅಭಿವೃದ್ಧಿಗೆ ಬಳಸಿಕೊಂಡಂತೆ ಕಾಣುವುದಿಲ್ಲ. ಅವುಗಳ ಅನುಷ್ಠಾನದಲ್ಲಿ ತೊಡಕುಗಳಿವೆ. ಅವುಗಳಿಗೆ ಒದಗಿಸುವ ಅನುದಾನದ ಬಗ್ಗೆ ಖಚಿತ ನಿಲುವುಗಳಿದ್ದಂತೆ ಕಾಣುವುದಿಲ್ಲ. ಸೈದ್ಧಾಂತಿಕವಾಗಿ ಭಿನ್ನ ನಿಲುವುಗಳು ಸಾಧ್ಯ. ಈ ಉಪಯೋಜನೆಗಳನ್ನು ಕುರಿತಂತೆ ಕೇಂದ್ರ ಸರ್ಕಾರ ಭಿನ್ನ ನಿಲುವನ್ನು ತಳೆದಂತೆ ಕಾಣುತ್ತಿದೆ. ಸಮಾಜವು ಇದನ್ನು ನೋಡುವ ಕ್ರಮದಲ್ಲಿ ಸಮಸ್ಯೆಗಳಿವೆ. ಈ ಬಗ್ಗೆ ಇಲ್ಲಿ ಚರ್ಚೆ ಮಾಡಲಾಗಿದೆ.

೧. ಸದ್ಯ ಕೇಂದ್ರದ ಘೋಷಿತ ಅಭಿವೃದ್ಧಿ ಸೂತ್ರ : ಸಬ್‌ಕ ಸಾತ್ : ಸಬ್‌ಕ ವಿಕಾಸ್. ಇದು ನೇರವಾಗಿ ಯಾವುದನ್ನು ಸಾಮಾಜಿಕ ನ್ಯಾಯ ಎಂದು ಕರೆಯುತ್ತೇವೆಯೋ ಅದಕ್ಕೆ ವಿರುದ್ಧವಾದುದಾಗಿದೆ. ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿಗಳ ಮೂಲದಲ್ಲಿರುವ ನಿಯಮ ಸಾಮಾಜಿಕ ನ್ಯಾಯ. ಎಲ್ಲರ ಜೊತೆಯಲ್ಲಿ ಪರಿಶಿಷ್ಟರ ಅಭಿವೃದ್ಧಿಯೂ ಸಾಧ್ಯ ಅನ್ನುವುದು ಸೈದ್ಧಾಂತಿಕವಾಗಿಯಾಗಲಿ ಅಥವಾ ನಮ್ಮ ಕಳೆದ ೬೦ ವರ್ಷಗಳ ಅನುಭವದಿಂದಾಗಲಿ ಒಪ್ಪುವುದು–ಸಮರ್ಥಿಸುವುದು ಸಾಧ್ಯವಿಲ್ಲ. ಪರಿಶಿಷ್ಟರ ಅಭಿವೃದ್ಧಿ ಅನ್ನುವುದು ಕೇವಲ ಆರ್ಥಿಕ ಸಂಗತಿಯಲ್ಲ. ಸಾಮಾಜಿಕ, ಸಾಂಪ್ರದಾಯಿಕ ಸಂಗತಿಗಳು ಅದರ ಮೂಲದಲ್ಲಿವೆ. ಜಾನ್ ರಾಲ್ಸ್ ಹೇಳುವ 'ಭಿನ್ನತೆಯ ನಿಯಮ'ದ ಹಿನ್ನೆಲೆಯಲ್ಲಿ ಎಲ್ಲರ ಜೊತೆಯಲ್ಲಿ ಪರಿಶಿಷ್ಟರ ಅಭಿವೃದ್ಧಿಯೂ ನಡೆಯುತ್ತದೆ ಅನ್ನುವುದು ಕೇವಲ ಭ್ರಮೆ. ಉದಾಹರಣೆಗೆ ಭಾರತದಲ್ಲಿ ಒಟ್ಟು ದುಡಿಮೆಗಾರರಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ೨೦೧೧ರಲ್ಲಿ ಶೇ. ೨೯.೯೩ರಷ್ಟಿತ್ತು. ಆದರೆ ಇದರ ಪ್ರಮಾಣ ಪ. ಜಾ. ದುಡಿಮೆಗಾರರಲ್ಲಿ ಶೇ. ೪೫.೯೦ ಮತ್ತು

ಪ. ಪಂ. ದುಡಿಮೆಗಾರರಲ್ಲಿ ಭೂರಹಿತ ದುಡಿಮೆಗಾರರ ಪ್ರಮಾಣ ಶೇ. ೪೦.೮೩. ಇಲ್ಲಿರುವ ತಾರತಮ್ಯದ ಪ್ರಮಾಣ ತೀವ್ರವಾದುದಾಗಿದೆ. ಈ ತಾರತಮ್ಯದ ಕಾರಣದಿಂದಾಗಿ ಪ. ಜಾ. ಮತ್ತು ಪ. ಪಂ.ಗಳಲ್ಲಿ ಭೂಮಿ ಸಾಗುವಳಿಗಾರರ ಪ್ರಮಾಣ ಕಡಿಮೆ; ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ಅಧಿಕ. ಇದೇ ರೀತಿಯಲ್ಲಿ ಸಾಕ್ಷರತೆಯಲ್ಲಿ ಅಂತರವನ್ನು ಕಾಣಬಹುದು. ಆದ್ದರಿಂದ ಅಭಿವೃದ್ಧಿ ಯೋಜನೆಯಲ್ಲಿ ಜಾನ್ ರಾಲ್ಸ್ ಹೇಳುವ ಭಿನ್ನತೆಯ ನಿಯಮವನ್ನು ಅನುಸರಿಸುವುದು ಅಗತ್ಯವಾಗುತ್ತದೆ.

೨. ಕೇಂದ್ರಮಟ್ಟದಲ್ಲಾಗಲಿ ಅಥವಾ ರಾಜ್ಯಮಟ್ಟದಲ್ಲಾಗಲಿ ಉಪಯೋಜನೆಗಳಲ್ಲಿ ಮಹಿಳಾ ಆಯಾಮ ಗೈರು ಹಾಜರಾಗಿದೆ. ಯಾವುದೇ ಅಭಿವೃದ್ಧಿ ಸೂಚಿಯನ್ನು ತೆಗೆದುಕೊಂಡರೂ ಪ.ಜಾ. ಮಹಿಳೆಯರು ಅತ್ಯಂತ ಕೆಳಮಟ್ಟದಲ್ಲಿರುವುದನ್ನು ಕಾಣಬಹುದು. ಲಿಂಗ ಅಸಮಾನತೆ ಬಗ್ಗೆ ಮಾತನಾಡುವಾಗ ನಾವು ಸಾಮಾನ್ಯವಾಗಿ ಪುರುಷರು ಮತ್ತು ಮಹಿಳೆಯರ ನಡುವಿನ ಅಂತರದ ಬಗ್ಗೆ ಗಮನ ನೀಡುತ್ತೇವೆ. ಲಿಂಗ ಅಸಮಾನತೆಯಲ್ಲಿ ಪರಿಶಿಷ್ಟ ಮಹಿಳೆ ಮತ್ತು ಸಾಮಾನ್ಯ ಮಹಿಳೆಯರ ನಡುವಿನ ಅಂತರವನ್ನು ಗಮನಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಎಲ್ಲರ ಜೊತೆಯಲ್ಲಿ ಪರಿಶಿಷ್ಟರ ಅಭಿವೃದ್ಧಿಯೂ ನಡೆಯುತ್ತದೆ ಅನ್ನುವುದು ಸರಿಯಲ್ಲ. ನಿದರ್ಶನವಾಗಿ ಪ. ಜಾ. ಮಹಿಳೆಯರ ಸಾಕ್ಷರತಾ ಪ್ರಮಾಣ ೨೦೧೧ರಲ್ಲಿ ಶೇ. ೫೬.೫೧ ರಷ್ಟಾದರೆ ಸಾಮಾನ್ಯ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೬೮.೦೮. ಇಲ್ಲಿನ ಅಸಮಾನತೆ ಪ್ರಮಾಣ ಶೇ. ೧೧.೫೭ ಅಂಶಗಳು.

೩. ಈ ಉಪಯೋಜನೆಗಳು ನಿರೀಕ್ಷಿಸಿದ ಮಟ್ಟದಲ್ಲಿ ಫಲಗಳನ್ನು ನೀಡುತ್ತಿಲ್ಲ. ಎಸ್‌ಸಿಎಸ್‌ಪಿ ಯೋಜನೆಯ ಕರ್ತೃವಾದ ಪಿ. ಎಸ್. ಕೃಷನ್ ಐಎಎಸ್ (ನಿವೃತ್ತ) ಇದನ್ನು ಮತ್ತೆ ಮತ್ತೆ ಸ್ಪಷ್ಟಪಡಿಸುತ್ತಿದ್ದಾರೆ. ಬ್ಯುಸಿನೆಸ್ ಆಸ್ ಯೂಷುವಲ್ ಅನ್ನುವ ರೀತಿಯಲ್ಲಿ ಉಪಯೋಜನೆಗಳ ಅನುಷ್ಠಾನ ನಡೆದಿದೆ. ಈ ಯೋಜನೆಗಳನ್ನು ಪ್ರಜ್ಞಾಪೂರ್ವಕವಾಗಿ ಅನುಷ್ಠಾನಗೊಳಿಸಿದಾಗ ಮಾತ್ರ ಅವು ನಿರೀಕ್ಷಿತ ಫಲಗಳನ್ನು ನೀಡುವುದು ಸಾಧ್ಯ.

೪. ಈ ಉಪಯೋಜನೆಗಳಿಗೆ ಸಂಬಂಧಿಸಿದ ಅನುದಾನವನ್ನು ಸರ್ಕಾರದ ಎಲ್ಲ ಇಲಾಖೆಗಳಿಗೂ ಹಂಚಲಾಗುತ್ತದೆ. ಉದಾಹರಣೆಗೆ ೨೦೧೭-೧೮ರ ಬಜೆಟ್ಟಿನಲ್ಲಿ ಎಸ್‌ಸಿಎಸ್‌ಪಿಯ ಅನುದಾನ ರೂ. ೫೨೩೯೨ ಕೋಟಿಗಳನ್ನು ೧೦೦ ಇಲಾಖೆಗಳಿಗೆ ಹಂಚಲಾಗಿದೆ (ನೋಡಿ: ಕೇಂದ್ರ ಬಜೆಟ್ ೨೦೧೭- ೧೮: ಬಜೆಟ್ ಪ್ರೊಫೈಲ್). ಇಲ್ಲಿ ಕೇಂದ್ರೀಕೃತ ದೃಷ್ಟಿಕೋನವಿಲ್ಲ. ಅಲ್ಲಿ ನೂರು ಕೋಟಿ, ಇಲ್ಲಿ ಇನ್ನೂರು ಕೋಟಿ... ಹೀಗೆ ಹಂಚುತ್ತಿರುವುದರಿಂದ ಉಪಯೋಜನೆಯು ನಿರೀಕ್ಷಿತ ಫಲಗಳನ್ನು ನೀಡುತ್ತಿಲ್ಲ.

೫. ಕರ್ನಾಟಕದಲ್ಲಿ ಸದರಿ ಉಪಯೋಜನೆಗಳ ಅನುದಾನವನ್ನು ರಾಜ್ಯ ವಲಯ ಮತ್ತು ಜಿಲ್ಲಾ ವಲಯಗಳಿಗೆ ವಿಂಗಡಿಸಿ ವರ್ಗಾಯಿಸಲಾಗುತ್ತದೆ. ಇದರಲ್ಲಿ ೨೦೧೫-೧೬ರಲ್ಲಿ ರಾಜ್ಯ ವಲಯದ ಪಾಲು ಶೇ. ೮೨.೦೧. ಲಾಗಾಯ್ತಿನಿಂದ ಇದು ಹೀಗೆ ನಡೆದುಕೊಂಡು ಬಂದಿದೆ. ಇದರಿಂದ ಉಂಟಾಗಿರುವ ವಿಕೃತಿಯೆಂದರೆ ಪ್ರದೇಶ ನಿರ್ದಿಷ್ಟ ಸಂಗತಿಗಳಿಗೆ ಎಸ್‌ಸಿಎಸ್‌ಪಿನಲ್ಲಿ ಅವಧಾರಣೆ ದೊರೆಯುತ್ತಿಲ್ಲ. ಉದಾಹರಣೆಗೆ ರಾಜ್ಯದ ಜನಸಂಖ್ಯೆಯಲ್ಲಿ ಪ. ಜಾ. ಮತ್ತು ಪ. ಪಂ. ಜನಸಂಖ್ಯೆಯ ಪ್ರಮಾಣ ಶೇ. ೨೪.೧೦. ಆದರೆ ಕಲಬುರಗಿ ವಿಭಾಗದಲ್ಲಿ ಅಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಪ. ಜಾ. ಮತ್ತು ಪ. ಪಂ. ಜನಸಂಖ್ಯೆಯ ಪ್ರಮಾಣ ಶೇ. ೩೫.೦೩ರಷ್ಟಿದೆ. ಅಂದಮೇಲೆ ಈ ವಿಭಾಗದ ಜಿಲ್ಲೆಗಳಿಗೆ ಎಸ್‌ಸಿಎಸ್‌ಪಿ ಮತ್ತು ಟಿಎಸ್‌ಪಿ ಅನುದಾನ ಹೆಚ್ಚಿಗೆ ಹರಿಯಬೇಕು. ಆದರೆ ಇದು ಸಾಧ್ಯವಾಗುತ್ತಿಲ್ಲ. ಈ ಕಾರಣದಿಂದ ಜಿಲ್ಲೆ-ತಾಲ್ಲೂಕು ಮಟ್ಟದಲ್ಲಿ ಉಪಯೋಜನೆಯ ಅನುಷ್ಠಾನ ಬಲಯುತವಾಗಿ ಬೆಳೆಯುತ್ತಿಲ್ಲ.

೬. ಈ ಬಗೆಯ ಯೋಜನೆಗಳ ವೈಫಲ್ಯಕ್ಕೆ ನೀಡುವ ಸರಳೀಕೃತ ಕಾರಣವೆಂದರೆ ಪ. ಜಾ. ಮತ್ತು ಪ. ಪಂ.ಗಳಿಗೆ ಬಂಡವಾಳವನ್ನು ಅರಗಿಸಿಕೊಳ್ಳುವ ಸಾಮರ್ಥ್ಯವಿಲ್ಲ ಅನ್ನುವುದಾಗಿದೆ. ಅಭಿವೃದ್ಧಿಯಲ್ಲಿ ಶತ ಶತಮಾನಗಳಿಂದ ವಂಚಿತರಾದ ಜನರ ಬಂಡವಾಳವನ್ನು ಹೀರಿಕೊಳ್ಳುವ ಸಾಮರ್ಥ್ಯ ಸಹಜವಾಗಿ ಕೆಳಮಟ್ಟದಲ್ಲಿರುತ್ತದೆ. ಅದಕ್ಕಾಗಿಯೇ ತಾನೆ ವಿಶೇಷ ಕ್ರಮಗಳನ್ನು ಜಾರಿಗೊಳಿಸಿರುವುದು! ಈ ಉಪಯೋಜನೆಗಳ ಮೂಲಕ ವಂಚಿತರ, ಅಂಚಿನಲ್ಲಿರುವವರ, ಮಹಿಳೆಯರ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗುವ




ಸಾಮರ್ಥ್ಯವನ್ನು ಉತ್ತಮಪಡಿಸಬೇಕು. ಅದಕ್ಕೆ ಜಿಲ್ಲೆ-ತಾಲ್ಲೂಕು ಮಟ್ಟದಲ್ಲಿ ಸದರಿ ಕಾರ್ಯಯೋಜನೆಗಳನ್ನು ಪ್ರಜ್ಞಾಪೂರ್ವಕವಾಗಿ ಅನುಷ್ಠಾನಗೊಳಿಸುವ ಕಾರ್ಯಪಡೆಯನ್ನು ರೂಪಿಸಬೇಕು. ಎಸ್‌ಸಿಎಸ್‌ಪಿಯ, ಟಿಎಸ್‌ಪಿಯ ಅನುದಾನದ ಶೇ. ೮೦ರಷ್ಟನ್ನು ರಾಜ್ಯಮಟ್ಟದಲ್ಲಿರಿಸಿಕೊಂಡರೆ ಸದರಿ ಕಾರ್ಯ ಕ್ರಮಗಳ ಅನುಷ್ಠಾನ ಉತ್ತಮವಾಗುವುದು ಸಾಧ್ಯವಿಲ್ಲ.

೭. ಕೊನೆಯದಾಗಿ ಜಾನ್ ರಾಲ್ಸ್‌ನ ಭಿನ್ನತೆಯ ನಿಯಮದ ಆಧಾರದಲ್ಲಿ, ಲಾಗಾಯ್ತಿನಿಂದ ಹರಿದುಕೊಂಡು ಬರುತ್ತಿರುವ ತಾರತಮ್ಯಗಳನ್ನು ತೊಡೆದು ಹಾಕಲು ಸಮಾಜವೂ ಸಿದ್ಧವಿರಬೇಕು. ಆದರೆ ನಮ್ಮ ಸಮಾಜವು ಪ. ಜಾ. ಮತ್ತು ಪ. ಪಂ.ಗಳ ವಿಶೇಷ ಅಭಿವೃದ್ಧಿ ಯೋಜನೆಗಳನ್ನು ಪ್ರಜ್ಞಾಪೂರ್ವಕವಾಗಿ ಒಪ್ಪಿಕೊಂಡಿಲ್ಲ. ಈ ಕಾರಣದಿಂದ ಅವುಗಳ ಅನುಷ್ಠಾನ ಸರಿಯಾಗಿ ನಡೆಯುತ್ತಿಲ್ಲ. ಅವುಗಳ ಕಾರ್ಯಕ್ಷಮತೆ ಕೆಳಮಟ್ಟದಲ್ಲಿದೆ.

೮. ಅನೇಕ ಅಧ್ಯಯನಗಳು ತೋರಿಸುತ್ತಿರುವಂತೆ ಈ ಉಪಯೋಜನೆಗಳಿಗೆ ನೀಡಿದ ಅನುದಾನ ಸಂಪೂರ್ಣವಾಗಿ ಬಳಕೆಯಾಗುತ್ತಿಲ್ಲ ಮತ್ತು ಪ. ಜಾ. ಹಾಗೂ ಪ. ಪಂ.ಗಳ ಜನಸಂಖ್ಯೆಯ ಪರಿಮಾಣಕ್ಕೆ ಅನುಗುಣವಾಗಿ ಸರ್ಕಾರಗಳು ಎಸ್‌ಸಿಎಸ್ ಮತ್ತು ಟಿಎಸ್‌ಪಿಗಳಿಗೆ ಅನುದಾನವನ್ನು ಬಜೆಟ್ಟುಗಳಲ್ಲಿ ನೀಡಬೇಕು ಎಂಬುದರ ಪಾಲನೆಯಾಗುತ್ತಿಲ್ಲ. ಇದಕ್ಕೆ ಮುಖ್ಯ ಕಾರಣ ಪರಿಶಿಷ್ಟರ ಜನಸಂಖ್ಯೆಯ ಪರಿಮಾಣಕ್ಕೆ ಅನುಗುಣವಾಗಿ ಅನುದಾನ ನೀಡಬೇಕೆಂಬುದಕ್ಕೆ ಹಿಂದಿನ ಯೋಜನಾ ಆಯೋಗ ಪ್ರಕಟಿಸಿದ್ದ ಮಾರ್ಗದರ್ಶಿ ಸೂತ್ರಗಳಿವೆ ವಿನಾ ಕಾಯಿದೆಯ ಬಲ ಅದಕ್ಕಿಲ್ಲ. ಉಪಯೋಜನೆಗಳಿಗೆ ಮೀಸಲಿಟ್ಟ ಹಣವನ್ನು ಪೂರ್ಣವಾಗಿ ವೆಚ್ಚ ಮಾಡಬೇಕು ಮತ್ತು ಪ. ಜಾ. ಮತ್ತು ಪ. ಪಂ. ಜನಸಂಖ್ಯೆಯ ಪರಿಮಾಣಕ್ಕೆ ಅನುಗುಣವಾಗಿ ಉಪಯೋಜನೆಗಳಿಗೆ ಅನುದಾನವಿರಬೇಕು ಎಂಬುದಕ್ಕೆ ಶಾಸನವನ್ನು ಅನುಮೋದಿಸಲು ಕೇಂದ್ರ ಸರ್ಕಾರ ಸಿದ್ಧವಿಲ್ಲ. ಇಲ್ಲಿದೆ ಸಮಸ್ಯೆ. ಕರ್ನಾಟಕ ಅಂತಹ ಕಾಯಿದೆಯನ್ನೇನೋ ಜಾರಿಗೊಳಿಸಿದೆ. ಅದರ ಅನುಷ್ಠಾನವೂ ಸಮರ್ಪಕವಾಗಿಲ್ಲ.

ಬಸವಣ್ಣ ಹೇಳುತ್ತಿರುವಂತೆ ಮಾದಾರ ಚನ್ನಯ್ಯನ ಮನೆಗೆ ಕೂಡಲಸಂಗಮದೇವ ಬರುವುದನ್ನು ಕಂಡು ವೇದಗಳಿಗೆ ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನಡೆಯಬಾರದ್ದು ನಡೆದಿದೆ ಎಂದು ಅವು ನಡುಗುತ್ತಿವೆ. ಹಾಲು, ಹಾಲ ಕೆನೆ, ಬೆಲ್ಲ, ಬೆಣ್ಣೆಗಳ ವಾರಸುದಾರರನ್ನು ಸಮಾಜ ಪೋಷಿಸುತ್ತದೆ ವಿನಾ ಅಂಬಲಿ ನೇಮದವರನ್ನಲ್ಲ. ಅದಕ್ಕಾಗಿ ಅಂಬಲಿಯವರನ್ನು ಪೋಷಿಸುವ ಅಭಿವೃದ್ಧಿಯನ್ನು ರೂಪಿಸಬೇಕಾಗಿದೆ. ಅಭಿವೃದ್ಧಿಯ ಆರಂಭವು ಪರಿಶಿಷ್ಟರ ಪದತಲದಿಂದ ಆರಂಭವಾಗಬೇಕು.


**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ಸಮಾಲೋಚಕ, ನಾಲ್ಕನೆಯ ರಾಜ್ಯ ಹಣಕಾಸು ಆಯೋಗ
ದಕ್ಷಿಣ ಭಾಗ, ಮೂರನೆಯ ಮಹಡಿ, ರೇಸ್ ಕೋರ್ಸ್ ರಸ್ತೆ
ಬೆಂಗಳೂರು - ೫೬೦ ೦೦೧

# ಪ್ರೀತಿಯ ರಾಜಕಾರಣದ ಸಂದೇಶ ಬೀರಿದ ಮಹಿಳಾ ದಿನ



ಕಳೆದ ನಾಲ್ಕು ವರ್ಷಗಳಿಂದ ರಾಜ್ಯ ಮಟ್ಟದಲ್ಲಿ ಮಹಿಳಾ ದಿನಾಚರಣೆಯನ್ನು ಆಚರಿಸಲೆಂದೇ ಒಗ್ಗೂಡಿ ಕಾರ್ಯನಿರ್ವಹಿಸುತ್ತಾ ಬಂದಿರುವ ಕರ್ನಾಟಕದ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟ ಈ ಬಾರಿ ಕೊಪ್ಪಳದಲ್ಲಿ ಮಾರ್ಚ್ ೮ ಮತ್ತು ೯ರಂದು ಮಹಿಳಾ ಸಮಾವೇಶ ನಡೆಸಿತ್ತು. ದೆಹಲಿಯ ರಂಜನಾ ಪಡಿ ಮತ್ತು ಕವಿತಾ ಕೃಷ್ಣನ್ ಹಾಗೂ ತೆಲಂಗಾಣದ ದಲಿತ ಲೇಖಕಿ ಶ್ಯಾಮಲಾ ಗೋಗು ಕಾರ್ಯಕ್ರಮಕ್ಕೆ ವಿಶೇಷ ಮೆರುಗು ಮತ್ತು ಅರ್ಥವಂತಿಕೆಯನ್ನು ತಂದರು. ಕೊಪ್ಪಳ ಜಿಲ್ಲೆಯ ಜನರ ಕ್ರಿಯಾತ್ಮಕ ಭಾಗವಹಿಸುವಿಕೆಯಲ್ಲದೆ, ರಾಜ್ಯಾದ್ಯಂತ ಮಹಿಳೆಯರು ಬಂದು ಭಾಗವಹಿಸಿದ್ದು ಈ ಕಾರ್ಯಕ್ರಮದ ವಿಶೇಷ. ಇಂದಿನ ಯುವಮನಸ್ಸುಗಳ ಸ್ಪಂದನೆಯ ಅಭಿವ್ಯಕ್ತಿಯಾದ ಮತ್ತು ಭವಿಷ್ಯದ ಬಗ್ಗೆ ಭರವಸೆಯ ಕಾಮನಬಿಲ್ಲನ್ನು ಮೂಡಿಸಿದ ಈ ಸಮಾವೇಶದಲ್ಲಿ ಕಂಡು, ಕೇಳಿದ ಸ್ವಾರಸ್ಯಕರ ಸಂಗತಿಗಳ ಕೆಲವೊಂದು ತುಣುಕುಗಳು ಇಲ್ಲಿವೆ.

**ನಾವು ಪ್ರೀತಿಯ ಸಂಘರ್ಷ ನಡೆಸುತ್ತೇವೆ**

ಕೋಮು ದ್ವೇಷ, ಅಸಹಿಷ್ಣುತೆ, ಮಹಿಳಾ ದೌರ್ಜನ್ಯಗಳೇ ವಿಜೃಂಭಿಸುತ್ತಿರುವ ಕಾಲಘಟ್ಟದಲ್ಲಿ ಪ್ರೀತಿಯ ರಾಜಕಾರಣದ ಅಮೂಲ್ಯ ಸಂದೇಶವನ್ನು ಸಾರುವುದೇ ನಮ್ಮ ಗುರಿ ಎಂದ ಒಕ್ಕೂಟ ನಾವು ಪ್ರೀತಿಯ ಸಂಘರ್ಷಕ್ಕೆ ಸಿದ್ಧ ಎಂದಿತು. ಸಮಾಜದ ಎಲ್ಲ ಜನವಿಭಾಗಕ್ಕೆ ಸೇರಿದ್ದ ಸ್ತ್ರೀಪುರುಷರು ಒಟ್ಟಾಗಿ ಸೇರಿ ವಯಸ್ಸಿನ ಭೇದವಿಲ್ಲದೆ, ಜಾತಿ, ಧರ್ಮ, ವರ್ಗ ಹಾಗೂ ಲಿಂಗ ಭೇದವಿಲ್ಲದೆ ಒಟ್ಟಾಗಿ ಸೇರಿ ನಡೆಸಿದ ಚರ್ಚೆ, ಹಾಡು, ಕುಣಿತ, ಮೆರವಣಿಗೆ ಎಲ್ಲವೂ ಮಹಿಳಾ ದಿನಾಚರಣೆಯನ್ನು ಸಾರ್ಥಕಗೊಳಿಸಿತು. ಕಳೆದ ಮೂರು ತಿಂಗಳಿನಿಂದ ಜಿಲ್ಲೆಯ ಎಲ್ಲಾ ತಾಲ್ಲೂಕಿನಲ್ಲೂ ಸಂಚರಿಸಿ, ಸಂಘಟಿಸಿ, ಜಾಗೃತಿಯ ಚಳುವಳಿಯೊಂದಿಗೆ ಒಟ್ಟು ಮಾಡಿದ ಶಕ್ತಿಯ ಅಭಿವ್ಯಕ್ತಿ ಈ ಸಮಾವೇಶದಲ್ಲಿ ನಿಚ್ಚಳವಾಗಿ ಎದ್ದು ಕಾಣುತ್ತಿತ್ತು.



**ಎದ್ದು ಕಾಣುತ್ತಿದ್ದ ಯುವ ಚೈತನ್ಯ**

ಈ ಸಮಾವೇಶದ ವೈಶಿಷ್ಟ್ಯವೆಂದರೆ ಅರ್ಧಕ್ಕಿಂತ ಹೆಚ್ಚು ಜನ ಯುವಕ, ಯುವತಿಯರ ಭಾಗವಹಿಸುವಿಕೆ. ಚರ್ಚೆ, ಮಾತುಕತೆ, ಹಾಡು, ನಾಟಕ, ಊಟ, ಉಪಚಾರ, ಘೋಷಣೆ ಯಾವುದೇ ಇರಲಿ, ಅತ್ಯುತ್ಸಾಹದಿಂದ ಭಾಗವಹಿಸುತ್ತಿದ್ದ ಯುವಶಕ್ತಿಯ ಬತ್ತದ ಉತ್ಸಾಹ ಎಲ್ಲರನ್ನೂ ನಿಬ್ಬೆರಗೊಳಿಸುತ್ತಿತ್ತು. ಭಾಷಣಕಾರರು ಭಾಷಣ ಮುಗಿಸಿ ಕೆಳಗಿಳಿಯುವಷ್ಟರಲ್ಲಿ ಅವರ ಮಾತು ಮತ್ತು ಚಿತ್ರ ಕೂಡಲೇ ಫೇಸ್‌ಬುಕ್/ ವಾಟ್ಸಾಪ್‌ನಲ್ಲಿ ಲಭ್ಯವಾಗುವಂತೆ ಎಚ್ಚರ ವಹಿಸಿದ ಯುವತಂಡದ ಕಾರ್ಯಕ್ಷಮತೆ ಬೆರಗಾಗುವಂತಿತ್ತು.

**ಆಜಾದಿ ಘೋಷಣೆ**

ದೆಹಲಿಯ ಜವಹರಲಾಲ್ ವಿಶ್ವವಿದ್ಯಾಲಯದ ಕನ್ಹಯ್ಯ ಪ್ರಸಿದ್ಧಿಗೆ ತಂದ ಆಜಾದಿ ಘೋಷಣೆಯು ಸಭೆಯಲ್ಲೆಲ್ಲಾ ಮೊಳಗಿತ್ತು. ಘೋಷಣೆ ಕೂಗುವವರ ಕಲ್ಪನೆಗೆ ತಕ್ಕಂತೆ ಹೊಸ ಹೊಸ ರೂಪದಲ್ಲಿ ಮೊಳಗಿದ ಘೋಷಣೆ ಸಮಾವೇಶದ ಮುಖ್ಯ ಆಕರ್ಷಣೆಯಾಗಿತ್ತು. 'ಆಜಾದಿ ಘೋಷಣೆ ಕೂಗುವುದೂ ದೇಶದ್ರೋಹವಾಗುತ್ತದೆ' ಎಂದ ಕೇಂದ್ರ ಸಚಿವರ ಮಾತನ್ನು ಅಣಕಿಸುವಂತೆ ಅಬ್ಬರದ ಸ್ವರದಲ್ಲಿ ಈ ಸಮಾವೇಶದಲ್ಲಿ ಮೊಳಗಿದ ಘೋಷಣೆ ಮಹಿಳೆಯರ ಸ್ವತಂತ್ರ ಅಭಿವ್ಯಕ್ತಿಗೆ ಯಾರ ಹೆದರಿಕೆಯೂ ಇಲ್ಲ ಎಂಬುದನ್ನು ಸಾರುತ್ತಿತ್ತು.

**ಸುಹಾನ ಸಯ್ಯದ್‌ಳಿಗೆ ಬೆಂಬಲ**

ಮೆರವಣಿಗೆಗೆ ಸಿದ್ಧರಾಗುತ್ತಾ ನಿಂತಿದ್ದೆವು. ವಾಟ್ಸಾಪ್‌ನಲ್ಲಿ ಹರಿದು ಬಂದ ಹತ್ತಾರು ವಿಷಯಗಳ ಬಗ್ಗೆ ಚರ್ಚೆ ಬಿರುಸಿನಿಂದ ನಡೆದಿತ್ತು. ನಮ್ಮ ನಡುವೆ ಸಾಗರದಿಂದ ಬಂದ ಮಹಿಳೆಯರು ಮಾತಾಡುತ್ತಿದ್ದರು. ಅವರಲ್ಲಿ ಕೆಲವರು ಟಿ.ವಿ. ಚಾನೆಲ್‌ನ ಸಾರೆಗಮಾಪ ಕಾರ್ಯಕ್ರಮದಲ್ಲಿ ಸುಶ್ರಾವ್ಯವಾಗಿ ಹಾಡಿ ಕಿಡಿಗೇಡಿಗಳ ವಿವಾದಕ್ಕೆ ಸಿಲುಕಿದ ಸುಹಾನ ಸಯ್ಯದ್ ಅವರ ಹಾಡಿಗೆ ಸಂಬಂಧಿಸಿದಂತೆ ಮಾತುಕತೆ ನಡೆದಿತ್ತು. ಸುಹಾನಳ ಸಾಗರದ ಕಾಲೇಜಿನಿಂದಲೂ ಕೆಲವು ಹುಡುಗಿಯರು ಮೆರವಣಿಗೆಯಲ್ಲಿ ಭಾಗವಹಿಸಿದ್ದರು. ಕೂಡಲೇ ಅಲ್ಲಿ ಬುರ್ಕಾ ಧರಿಸಿದ್ದ ಮಧ್ಯಮ ವಯಸ್ಸಿನ ಮಹಿಳೆ ಮುಂದೆ ಬಂದು ನಮ್ಮೆಲ್ಲರನ್ನು ಉದ್ದೇಶಿಸಿ "ನೀವು ಸುಹಾನಳಿಗೆ ತೋರಿಸುತ್ತಿರುವ ಬೆಂಬಲ ನೋಡಿ ನನಗೆ ತುಂಬ ಖುಷಿಯಾಗುತ್ತಿದೆ. ನನಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ನನ್ನ ಮಗಳ ಹೆಸರು ಕೂಡ ಸುಹಾನ. ನಾನು ನಮ್ಮಲ್ಲಿ ಮುಸ್ಲಿಂ ಹೆಣ್ಣು ಮಕ್ಕಳ ಸಂಘವೊಂದನ್ನು ಕಟ್ಟಿ ಅವರ ಹಕ್ಕಿಗಾಗಿ ಹೋರಾಟ ಮಾಡುತ್ತಿದ್ದೇನೆ, ಎಂದು ಹೇಳಿ ತಮ್ಮನ್ನು



ಪರಿಚಯಿಸಿಕೊಂಡರು. ಅವರ ಹೆಸರು ಸಾಬೆರಾ ಬೇಗಂ. ಗಂಗಾವತಿ ತಾಲ್ಲೂಕಿನ ಮಾನವ ಹಕ್ಕು ಸಮಿತಿಯ ತಾಲ್ಲೂಕಿನ ಅಧ್ಯಕ್ಷೆ ಆಕೆ. ಅವರ ಸಂಘಟನೆಯ ಹಲವಾರು ಹೆಣ್ಣು ಮಕ್ಕಳನ್ನು ಕರೆದುಕೊಂಡು ಬಂದು ಮೆರವಣಿಗೆಯಲ್ಲಿ ಭಾಗವಹಿಸಿದ ಆಕೆಯ ಉತ್ಸಾಹ ಮೆಚ್ಚುವಂತಿತ್ತು.

**ನಮ್ಮ ದೇಹ ನಮ್ಮ ಹಕ್ಕು**

ಸಮಾವೇಶದ ಅತಿ ಮುಖ್ಯ ಘೋಷಣೆಯಾದ 'ನಮ್ಮ ದೇಹ ನಮ್ಮ ಹಕ್ಕು' ಎಂಬ ಮಾತು ಅಲ್ಲಿ ಭಾಗವಹಿಸಿದವರ ಮನದಾಳದ ಮಾತೂ ಆಗಿತ್ತು. ಕೊಪ್ಪಳ ಜಿಲ್ಲೆಯಲ್ಲಿ ವ್ಯಾಪಕವಾಗಿ ನೆಲೆಸಿರುವ ದೇವದಾಸಿ ಪದ್ಧತಿ, ಬಾಲ್ಯ ವಿವಾಹ, ಪೌಷ್ಟಿಕತೆ ಕೊರತೆ, ಶಿಶು ಮರಣ ಹಾಗೂ ಬಾಣಂತಿ ಸಾವುಗಳೇ ಹೆಚ್ಚಿರುವ ಈ ಜಿಲ್ಲೆಯಲ್ಲಿ ಮಹಿಳೆಯರು ನಮ್ಮ ದೇಹ ನಮ್ಮ ಹಕ್ಕು ಎಂದು ಹಕ್ಕೊತ್ತಾಯ ಮಾಡಿ ಘೋಷಿಸಿದ್ದು ಅತ್ಯಂತ ಮೌಲಿಕವಾಗಿತ್ತು.

ದೇವದಾಸಿ ಪದ್ಧತಿ ಕುರಿತು ಮಾತನಾಡಿದ ಶೋಭಾ ಗಸ್ತಿಯವರ ಮನದಾಳದ ಮಾತು ನೆರೆದಿದ್ದವರ ಕಣ್ಣು ತೆರೆಸುವಂತಿತ್ತು. ಶಾಲೆಗೆ ಹೋಗುವ ವಯಸ್ಸಿನಲ್ಲೇ ಅವಳಿಗೆ ಮುತ್ತು ಕಟ್ಟಿದ್ದರಿಂದ ಶಾಲೆಗೆ ಹೋಗುತ್ತಲೇ ರಾತ್ರಿಯ ಹೊತ್ತಿನಲ್ಲಿ ಅವಳು ಭಾವನಿಗೆ ಮೈ ಒಪ್ಪಿಸಬೇಕಾಗಿ ಬಂದ ಅನಿವಾರ್ಯತೆಯನ್ನು ಸಭಿಕರ ಮುಂದೆ ಬಿಚ್ಚಿಟ್ಟಳು. ಈಗ ಬಂದಿರುವ ಪೋಕ್ಸೋ ಕಾಯಿದೆ ಮುಂಚೆಯೇ ಬಂದಿದ್ದರೆ, ಎಷ್ಟೋ ಹೆಂಗಸರು ತಮ್ಮ ದೇಹವನ್ನು ರಕ್ಷಿಸಿಕೊಳ್ಳಬಹುದಿತ್ತು ಎನ್ನುವ ಶೋಭಾ ಎಸ್.ಎಸ್.ಎಲ್.ಸಿ ಮುಗಿಸಿದ ನಂತರ ಮಹಿಳಾ ಅಭಿವೃದ್ಧಿ ಮತ್ತು ಸಂರಕ್ಷಣಾ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿಕೊಂಡು ದೇವದಾಸಿ ಪದ್ಧತಿಯ ವಿರುದ್ಧ ಹೋರಾಡಿದವರು. ಪುರುಷಾಧಿಪತ್ಯದ ಸಂಕೇತವಾದ ದೇವದಾಸಿ ಪದ್ಧತಿಯನ್ನು ಕೊನೆಗಾಣಿಸಲು ನಾವೆಲ್ಲಾ ಒಟ್ಟಾಗಿ ಸೇರಿ ಹೋರಾಡಬೇಕಿದೆ. ನಮ್ಮ ದೇಹ ನಮ್ಮ ಹಕ್ಕು ಎಂಬುದನ್ನು ಜಗತ್ತಿಗೆ ಸಾರೋಣ. ಆಗ ಮಾತ್ರ ನಮ್ಮ ಮಗಳು ಜಗದ ಬೆಳಕಾಗಬಲ್ಲಳು ಮತ್ತು ಆಗ ನಮ್ಮ ನಡಿಗೆ ಸಮತೆಯೆಡೆಗೆ ಸಾಗುತ್ತದೆ.

**ಮೆರವಣಿಗೆ ಹೊರಡುತ್ತೇವೆ**

ಮಹಿಳಾ ದಿನದ ಬಹುಮುಖ್ಯ ಆಕರ್ಷಣೆ ಮೆರವಣಿಗೆ. ಮಹಿಳೆಯರು ಬಹಿರಂಗವಾಗಿ ತಮ್ಮ ಶಕ್ತಿಯನ್ನು ಪ್ರದರ್ಶಿಸುವ ಕ್ರಿಯೆ. ಹಾಗೆಯೇ ಅವರ ಬಗೆಗಿನ ಕಾಳಜಿಗೆ ಬೆಂಬಲದ ನೀರೆರೆಯುವವರು ತಮ್ಮ ಕಾಳಜಿಯನ್ನು ತೋರಿಸಲೊಂದು ಅವಕಾಶ. ಮೊದಲ ದಿನದ ಬಿಳಿಯುಡುಪಿನ ಮೌನ ಪ್ರದರ್ಶನದ ನಂತರ ಎರಡನೆಯ ದಿನದ ಬೃಹತ್ ಮೆರವಣಿಗೆ ಕೊಪ್ಪಳದ ಜನತೆಗೂ ಮಿಂಚಿನ ಸಂಚಾರವಾದಂತಿತ್ತು. ಕೊಪ್ಪಳದ ಬಿರುಬೇಸಿಗೆಯಲ್ಲೂ ಬಿಸಿಲಿನ ಝಳವನ್ನು ಲೆಕ್ಕಿಸದೆ ನಾಲ್ಕು ಸಾವಿರಕ್ಕೂ ಹೆಚ್ಚು ಸ್ತ್ರೀಪುರುಷರು ಸಮಾಜದ ಎಲ್ಲ ಜನವಿಭಾಗಗಳನ್ನು ಸಂಕೇತಿಸಿ ಮೆರವಣಿಗೆಯಲ್ಲಿ ಭಾಗವಹಿಸಿ ಪ್ರೀತಿಯ ಸಂದೇಶ ಸಾರಿದರು.

*–ಸಂ.*

## ಸುದ್ದಿ ಚಿತ್ರ






*ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ ಹಾಗೂ ಭಾರತೀಯ ಮಹಿಳಾ ಒಕ್ಕೂಟ, ಬೆಂಗಳೂರು ಜಿಲ್ಲಾ ಮಂಡಳಿ ಜಂಟಿಯಾಗಿ ಬೆಂಗಳೂರಿನ ಗಾಂಧಿ ಭವನದಲ್ಲಿ ಆಯೋಜಿಸಿದ್ದ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆ ಕಾರ್ಯಕ್ರಮದಲ್ಲಿ ನವಕರ್ನಾಟಕ ಪ್ರಕಟಿಸಿರುವ, ವಿಮಲಾ ಫರೂಕಿಯವರ 'ಭಾರತದ ಮಹಿಳಾ ಚಳುವಳಿಯ ಸಂಕ್ಷಿಪ್ತ ಚರಿತ್ರೆ' (ಅನು : ಎ. ಜ್ಯೋತಿ) ಪುಸ್ತಕವನ್ನು ಡಾ॥ ವಸುಂಧರಾ ಭೂಪತಿಯವರು ಲೋಕಾರ್ಪಣೆ ಮಾಡಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀಮತಿ ಎ. ಜ್ಯೋತಿ ವಹಿಸಿದ್ದರು. ವೇದಿಕೆಯಲ್ಲಿ ಎಐಟಿಯುಸಿ ರಾಜ್ಯ ಪ್ರಧಾನ ಕಾರ್ಯದರ್ಶಿ ಕಾ. ವಿಜಯ ಭಾಸ್ಕರ್ ಹಾಗೂ ಇತರರು ಉಪಸ್ಥಿತರಿದ್ದರು.*

ದೇಶದ ಜನರ ಒಳ ಸ್ವಾತಂತ್ರ್ಯ ಆ ದೇಶದ ಮಹಿಳೆಯ ಬಿಡುಗಡೆಯಲ್ಲಿದೆ. ಶಿಕ್ಷಣ, ಸಾಮಾಜಿಕ ಉತ್ಪಾದನೆಯಲ್ಲಿ ಪಾಲ್ಗೊಳ್ಳುವಿಕೆ, ವೈವಾಹಿಕ ಹಕ್ಕಿನ ಆಯ್ಕೆ ಸ್ವಾತಂತ್ರ್ಯದ ಅರಿವು, ಸಮಾಜದಲ್ಲಿ ಘನತೆಯ ಬದುಕು ಮತ್ತು ಗೌರವದ ಸ್ಥಾನ–ಮಾನಗಳು, ದೇಶದ ಕಾನೂನು ರಚನೆಯಲ್ಲಿ ಅಂದರೆ ನೀತಿ–ನಿರೂಪಣೆಯಲ್ಲಿ ಪಾಲುದಾರಿಕೆ ಇವು ಮಹಿಳಾ ಸ್ವಾತಂತ್ರ್ಯದ ಮೊದಲ ಮೆಟ್ಟಿಲುಗಳು. ಅವುಗಳನ್ನು ಆಯಾ ದೇಶ/ಸಮಾಜ ಮಹಿಳೆಗೆ ನೀಡಿದೆಯೇ ಎಂಬ ಪ್ರಶ್ನೆ ಏಳುವುದು ಸಹಜ. ಮಹಿಳಾ ಅಧ್ಯಯನದ ಈ ಮೂಲ ಪ್ರಶ್ನೆಗಳನ್ನಿಟ್ಟುಕೊಂಡು ಡಾ॥ ಬಾಬಾಸಾಹೇಬ್ ಅಂಬೇಡ್ಕರ್‌ರು ಭಾರತದ ಮಹಿಳೆಯ ವಿಮೋಚನೆಗಾಗಿ ಹಿಂದೂ ಕೋಡ್‌ಬಿಲ್ ಕರಡು ತಯಾರಿಸಿದರು; ಅದರ ಅಂಗೀಕಾರಕ್ಕಾಗಿ ಸತತ ಪ್ರಯತ್ನಿಸಿದರು.

ಮಹಿಳೆಯರ ಅಧಿಕಾರಹೀನತೆಗೆ ಮನುಸ್ಮೃತಿ ಅಂಥ ಧರ್ಮಶಾಸ್ತ್ರ ಕಾರಣ. ಮಹಿಳೆಯರ ಪರಾಧೀನತೆಗೂ ಜಾತಿ ವ್ಯವಸ್ಥೆಗೂ ನಿಕಟವಾದ ಸಂಬಂಧವಿದ್ದು, ಮಹಿಳೆಗೆ ಸಾಂಸ್ಕೃತಿಕ ನಿರ್ಬಂಧಗಳನ್ನು ಹಾಕುವುದರ ಮೂಲಕವೇ ಅದರ ಅಡಿಪಾಯ ಭದ್ರವಾಗಿದೆ ಎಂದು ವಾದಿಸಿ, ಧರ್ಮದ ವಿಶ್ಲೇಷಣೆಯಲ್ಲಿ ಡಾ॥ ಅಂಬೇಡ್ಕರ್‌ರು ಸಮ್ಮಿಶ್ರ ವಿವಾಹಗಳ ವಸ್ತುವನ್ನಿಟ್ಟುಕೊಂಡು ಪ್ರಶ್ನಿಸುತ್ತಾರೆ. ಯಾವುದನ್ನು ಧರ್ಮವೆಂದು ಕರೆಯಬಹುದು ? ಎಂಬ ಪ್ರಶ್ನೆಯನ್ನಿಟ್ಟು – "ಸಮಾನತೆ, ಸೋದರತ್ವ ; ಸ್ವಾತಂತ್ರ್ಯ ಹಾಗೂ ನ್ಯಾಯದ ಸಹ ಅಸ್ತಿತ್ವವನ್ನು ಧರ್ಮವೆಂದು ಕರೆಯಬಹುದು" – ಎಂದು ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನು ಮಹಿಳೆಯ ಹಕ್ಕುಗಳವರೆಗೂ ವಿಸ್ತರಿಸುತ್ತಾರೆ. ಮನುಸ್ಮೃತಿಯಲ್ಲಿ ನ್ಯಾಯ ಎನ್ನುವುದು ಇಲ್ಲವೆಂದು ಒತ್ತಿ ಹೇಳುತ್ತಾರೆ.

ಭಾರತದ ಮನುಷ್ಯನ ವಿಕಾಸದ ಹಾಗೂ ಆತ್ಮೋನ್ನತಿಯ ಹಂತಗಳನ್ನು ನಿರೂಪಿಸಿದ ಮನುವಿನ ವಿಸ್‌ಡಮ್/ಆಶ್ರಮಧರ್ಮ ಪದ್ಧತಿಯಲ್ಲಿ ಮಹಿಳೆ ಇಲ್ಲ. ಚಾತುರ್ವರ್ಣ್ಯ ಪದ್ಧತಿಯಲ್ಲಿ ಅವಳಿಗೆ ಸ್ಥಾನಮಾನಗಳನ್ನು ಕಲ್ಪಿಸಲಾಗಿಲ್ಲ. ಹೀಗಾಗಿ ಇದೊಂದು ಅನೈಸರ್ಗಿಕ ಮತ್ತು ಅವೈಜ್ಞಾನಿಕವಾದ ಆಗಿದ್ದು, ಸ್ಥಾಪಿತ ನಂಬಿಕೆಯ ಮೂಲಕ ಇದನ್ನು ಜನಮಾನಸದಲ್ಲಿ ಕಟ್ಟಲಾಗಿದೆ ಎಂದು ಅಂಬೇಡ್ಕರ್‌ರು ವಾದಿಸಿದರು. ಈ ಚಾತುರ್ವರ್ಣ್ಯ ಪದ್ಧತಿಯಲ್ಲಿ ಸ್ತ್ರೀಯರ ಸ್ಥಾನ–ಮಾನ ಏನು ? ಎಂದು ಖಾರವಾಗಿ ಪ್ರಶ್ನಿಸಿದರು. "ಸ್ತ್ರೀಯರು ನಾಲ್ಕು ವರ್ಣಗಳಲ್ಲಿ ಹಂಚಿಕೊಳ್ಳತಕ್ಕದ್ದೇ? ಅಥವಾ ತಮ್ಮ ಗಂಡಂದಿರ ವರ್ಣಕ್ಕೆ ಸೇರತಕ್ಕದ್ದೇ ? ಮದುವೆಯಿಂದಲೇ ಹೆಣ್ಣಿನ ಸ್ಥಾನ ನಿರ್ಣಯವಾಗುವುದಾದರೆ ಯೋಗ್ಯತಾನುಸಾರ ವರ್ಣವೆಂಬ ಚಾತುರ್ವರ್ಣ್ಯದ ತತ್ವವೆಲ್ಲಿ ಉಳಿಯಿತು. ಯೋಗ್ಯತಾನುಗುಣವಾಗಿಯೇ ಅದರ ವರ್ಣವನ್ನು ನಿರ್ಣಯಿಸುವುದಾದರೆ ಆ ವರ್ಗೀಕರಣ ನಾಮ ಮಾತ್ರವೇ ಅಥವಾ ನಿಜವಾದದ್ದೇ? ನಾಮ ಮಾತ್ರ ಎಂದಾದರೆ ಅದು ನಿಷ್ಪ್ರಯೋಜಕ ಎಂದಾಗುತ್ತದೆ ಮತ್ತು ಚಾತುರ್ವರ್ಣ್ಯವು ಸ್ತ್ರೀಯರಿಗೆ ಅನ್ವಯಿಸುವುದಿಲ್ಲವೆಂದು ಒಪ್ಪಬೇಕಾಗುತ್ತದೆ. ಅದು ನಿಜವಾದ ವರ್ಗೀಕರಣವೆಂದ ಪಕ್ಷದಲ್ಲಿ, ನಿಯಮಕ್ಕನುಸಾರವಾಗಿ ಸ್ತ್ರೀಯರನ್ನು ಯೋಧರನ್ನಾಗಿ, ಪುರೋಹಿತರನ್ನಾಗಿ ಒಪ್ಪಿಕೊಳ್ಳುವಿರಾ ? ಹಿಂದೂ ಸಮಾಜದಲ್ಲಿ

**ಭಾರತಕ್ಕೆ ಶ್ರೇಷ್ಠ ಸಂವಿಧಾನವನ್ನು ನೀಡಿದ ಅಂಬೇಡ್ಕರ್‌ರು ಶಾಸನಾತ್ಮಕ ಹಕ್ಕುಗಳನ್ನು ಕೊಡುವ ಮೂಲಕ ಭಾರತದ ಮಹಿಳೆಯನ್ನು ಪುರುಷನ ಸರಿಸಮಾನ ಸ್ಥಾನದಲ್ಲಿ ನಿಲ್ಲಿಸಿದರು. ಕೇವಲ ದಲಿತ ಮಹಿಳೆಯರಿಗಾಗಿ ಈ ಕಾನೂನುಗಳನ್ನು ರೂಪಿಸಲಿಲ್ಲ. ಸಮಸ್ತ ಭಾರತದ ಮಹಿಳೆಯರಿಗಾಗಿ ಮಾಡಿದರು. ಮಹಿಳಾವಾದಿಗಳು, ಮಹಿಳಾ ಹೋರಾಟಗಾರ್ತಿಯರು, ಪ್ರಗತಿಪರರು ಈ ದಿಶೆಯಲ್ಲಿ ತಮ್ಮ ಅರಿವನ್ನು ವಿಸ್ತರಿಸಿಕೊಳ್ಳಬೇಕಿದೆ. ಇದು ಈ ನೆಲದ ಜನರ, ನೆಲದ ಸಮಾನತೆಯ ತತ್ವ . ಮಹಿಳೆಯನ್ನು ದೂರವಿತ್ತ ಯಾವ ಸಮಾಜ/ದೇಶವೂ ಬದುಕುವುದಿಲ್ಲವೆಂಬುದು ಅಂಬೇಡ್ಕರ್‌ರು ನಂಬಿದ ಸಾಮಾಜಿಕ ತತ್ವಜ್ಞಾನವಾಗಿದೆ.**



ಉಪಾಧ್ಯಾಯಿನಿಯರುಂಟು; ಸ್ತ್ರೀ ಬ್ಯಾರಿಸ್ಟರುಗಳುಂಟು, ಹೆಂಡ ತಯಾರಿಸುವ, ಕಸಾಯಿಖಾನೆ ನಡೆಸುವ ಸ್ತ್ರೀಯರನ್ನು ನಮ್ಮ ಸಮಾಜ ಒಪ್ಪಿಕೊಂಡಿತು. ಚಾತುರ್ವರ್ಣ್ಯವನ್ನು ಸ್ತ್ರೀಯರಿಗೆ ಅನ್ವಯಿಸುವುದರಿಂದಲೇ ಹೀಗಾಗುವುದೆಂದು ಹೇಳುವುದು ಸಾಹಸದ ಮಾತು. ಈ ಬಗೆಯ ಕಷ್ಟಗಳಿರುವುದರಿಂದ ಚಾತುರ್ವರ್ಣ್ಯ ಪದ್ಧತಿಯ ಪುನರುಜ್ಜೀವನ ಸಾಧ್ಯವೆಂದು ಯಾವ ಬುದ್ಧಿವಂತನೂ ನಂಬಲಾರನು" ಎಂದು ಶ್ರೇಣಿಕ ಪದ್ಧತಿಯನ್ನು ವಿರೋಧಿಸಿದರು.

ಈ ಚಾತುರ್ವರ್ಣ್ಯ ಪದ್ಧತಿಯು ಆರಂಭದಲ್ಲಿ ವರ್ಗ ಸ್ವಭಾವಗಳನ್ನು ಹೊಂದಿದ್ದನ್ನು, ಅನಂತರ ಅದು ಜಾತಿ ಸ್ವರೂಪವನ್ನು ಪಡೆದು ಸಾಮಾಜಿಕ ಒಳಗೊಳ್ಳುವಿಕೆ, ಸಮಪಾಲುದಾರಿಕೆ ಮತ್ತು ಸಹಭಾಗಿತ್ವವನ್ನು ನಿರಾಕರಿಸುವ ಮೂಲಕ ಮೇಲ್ವರ್ಗ, ಕೆಳವರ್ಗ ಮತ್ತು ಕೀಳುವರ್ಗಗಳ ಜೊತೆ ಮೇಲು, ಕೀಳು ಎಂಬ ಅಸ್ಪೃಶ್ಯತಾಚರಣೆ ಮೂಲಕ ಅಖಂಡ ಭಾರತವನ್ನು ಭಾರತ ಮತ್ತು ಬಹಿಷ್ಕೃತ ಭಾರತವಾಗಿ ವಿಭಜಿಸಿತು. ಚಾತುರ್ವರ್ಣ್ಯದ ಅತ್ಯಂತ ಕೆಳವರ್ಣವಾದ ಶೂದ್ರವರ್ಗದಲ್ಲಿಯ ಅಂಚಿನ ಸಮುದಾಯ/ಜಾತಿ ಜನರೊಂದಿಗೆ ನಾಲ್ಕೂ ವರ್ಣದ ಮಹಿಳೆಯರೂ ಸೇರಿಸಲ್ಪಟ್ಟಿದ್ದಾರೆ. ಜಾತಿ ಶ್ರೇಣೀಕರಣದಲ್ಲಿ ಮೇಲಿನಿಂದ ಕೆಳಕ್ಕೆ ಹೋದಂತೆ ಅವರ ಶೋಷಣೆ ಹೆಚ್ಚುತ್ತ ಹೋಗುತ್ತದಾದರೂ ಅಧಿಕಾರ ವಂಚಿತ ಕೇಂದ್ರಗಳಲ್ಲಿ ಸಮಾನ ಸ್ಥಿತಿಯಲ್ಲಿದ್ದಾರೆ. ದಲಿತ ಮತ್ತು ಭಾರತದ ಎಲ್ಲ ಮಹಿಳೆಯರು ಅಧಿಕಾರ ಮತ್ತು ಆಸ್ತಿವಂಚಿತರಾಗಿರುವುದರಿಂದ ಬಹುಜನ ವರ್ಗವೊಂದು ಹೀನಸ್ಥಿತಿಯನ್ನು ತಲುಪಿತ್ತು ಮತ್ತು ಸೇವಕ ವರ್ಗವಾಗಿ ನಿಯುಕ್ತಿಗೊಂಡಿತ್ತು.

ಭಾರತ ಸ್ವತಂತ್ರಗೊಂಡು ಸಂವಿಧಾನವು ಅನುಷ್ಠಾನಗೊಂಡರೂ ಮಹಿಳೆಯರ ಜೀವನ ಕ್ರಮದಲ್ಲಿ ಏನೂ ಸುಧಾರಣೆ ಬರಲಿಲ್ಲ. ಮಹಿಳಾ ಅಧ್ಯಯನದ ಮೂಲಕವೇ ಭಾರತದ ಸಮಾಜ ಅಧ್ಯಯನ ಮಾಡಿ, ಪ್ರಯೋಗಶೀಲ ಸಮತಾ ಸಮಾಜವೊಂದನ್ನು ಕ್ರಾಂತಿಯ ಮೂಲಕ ಕಟ್ಟಿದ ಬುದ್ಧನ ಚಿಂತನೆಗಳಿಂದ ಪ್ರಭಾವಿತರಾಗಿದ್ದ ಅಂಬೇಡ್ಕರ್‌ರು ಬಾಲಿಕಾ ವಿವಾಹ, ಸತಿ ಪದ್ಧತಿ, ಬಲವಂತದ ವೈಧವ್ಯ, ಬಲವಂತದ ಬ್ರಹ್ಮಚರ್ಯ, ವಯಸ್ಸಾದ ಪುರುಷರು ಮತ್ತು ವಿಧುರರೊಡನೆ ಬಾಲಿಕಾ ವಿವಾಹ ಇವು ಹೇಗೆ ಮಹಿಳೆಯ ಮೂಲಕವೇ ಸಮಾಜವನ್ನು ನಿಯಂತ್ರಿಸುವ ಜಾತಿಯ ಕಟ್ಟಳೆಗಳಾಗಿವೆ ಎಂಬುದನ್ನು ತಮ್ಮ "ಭಾರತದಲ್ಲಿ ಜಾತಿಗಳು" (ಜಾತಿಗಳ ಹುಟ್ಟು, ರಚನೆ, ಸ್ವರೂಪ) ಎಂಬ ಸಂಶೋಧನಾ ಅಧ್ಯಯನದ ಮೂಲಕ ಕಂಡುಕೊಂಡರು.

"ವರ್ಗ ಜಾತಿ ಹಾಗೂ ಪಿತೃಪ್ರಧಾನ ವ್ಯವಸ್ಥೆಗಳ ಪರಾಧೀನತೆಯ ಮುಖಾಂತರ ಭಾರತದಲ್ಲಿ ಮಹಿಳೆಯರ ಪರಾಧೀನತೆ ತೀವ್ರಗೊಂಡಿದೆ. ಭಾರತೀಯ ಸಂದರ್ಭದಲ್ಲಿ ಜಾತಿ ವ್ಯವಸ್ಥೆ ಮಹಿಳೆಯ ಪರಾಧೀನತೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜಾತಿ ಮೂಲದ ಶ್ರಮ ವಿಭಜನೆ, ಜಾತಿ ಪಂಚಾಯತಿ, ಜಾತಿ ಮೂಲದ ವೈಯಕ್ತಿಕ ಕಾನೂನುಗಳು ಮಹಿಳೆಯ ಪರಾಧೀನತೆಗೆ ಕೊಡುಗೆ ಸಲ್ಲಿಸುತ್ತದೆ. ವಿವಾಹ, ವಿವಾಹ ವಿಚ್ಛೇದನ, ಮರುವಿವಾಹ, ಉತ್ತರಾಧಿಕಾರ ಇತ್ಯಾದಿಗಳಲ್ಲಿ ಜಾತಿ ಆಧಾರಿತ ಕಾನೂನುಗಳು ಹಾಗೂ ನಿರ್ಬಂಧಗಳು ಮಹಿಳೆ ಪುರುಷನನ್ನು ಅವಲಂಬಿಸುವಂತೆ ಮಾಡಿ ನಿರ್ಗತಿಕಳನ್ನಾಗಿಸುತ್ತದೆ" – ಇವೆಲ್ಲವೂ ಪುರುಷಾಧಿಕಾರವನ್ನು ಹೊಂದಿದ್ದು, ಮಹಿಳೆಗೆ ವಿಚ್ಛೇದನದ ಅಧಿಕಾರವನ್ನು ನೀಡಿಲ್ಲ. ಭಾರತ ಸಮಾಜದ ಸಂಕೀರ್ಣತೆಗಳ ಸಿಕ್ಕು ಬಿಡಿಸುವುದು ಮತ್ತು ಜಾತಿ ವಿನಾಶ ಮಾಡುವುದು ಮಹಿಳೆಯ ಆಯ್ಕೆ ಮತ್ತು ನಿರಾಕರಣೆ ಸ್ವಾತಂತ್ರ್ಯದಿಂದ ಮಾತ್ರ ಸಾಧ್ಯವೆಂದು ಅರಿತ ಅಂಬೇಡ್ಕರ್‌ರು ಮಹಿಳೆಯರ ಬಿಡುಗಡೆಯಲ್ಲಿಯೇ ಸಾಮಾಜಿಕ ವಿಮೋಚನೆ ಇದೆ ಎಂದು ನಂಬಿದ್ದರು. ಮಹಿಳೆಗೆ ಸಂವಿಧಾನಿಕವಾದ ಹಕ್ಕು ಮತ್ತು ಅಧಿಕಾರ ಸಿಗಬೇಕೆಂಬ ಸಂಕಲ್ಪದಿಂದ ಸಂವಿಧಾನ ರಚನೆಯ ನಂತರ "ಸ್ವತಂತ್ರ ಭಾರತದ ಆಶಯಗಳು ಹಾಗೂ ಆಧುನಿಕ ಸಮಾಜದ ಸಮಾನತೆಯ ಪರಿಕಲ್ಪನೆಗಳಿಗೆ ತಕ್ಕುದಾದ 'ಹಿಂದೂ ಕಾನೂನು ಸಂಹಿತೆ'ಯನ್ನು ನಿರೂಪಿಸುವ ಜವಾಬ್ದಾರಿಯನ್ನು ವಹಿಸಿಕೊಂಡರು. ಭಾರತೀಯ ಮಹಿಳೆಯರ ಹಿತದ ದೃಷ್ಟಿಯಿಂದ ಈ ಕಾನೂನು ಮುಖ್ಯವೆಂದು ವಾದಿಸಿದರು."

ಹಿಂದೂಗಳು ತಮ್ಮ ಪ್ರಮಾಣ ಗ್ರಂಥಗಳೆಂದು ನಂಬಿದ್ದ ಶಾಸ್ತ್ರ, ಪುರಾಣ, ಸ್ಮೃತಿ, ಕಾವ್ಯಗಳಲ್ಲಿ ಪ್ರತಿಪಾದಿಸಲಾಗಿದ್ದ ಸಾಮಾಜಿಕ ಆಚರಣೆ, ಅಲ್ಲಿಯ ನೈತಿಕ–ಸಾಂಸ್ಕೃತಿಕ ಮೌಲ್ಯಗಳು ಹಾಗೂ ಈ ಹಿಂದೆ ಸರ್ ಬಿ. ಎನ್. ರಾವ್ ಸಮಿತಿ ಸಲ್ಲಿಸಿದ್ದ ವರದಿ, ಬ್ರಿಟಿಷ್ ಸರಕಾರದ ಅತ್ಯುನ್ನತ ಕಾನೂನು ನಿರೂಪಕ ಸಮಿತಿಯಾಗಿದ್ದ ಪ್ರೈವಿ ಕೌನ್ಸಿಲ್‌ನ ತೀರ್ಪುಗಳನ್ನು ಅಧ್ಯಯನ ಮಾಡಿ, ಅವುಗಳ ಆಧಾರದಲ್ಲಿ ಮಹಿಳೆಯರ ಸಬಲೀಕರಣಕ್ಕಾಗಿ 'ಹಿಂದೂ ಕಾನೂನು ಸಂಹಿತೆ'ಯ ಕರಡನ್ನು ಸಿದ್ಧಪಡಿಸಿದರು. ಈ ಕರಡು ಮಸೂದೆಯಲ್ಲಿ ಮುಖ್ಯವಾಗಿ ಏಳು ಪ್ರಸ್ತಾವನೆಗಳನ್ನು ಮಂಡಿಸಿತು.

೧. ಮೃತನಾದ, ಗಂಡಸಿನ ಹೆಣ್ಣುಮಕ್ಕಳಿಗೆ, ಗಂಡುಮಕ್ಕಳಿಗೆ ಸಮನಾದ ಆಸ್ತಿಯ ಪಾಲು.
೨. ವಿಧವೆಯರು ಪಡೆದ ಆಸ್ತಿಯ ಮೇಲೆ ಅವರಿಗೆ ಸಂಪೂರ್ಣ ಅಧಿಕಾರ.
೩. ಬಹುಪತ್ನಿತ್ವದ ನಿರಾಕರಣೆ.
೪. ಅಂತರ್ಜಾತೀಯ ವಿವಾಹಕ್ಕೆ ಅವಕಾಶ.
೫. ಹಿಂದೂಗಳು ಅನ್ಯಜಾತಿಯ ಮಕ್ಕಳನ್ನು ದತ್ತು ತೆಗೆದುಕೊಳ್ಳುವ ಅಧಿಕಾರ.
೬. ಹೆಂಡತಿಗೆ ವಿವಾಹ ವಿಚ್ಛೇದನಕ್ಕೆ ಮನವಿ ಸಲ್ಲಿಸುವ ಹಕ್ಕು.
೭. ಅವಿಭಜಿತ ಆಸ್ತಿ ಪದ್ಧತಿಯನ್ನು ವಿಸರ್ಜಿಸಿ, ವೈಯಕ್ತಿಕ ಆಸ್ತಿ ಪದ್ಧತಿಗೆ ಕಾನೂನು ಮಾನ್ಯತೆ ನೀಡುವುದು.

ಈ ಏಳು ಅಂಶಗಳು ಮುಖ್ಯವಾಗಿ ಮಹಿಳೆ ಆಸ್ತಿ ಹಕ್ಕು, ವಿವಾಹ ಮತ್ತು ವಿಚ್ಛೇದನದ ಹಕ್ಕು ಮಕ್ಕಳನ್ನು ದತ್ತು ಪಡೆಯುವ ಹಕ್ಕುಗಳಲ್ಲಿ ವಿಸ್ತರಿಸಿಕೊಂಡಿದೆ. ಅವುಗಳನ್ನು ಅಂಬೇಡ್ಕರ್‌ರು ಈ ಕೆಳಗಿನಂತೆ ವಿವರಿಸಿದ್ದಾರೆ.

**ಆಸ್ತಿ ಹಕ್ಕು**

ಹಿಂದೂ ವಾರಸುದಾರಿಕೆಗೆ ಸಂಬಂಧಿಸಿದಂತೆ ಭಾರತದಲ್ಲಿ ಜಾರಿಯಲ್ಲಿದ್ದ ಪ್ರಾಚೀನ ನ್ಯಾಯಶಾಸ್ತ್ರದ ಗ್ರಂಥಗಳಾದ **ಮಿತಾಕ್ಷರ** ಮತ್ತು **ದಯಾಭಾಗ್**ಗಳನ್ನು ಆಧರಿಸಿದ್ದ ನ್ಯಾಯಿಕ ಪದ್ಧತಿಗಳನ್ನು ಉದ್ಧರಿಸಿ "ಮಿತಾಕ್ಷರ ಪದ್ಧತಿಯು ವಂಶಸರಣಿಯಲ್ಲಿ ಮಾತ್ರ ಪ್ರಾಶಸ್ತ್ಯ ನೀಡುತ್ತಿದೆ. ದಯಾಭಾಗದಲ್ಲಿ ನೇರ ಸಂತಾನ ಮಾತ್ರ ವಾರಸುದಾರಿಕೆಗೆ ಅರ್ಹವಾಗಿದೆ. ಆದ್ದರಿಂದ ದಯಾಭಾಗ ನಿಯಮವನ್ನು ಸದರಿ ಕಾಯ್ದೆಯಲ್ಲಿ ಅಳವಡಿಸಿದರು.

ಈ ಕಾನೂನು ಮಹಿಳೆಯ ಹಕ್ಕುದಾರಿಕೆಯನ್ನು ವಿಸ್ತರಿಸಿತು. ಮೃತ ಹಿಂದೂ ಪುರುಷನ ಆಸ್ತಿಯಲ್ಲಿ, ಆತನ ವಿಧವೆ, ಮೃತ ಹೆಣ್ಣುಮಕ್ಕಳು, ಆತನ ಗಂಡುಮಕ್ಕಳ ವಿಧವೆಯರು ಗಂಡುಮಕ್ಕಳಷ್ಟೇ ಆಸ್ತಿಯಲ್ಲಿ ಸಮಾನ ಪಾಲುದಾರರು. ಅವರ ಪಾಲು ಗಂಡುಮಕ್ಕಳ ಅರ್ಧದಷ್ಟಿರುತ್ತದೆ. ೧೯೩೭ರ 'ಹಿಂದೂ ಸ್ತ್ರೀಯರ ಆಸ್ತಿ ಹಕ್ಕು ಕಾಯ್ದೆ'ಯು ಈಗಾಗಲೇ ಕಾನೂನುಬದ್ಧಗೊಳಿಸಿದ್ದನ್ನು ಉಲ್ಲೇಖಿಸಿ ಸದರಿ ಕಾಯ್ದೆ ಸ್ತ್ರೀ ವಾರಸುದಾರಿಕೆಯನ್ನು ಸೇರಿಸಿದ್ದು ಮಹತ್ವದ್ದಾಗಿದೆ. ಉಯಿಲು ಬರೆಯುವ ಮತ್ತು ತನ್ನ ಆಸ್ತಿಯನ್ನು ಪರಭಾರೆ ಮಾಡುವ ಅಧಿಕಾರವನ್ನು ಮಹಿಳೆಗೆ ನೀಡುತ್ತದೆ. ಉಯಿಲು ಬರೆಯದೆ ಮರಣಿಸಿದ ಸಂದರ್ಭದಲ್ಲಿ ಆಸ್ತಿಯ ಉತ್ತರಾಧಿಕಾರವನ್ನು ಸ್ತ್ರೀ–ಪುರುಷರಿಗೂ ಸಮಾನ ಅಧಿಕಾರವೆಂದು ಘೋಷಿಸುತ್ತದೆ.

ಪ್ರಸ್ತುತ ಮಸೂದೆಯು "ಸ್ತ್ರೀ ಧನ" ಮತ್ತು "ಸ್ತ್ರೀ ಆಸ್ತಿ" ಎಂಬ ಆಗಲೇ ಜಾರಿಯಲ್ಲಿದ್ದ ಪದ್ಧತಿಗಳನ್ನು ಮರುಪರಿಶೀಲಿಸಿ ಗಂಡು ಹೆಣ್ಣಿನ ಸಮಾನತೆಯ ದೃಷ್ಟಿಯಿಂದ – "ಸ್ತ್ರೀ ಧನದ ವಾರಸುದಾರರ ಪಟ್ಟಿಯಲ್ಲಿ ಮೃತ ಸ್ತ್ರೀಯ ಗಂಡು ಮಕ್ಕಳನ್ನು ಸೇರಿಸಿ, ಆಸ್ತಿಯಲ್ಲಿ ಹೆಣ್ಣುಮಕ್ಕಳಿಗೆ ಒಂದು ಪಾಲನ್ನು, ಗಂಡುಮಕ್ಕಳಿಗೆ ಅರ್ಧ ಪಾಲನ್ನು ನಿಗದಿಪಡಿಸುತ್ತದೆ. ಹಾಗೂ 'ಸ್ತ್ರೀ ಆಸ್ತಿ' ಮೇಲೆ ವಾರಸುದಾರಳು ಸಂಪೂರ್ಣ ಹಕ್ಕು ಸ್ವಾಮ್ಯವನ್ನು ಹೊಂದಿರುತ್ತಾಳೆ. ಹಾಗೂ ಅವಳ ಮರಣಾನಂತರ ಆಕೆಯ ದಿವಂಗತ ಪತಿಯ ಇತರೆ ವಾರಸುದಾರರು ಮರಳಿ ಪಡೆಯುವ ಹಕ್ಕನ್ನು ಕೈದು ಮಾಡುತ್ತದೆ.

ಮಹಿಳೆಗೆ ಈ ಸ್ವಾತಂತ್ರ್ಯವನ್ನು ಹಿಂದೂ ಕಾನೂನು ನೀಡಿರಲಿಲ್ಲ. ಆದರೆ ಹಿಂದೂಗಳು ಸಮರ್ಥಿಸುವ 'ಬೃಹಸ್ಪತಿ ಸ್ಮೃತಿ' ಮಹಿಳೆಗೆ ಆಸ್ತಿ ಹಕ್ಕನ್ನು ಪ್ರತಿಪಾದಿಸುತ್ತಿದ್ದರೂ ಹಿಂದೂಗಳು ಅದನ್ನು ಅಲಕ್ಷಿಸುತ್ತಿದ್ದರು. ಆಸ್ತಿ ಹಕ್ಕಿನ ಕರಡು ಕುರಿತು ತೀವ್ರ ವಿರೋಧವೆದ್ದಾಗ ಅದನ್ನು ಉಲ್ಲೇಖಿಸಿ ತಮ್ಮ ಮಸೂದೆಯನ್ನು ಸಮರ್ಥಿಸಿದರು.

ಹೊಂದಾಣಿಕೆ ಸಾಧ್ಯವಿಲ್ಲದ ಅನಿವಾರ್ಯ ಕಾರಣಗಳಿಂದಾಗಿ ಗಂಡನಿಂದ ಬೇರ್ಪಟ್ಟು ಪ್ರತ್ಯೇಕ ಜೀವನ ಮಾಡುತ್ತಿರುವ ಮಹಿಳೆಯ ಗೌರವದ ಬದುಕಿಗಾಗಿ "ಜೀವನಾಂಶ"ಕ್ಕೆ ಸಂಬಂಧಿಸಿದ ಭಾಗವನ್ನು ಈ ಆಸ್ತಿಹಕ್ಕಿನ ಕಾನೂನಿನಲ್ಲಿ ಸೇರಿಸಿದರು. ಇಂಥ ನಿರ್ಗತಿಕ ಮಹಿಳೆಯನ್ನು ಕುರಿತು ಚಿಂತಿಸಿದವರಲ್ಲಿ ಆಧುನಿಕ ಭಾರತದಲ್ಲಿ ಜ್ಯೋತಿಬಾ ಫುಲೆ ನಂತರ ಬಾಬಾಸಾಹೇಬ್ ಅಂಬೇಡ್ಕರರೇ ಇರಬೇಕು. ಹಿಂದೂ ಕಾನೂನಿನಲ್ಲಿ ಗಂಡ ಬಿಟ್ಟು ಪ್ರತ್ಯೇಕವಾಗಿ ಜೀವನ ಸಾಗಿಸುತ್ತಿದ್ದ ಮಹಿಳೆಗೆ 'ಜೀವನಾಂಶ' ಪಡೆಯುವ ಹಕ್ಕಿರಲಿಲ್ಲ. ಬಗೆಹರಿಯದ ಕಾರಣಗಳಿಗಾಗಿ ಆಕೆ ಬೇರ್ಪಟ್ಟಿದ್ದರೆ ಅವಳು ಜೀವನಾಂಶ ಪಡೆಯಲು ಅರ್ಹಳು ಎಂದು ಮಸೂದೆಯಲ್ಲಿ ಸೇರಿಸಿದರು. ನಿರ್ದಿಷ್ಟವಾಗಿ ಏಳು ಕಾರಣಗಳನ್ನು ಗುರುತಿಸಿದರು. ಈ ಮಸೂದೆ ಹೆಣ್ಣನ್ನೇ ಅಪರಾಧಿ

ಸ್ಥಾನದಲ್ಲಿಟ್ಟು ನೋಡುತ್ತಿದ್ದ ಸಾಮಾಜಿಕ ನೋಟ ಕ್ರಮವನ್ನು ಬದಲಿಸುವುದಾಗಿತ್ತು. ಅವಳನ್ನು ಆರ್ಥಿಕವಾಗಿ ಸಬಲೀಕರಣಗೊಳಿಸುವುದರ ಜೊತೆಗೆ ಗೌರವಯುತವಾಗಿ ಬದುಕುವ ಹೆಣ್ಣಿನ ಜೀವಿಸುವ ಹಕ್ಕನ್ನು ಕಾಪಾಡುವ ಉದ್ದೇಶವನ್ನು ಒಡಲೊಳಗಿಟ್ಟು ಕೊಂಡಿರುವುದು ಸ್ಪಷ್ಟವಾಗುತ್ತದೆ.

**ವಿವಾಹ ಮತ್ತು ವಿಚ್ಛೇದನದ ಹಕ್ಕು**

ಹಿಂದೂ ಸಮಾಜದ ಕಟ್ಟಡ ನಿಂತಿರುವುದೇ ವಿವಾಹ ಪದ್ಧತಿಯ ಅಡಿಪಾಯದ ಮೇಲೆ. ಈ ಪದ್ಧತಿ ಜಾತಿ ಪದ್ಧತಿಯನ್ನು ಕಾಪಾಡುವ ಚಕ್ರವ್ಯೂಹದ ರಚನಾ ಮಾದರಿಯಲ್ಲಿ ನಿರ್ಮಾಣಗೊಂಡಿದೆ. ಡಾ॥ ಬಿ. ಆರ್. ಅಂಬೇಡ್ಕರ್ ಅವರು ೧೯೧೬ ಮೇ ೯ರಂದು ಅಮೇರಿಕೆಯ ನ್ಯೂಯಾರ್ಕಿನ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ನಡೆದ ಡಾ॥ ಎ. ಎ. ಗೋಲ್ಡನ್ ವೀಜರ್ ಸ್ಮರಣಾರ್ಥ ಮಾನವಕುಲ ಶಾಸ್ತ್ರ ವಿಚಾರ ಸಂಕಿರಣದಲ್ಲಿ ಮಂಡಿಸಿದ "ಭಾರತದಲ್ಲಿ ಜಾತಿಗಳು" (ಅವುಗಳ ರಚನಾ ಕ್ರಮ, ಉತ್ಪತ್ತಿ ಮತ್ತು ವಿಕಾಸ) ಪ್ರಬಂಧದಲ್ಲಿ ಅದರ ಸಂಕೀರ್ಣತೆ ಮತ್ತು ವಿನಾಶಕಾರಿ ಪ್ರವೃತ್ತಿ ಬಗ್ಗೆ ವಿವರಿಸಿದ್ದಾರೆ. "ಜಾತಿಯಂಥ ಒಂದು ಮುದಿ ಪದ್ಧತಿಯ ಸಂಕೀರ್ಣ ತೊಡಕುಗಳ ಬಗ್ಗೆ ನಾನು ಸಾಕಷ್ಟು ಎಚ್ಚರದಿಂದ ಇದ್ದೇನೆ. ಆದರೆ ಅದನ್ನು ತಿಳಿದುಕೊಳ್ಳಲು ಸಾಧ್ಯವಾದ ಲೋಕಕ್ಕೆ ದಾಟಿಸುವಷ್ಟು ನಿರಾಶಾವಾದಿ ನಾನಲ್ಲ. ಯಾಕೆಂದರೆ ಅದನ್ನು ಅರ್ಥಮಾಡಿಕೊಳ್ಳಬಹುದೆಂದು ನಾನು ನಂಬುತ್ತೇನೆ. ಸೈದ್ಧಾಂತಿಕವಾಗಿಯೂ, ಪ್ರಾಯೋಗಿಕವಾಗಿಯೂ ಜಾತಿ ಸಮಸ್ಯೆಯು ಅಗಾಧವಾದುದು. ವಸ್ತುಶಃ ಅದು ಭಯಾನಕ ಪರಿಣಾಮಗಳ ಬಗ್ಗೆ ಮುಂದಾಗಿ ಎಚ್ಚರಿಕೆ ಕೊಡುವ ಒಂದು ವ್ಯವಸ್ಥೆಯಾಗಿದೆ. ಅದು ಸ್ಥಳೀಯ ಸಮಸ್ಯೆಯಾದರೂ ವ್ಯಾಪಕವಾಗಿ ಕೇಡು ಮಾಡುವ ಸಾಮರ್ಥ್ಯವನ್ನು ಹೊಂದಿದೆ. ಯಾಕೆಂದರೆ ಭಾರತದಲ್ಲಿ ಜಾತಿ ಇರುವವರೆಗೂ ಹಿಂದೂಗಳು ಅಂತರ್ಜಾತಿಯ ವಿವಾಹವಾಗಲಾರರು ಅಥವಾ ಹೊರಗಿನವರೊಂದಿಗೆ ಸಾಮಾಜಿಕ ಸಂಬಂಧ ಮಾಡಲಾರರು. ಹಿಂದೂಗಳು ಪ್ರಪಂಚದ ಬೇರೆ ಭಾಗಗಳಿಗೆ ವಲಸೆ ಹೋದರೆ ಭಾರತದ ಜಾತಿಯು ಒಂದು ಜಾಗತಿಕ ಸಮಸ್ಯೆಯಾಗಿ ಪರಿಣಮಿಸುತ್ತದೆ." ಅದು ಪುಷ್ಯಮಿತ್ರ ಮತ್ತು ಮನು ಮಹಾಶಯರು ಬುದ್ಧನ ಕ್ರಾಂತಿಯ ನಂತರ ಪ್ರತಿಕ್ರಾಂತಿಯ ಮೂಲಕ ಕಟ್ಟಿದ ರಚನೆಯಾಗಿದೆ ಎಂದು ಶೋಧಿಸಿದರು.

ಈ ಜಾತಿ ಪದ್ಧತಿಯು ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯವನ್ನು ನಿಯಂತ್ರಿಸುವ ಧರ್ಮ ಮತ್ತು ಸಾಂಸ್ಕೃತಿಕತೆಯ ಸಂರಚನೆಯಲ್ಲಿದೆ. ಬಾಲಿಕಾ ವಿವಾಹ ಮತ್ತು ಬಲವಂತದ ವೈಧವ್ಯದಂತಹ ಪದ್ಧತಿಗಳಲ್ಲಿ ಅಡಕಗೊಂಡಿದೆ. ಈ ಆಚರಣಾಬದ್ಧ ಸಾಂಪ್ರದಾಯಿಕ ಜೀವವಿರೋಧಿ ಕ್ರಮಗಳು ಒಂದೆಡೆ ಮಹಿಳೆಯ ಸ್ವಾತಂತ್ರ್ಯವನ್ನು ನಿಯಂತ್ರಿಸಿದರೆ, ಒಳ ವಿವಾಹ ಪದ್ಧತಿ ಜಾತಿಯನ್ನು ಭದ್ರವಾಗಿಸುತ್ತದೆ; ಮತ್ತು ಜಾತಿ ಸಂಕರವಾಗುವುದನ್ನು ತಡೆಗಟ್ಟುತ್ತದೆ. ಸಾಮಾಜಿಕ ಒಳಗೊಳ್ಳುವಿಕೆ, ಸಹಜೀವನ, ಸಮಪಾಲು-ಸಮಬಾಳು ಎಂಬ ಜೀವಪರ ಮೌಲ್ಯಗಳನ್ನು ನಾಶ ಮಾಡುವ ಮೂಲಕ ಒಂದು ವರ್ಗದ ಹಿತವನ್ನು ಮಾತ್ರ ಕಾಪಾಡುತ್ತದೆ. ಅದಕ್ಕಾಗಿ ಹಿಂದೂ ವಿವಾಹ ಕಾನೂನಿನಲ್ಲಿ ಬದಲಾವಣೆ ತರುವ ಸಂಬಂಧವಾಗಿ ಎರಡು ವಿವಾಹ ಪದ್ಧತಿಗಳನ್ನು ಮಾನ್ಯ ಮಾಡುವ ಮಸೂದೆಯನ್ನು ಮಂಡಿಸಿದರು.

೧. ಶಾಸ್ತ್ರೋಕ್ತ ವಿವಾಹ ಮತ್ತು ೨. ನಾಗರಿಕ ವಿವಾಹ.

ಈ ಎರಡೂ ವಿವಾಹ ಪದ್ಧತಿಗಳಲ್ಲಿ ಅಂತಹ ವ್ಯತ್ಯಾಸವೇನೂ ಇಲ್ಲವೆಂದು ತಿಳಿಸಿ, ಅವು ಪಾಲಿಸಬೇಕಾದ ಐದು ನಿಯಮಗಳು ಎರಡೂ ಪದ್ಧತಿಗಳಿಗೂ ಅನ್ವಯಿಸುತ್ತವೆ. ಆದರೆ ಈ ಎರಡು ಪದ್ಧತಿಗಳ ಕಾನೂನುಬದ್ಧತೆಯ ನಡುವೆ ಇರುವ ವ್ಯತ್ಯಾಸವೆಂದರೆ; 'ನಾಗರಿಕ ವಿವಾಹಗಳು' ಕಾನೂನು ರೀತ್ಯಾ ದಾಖಲಾಗಲೇಬೇಕು; 'ಶಾಸ್ತ್ರೋಕ್ತ ವಿವಾಹ'ಗಳು ವಧು/ವರ ಇಚ್ಛಿಸಿದಲ್ಲಿ ಮಾತ್ರ ಕಾನೂನುರೀತ್ಯಾ ದಾಖಲಾಗಲೇ ಬೇಕೆಂದು ಸ್ಪಷ್ಟಪಡಿಸಿದರು. 'ನಾಗರಿಕ ವಿವಾಹ'ವನ್ನು ಶಾಸ್ತ್ರೋಕ್ತ ಸಮಾಜ ಮಾನ್ಯ ಮಾಡುವುದಿಲ್ಲವೆಂಬ ಉದ್ದೇಶದಿಂದ ಅದಕ್ಕೆ ಶಾಸನಾತ್ಮಕ ಮಾನ್ಯತೆ ಸಿಗಬೇಕೆಂದು ಅದನ್ನು ಕಡ್ಡಾಯವಾಗಿ ದಾಖಲಿಸಲು ಒತ್ತು ನೀಡಿದ್ದು ಅವರ ದೂರದೃಷ್ಟಿಯ ಪ್ರತೀಕ ವಾಗಿದೆ. ಮೂರು ಮುಖ್ಯ ಅಂಶಗಳಲ್ಲಿ ಹಿಂದೂ ವಿವಾಹದ ವ್ಯತ್ಯಾಸಗಳನ್ನು –

೧. ರೂಢಿಯಲ್ಲಿರುವ ಹಿಂದೂ ಕಾನೂನಿನ ಪ್ರಕಾರ 'ಶಾಸ್ತ್ರೋಕ್ತ ವಿವಾಹ'ಕ್ಕೆ ಗಂಡು-ಹೆಣ್ಣು ಒಂದೇ ಜಾತಿ/ಉಪಜಾತಿಗಳಿಗೆ ಸೇರಿದವ ರಾಗಿರಬೇಕು. ಮಸೂದೆಯು ಈ ಶರತ್ತನ್ನು ತೆಗೆದುಹಾಕಿ, ಭಿನ್ನವಾದ ಜಾತಿ/ಉಪಜಾತಿಯ ಗಂಡು-ಹೆಣ್ಣುಗಳ 'ಶಾಸ್ತ್ರೋಕ್ತ ವಿವಾಹ'ವನ್ನು ಕಾನೂನು ಬದ್ಧಗೊಳಿಸುತ್ತದೆ.

೨. ಚಾಲ್ತಿಯಲ್ಲಿರುವ ಹಿಂದೂ ಕಾನೂನಿನಲ್ಲಿ 'ಸಗೋತ್ರ ವಿವಾಹ ನಿಷಿದ್ಧ; ಪ್ರಸ್ತುತ ಮಸೂದೆಯು ಈ ಶರತ್ತನ್ನು ಕೈದು ಮಾಡಿ 'ಸಗೋತ್ರ ವಿವಾಹ'ವನ್ನು ಕಾನೂನುಬದ್ಧ ಎಂದು ಸ್ವೀಕರಿಸುತ್ತದೆ.

೩. ಹಳೆಯ ಕಾನೂನಿನಲ್ಲಿ ಬಹುಪತ್ನಿತ್ವಕ್ಕೆ ಅವಕಾಶ ಇದೆ; ಆದರೆ ಮಸೂದೆಯು ಏಕಪತ್ನಿಯನ್ನು ಮಾತ್ರ ಶಿಫಾರಸ್ಸು ಮಾಡುತ್ತದೆ.

ಅಂತರ್ಜಾತಿ ಮದುವೆಯನ್ನು ನಾಗರಿಕ ಮದುವೆ ಎಂದು ಕರೆಯುವ ಮೂಲಕ ಹೆಣ್ಣು-ಗಂಡಿನ ಆಯ್ಕೆ ಸ್ವಾತಂತ್ರ್ಯಕ್ಕೆ ಮಾನ್ಯತೆ ನೀಡಿದರು. ಅದು ಜಾತಿ ವಿನಾಶಕ್ಕೂ ದಾರಿ ಮಾಡಿಕೊಡುವುದರ ಮೂಲಕ ಮನುಷ್ಯನ ಸಾಂಪ್ರದಾಯಿಕ ಸಾಮಾಜಿಕ ನಡವಳಿಕೆಯನ್ನು ವೈಜ್ಞಾನಿಕವಾಗಿ ಬದಲಾಯಿಸುವುದನ್ನು ಸಾರ್ವತ್ರಿಕ ಮೌಲ್ಯವಾಗುವಂತೆ ಪ್ರತಿಪಾದಿಸಿದರು.

ಮುಂದುವರಿದು 'ಮದುವೆ' ಅನ್ನುವುದು ಸ್ವರ್ಗದಲ್ಲಿಯೇ ನಿರ್ಧಾರವಾಗುತ್ತದೆ. ಅದು ಏಳೇಳು ಜನ್ಮಗಳ ಅನುಬಂಧ ಎಂಬ ಸನಾತನ ನಂಬಿಕೆ ನಿರಾಧಾರವಾದುದು. ಅದರಿಂದ ಮುಕ್ತಿ ನೀಡಲು ಇಚ್ಛಿಸಿ ವಿವಾಹ ವಿಚ್ಛೇದನ ಕಾನೂನು ಮಂಡಿಸುವುದರ ಮೂಲಕ ಜೀವಿತಾವಧಿಯ ಬಂಧನದಿಂದ ಬಿಡುಗಡೆಗೊಳ್ಳಲು ದಾರಿ ಮಾಡಿದರು. 'ಶಾಸ್ತ್ರೋಕ್ತ ವಿವಾಹ'ದಲ್ಲಿ ವಿಚ್ಛೇದನಕ್ಕೆ ಅವಕಾಶವಿರಲಿಲ್ಲ. ಅದರಿಂದಾಗಿ ಮಹಿಳೆಯ ಶೋಷಣೆ ಹೆಚ್ಚುತ್ತಿದೆ. ಕೌಟುಂಬಿಕ ದೌರ್ಜನ್ಯ-ಹಿಂಸೆ ಮಿತಿ ಮೀರಿದೆ. ಅದಕ್ಕಾಗಿ ಮಹಿಳೆಗೆ ವಿಚ್ಛೇದನದ ಹಕ್ಕು ಇರಬೇಕು ಎಂದು ಬಲವಾಗಿ ಪ್ರತಿಪಾದಿಸಿದರು. ಹಿಂದೂಗಳೇ ಸಮರ್ಥಿಸುವ ಗ್ರಂಥ 'ಪರಾಶರ ಸ್ಮೃತಿ'ಯಲ್ಲಿ ಮಹಿಳೆಯ ವಿಚ್ಛೇದನ ಹಕ್ಕನ್ನು ಪುರಸ್ಕರಿಸುತ್ತದೆ ಎಂದು ವಾದಿಸಿದರು. ವಿಚ್ಛೇದನಕ್ಕೆ ಪ್ರಬಲವಾದ ಕಾರಣ ಗಳನ್ನು ಕೂಡ ಸದರಿ ಮಸೂದೆಯಲ್ಲಿ ಸೇರಿಸಿ ಈ ಕಾರಣಗಳಿದ್ದಲ್ಲಿ ಮಹಿಳೆಗೆ ವಿಚ್ಛೇದನದ ಹಕ್ಕಿದೆ ಎಂದು ಪ್ರತಿಪಾದಿಸಿದರು.

**ದತ್ತು ಹಕ್ಕು ಕಾನೂನು**

ಈ ದತ್ತು ಕಾನೂನು ಈಗಾಗಲೇ ಜಾರಿಯಲ್ಲಿತ್ತು. ಆದರೆ ಅಲ್ಲಿ ಹೆಣ್ಣಿನ ಪಾಲುದಾರಿಕೆ ಇರಲಿಲ್ಲ. ಕೊಂಚ ಬದಲಾವಣೆ ಮಾಡಿದ ಅಂಬೇಡ್ಕರ್‌ರು "ಈ ಕಾನೂನಿನ ಪ್ರಕಾರ ದತ್ತು ಸ್ವೀಕಾರ ಸಂಬಂಧದಲ್ಲಿ ಹೆಣ್ಣಿಗೂ ಗಂಡಿಗೂ ನಡುವೆ ಯಾವುದೇ ತಾರತಮ್ಯವೆಸಗುವುದು ಶಿಕ್ಷಾರ್ಹ ಅಪರಾಧವೆಂದು ಘೋಷಿಸಿದರು. ಹಿಂದಿನ ಕಾನೂನಿನಲ್ಲಿ ಹೆಣ್ಣು ಮಗುವನ್ನು ದತ್ತುವಾಗಿ ಸ್ವೀಕರಿಸಲು ಅವಕಾಶ ಇರಲಿಲ್ಲ. ಹಾಗೇ ದತ್ತು ಸ್ವೀಕಾರದ ವಿಷಯದಲ್ಲಿ ಮಹಿಳೆಗೂ ಅಧಿಕಾರವಿರಲಿಲ್ಲ. ಈ ಹೊಸ ಕಾನೂನು ಗಂಡು ಮಗುವಿನಂತೆಯೇ ಹೆಣ್ಣು ಮಗಳನ್ನು ದತ್ತು ಸ್ವೀಕರಿಸುವ ಹಾಗೂ ದತ್ತು ಸ್ವೀಕಾರದ ಸಂಬಂಧದಲ್ಲಿ ಹೆಂಡತಿಯ ಅಭಿಪ್ರಾಯವೂ ಕಡ್ಡಾಯವೆಂದು ಪ್ರತಿಪಾದಿಸಿತು. ಬಹುಪತ್ನಿಯರಿದ್ದಲ್ಲಿ ಕನಿಷ್ಠ ಒಬ್ಬಳ ಅಭಿಪ್ರಾಯವನ್ನಾದರೂ ಪಡೆಯುವುದನ್ನು ಕಡ್ಡಾಯವಾಗಿಸಿತು ಮತ್ತು ವಿಧವೆಯರಿಗೂ ದತ್ತು ಪಡೆಯುವ ಅಧಿಕಾರ ನೀಡಿತು.

ಭಾರತದ ಮಹಿಳೆ ಶಾಸನಬದ್ಧ ಹಕ್ಕು ಅಧಿಕಾರಗಳನ್ನು ಪಡೆಯಬೇಕು ಎಂಬ ಉದ್ದೇಶಿಸಿದ ಈ ಎಲ್ಲ ಅಂಶಗಳನ್ನು ಹಿಂದೂ ಕೋಡ್‌ಬಿಲ್‌ಅನ್ನು ೨೪ ಫೆಬ್ರವರಿ ೧೯೪೯ರಂದು ಅಂಬೇಡ್ಕರ್ ಮಂಡಿಸಿದರು. ಅನಂತರದಲ್ಲಿ ದೇಶ ಹಾಗೂ ಸದನದ ಒಳಹೊರಗೂ ಭಾರಿ ವಿರೋಧದ ಅಲೆ ಎದ್ದಿತು. ಹೆಣ್ಣು ಅಧಿಕಾರ ಹೊಂದುವುದನ್ನು ಎಂದೂ ಸಹಿಸದ ಹಿಂದೂ ಸಂಘಟನೆಯಾದ ಆರ್.ಎಸ್.ಎಸ್. ಮಸೂದೆಯ ವಿರುದ್ಧದ ಪ್ರತಿಭಟನೆಯ ನೇತೃತ್ವ ವಹಿಸಿಕೊಂಡು ದೇಶದಾದ್ಯಂತ ಒಂದು ವರ್ಷ ದೊಳಗಾಗಿ ೭೯ ಪ್ರತಿಭಟನಾ ಸಭೆಗಳನ್ನು ಆಯೋಜಿಸಿದ ಉಲ್ಲೇಖವಿದೆ. ಸಂವಿಧಾನ ರಚನಾ ಸಭೆಯಲ್ಲೇ ಹಿಂದೂ ಕೋಡ್‌ಬಿಲ್ ಬಗ್ಗೆ ಚರ್ಚೆ ಶುರುವಾಗಿತ್ತಾದರೂ ಅಂಥ ಕಾಯ್ದೆಯೊಂದನ್ನು ಜಾರಿಗೆ ತಂದು ಅಂಗೀಕರಿಸುವ ಬಗ್ಗೆ ತೀವ್ರ ವಿರೋಧ ಇತ್ತು. ಆ ವಿರೋಧ ಕರಡು ಮಂಡನೆಯಾದ ನಂತರ ತೀವ್ರ ಸ್ವರೂಪ ಪಡೆಯಿತು.

ಅದರಲ್ಲಿ ಮುಖ್ಯವಾಗಿ ಈ ಮೂರು ಅಂಶಗಳು – ೧) ವಿವಾಹ ಕಾನೂನು ಮಾನ್ಯವಾಗಲು ಇದ್ದ ಜಾತಿ ಮಿತಿಯನ್ನು ತೊಡೆದು ಅಂತರ್ಜಾತೀಯ

**ಅಭಿನಂದನೆಗಳು...**

ನವದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪ್ರಶಸ್ತಿಯು ಮಾನ್ಯ ಓ. ಎಲ್. ನಾಗಭೂಷಣ ಸ್ವಾಮಿ ಅವರಿಗೆ 'ಎ. ಕೆ. ರಾಮಾನುಜನ್ ಆಯ್ದ ಪ್ರಬಂಧಗಳು' ಎಂಬ ಕೃತಿ ಅನುವಾದಕ್ಕಾಗಿ ದೊರಕಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ವಿವಾಹಗಳನ್ನು ಕಾನೂನುಬದ್ಧಗೊಳಿಸಿರುವುದು ೨) ವಿವಾಹ ಮಾನ್ಯತೆಗೆ ಏಕಪತ್ನಿತ್ವವನ್ನು ಶಿಫಾರಸ್ಸು ಮಾಡಿರುವುದು ೩) ವಿವಾಹ ವಿಚ್ಛೇದನಕ್ಕೆ ಕಾನೂನಿನಲ್ಲಿ ಅವಕಾಶ ಕಲ್ಪಿಸಿರುವುದು "ಹಿಂದೂ ಸಂಸ್ಕೃತಿ ಮತ್ತು ಸಂಪ್ರದಾಯ"ಗಳ ನಾಶಕ್ಕೆ ಕಾರಣವಾಗುತ್ತದೆಂಬುದು ಹೆಚ್ಚು ವಿವಾದಕ್ಕೆ ಕಾರಣವಾಯಿತು. ಕಾಂಗ್ರೆಸ್ಸಿನ ಬಾಬು ರಾಜೇಂದ್ರಪ್ರಸಾದ ಮತ್ತು ಗೋವಿಂದವಲ್ಲಭ ಪಂಥರಂತಹ ಹಿರಿಯರ ವಿರೋಧ ಒಂದೆಡೆಯಾದರೆ, ಉದಾರವಾದಿ ನಿಲುವುಳ್ಳವರೆಂದೇ ಖ್ಯಾತರಾದ ಭಾರತದ ಕೋಗಿಲೆ ಸರೋಜಿನಿ ನಾಯ್ಡು ಆಮರಣಾಂತ ಉಪವಾಸ ಕೈಗೊಳ್ಳುವ ಬೆದರಿಕೆ ಹಾಕಿದ್ದು ಐತಿಹಾಸಿಕ ದುರಂತವೇ ಸರಿ.

ಆದರೂ ಅಂಬೇಡ್ಕರ್‌ರು ಹಿಂದೂ ಕೋಡ್‌ಬಿಲ್‌ನ್ನು ಮೊಟ್ಟಮೊದಲಬಾರಿಗೆ ೫ ಫೆಬ್ರವರಿ ೧೯೫೧ರಂದು ಪಾರ್ಲಿಮೆಂಟಿನಲ್ಲಿ ಮಂಡಿಸಿದರು. ನೆಹರು ಅವರ ಮೇಲೆ ಈ ಮಸೂದೆಯನ್ನು ಜಾರಿಗೆ ತರಲು ಒತ್ತಡ ಹಾಕಲು ನಿರ್ಧರಿಸಿ ೧೦ ಆಗಸ್ಟ್ ೧೯೫೧ರಂದು ಪ್ರಧಾನಿ ನೆಹರು ಅವರಿಗೆ ಪತ್ರ ಬರೆದರು. ಅದರಲ್ಲಿ "ಹಿಂದೂ ಕೋಡ್‌ಬಿಲ್‌ಅನ್ನು ಜಾರಿಗೆ ತರುವುದು ನನ್ನ ಪರಮಧ್ಯೇಯ. ನನ್ನ ಆರೋಗ್ಯ ತುಂಬ ಹದಗೆಡುತ್ತಿದೆ. ನನ್ನ ದೇಹ ನನ್ನ ಹಾಗೂ ನನ್ನ ವೈದ್ಯರ ನಿಯಂತ್ರಣಕ್ಕೆ ಬರುತ್ತಿಲ್ಲ. ಈ ಕಾಯ್ದೆ ಜಾರಿ ಆದಲ್ಲಿ ನಾನು ವಿಶ್ರಾಂತಿ ಪಡೆಯಲು ಅನುವಾಗುತ್ತದೆ" ಅದಕ್ಕಾಗಿ ತಾವು ೧೬ ಆಗಸ್ಟ್ ೧೯೫೧ರಿಂದ ನಡೆಯುವ ಅಧಿವೇಶನದಲ್ಲಿ ಸದರಿ ಕರಡನ್ನು ಚರ್ಚೆಗೆ ಎತ್ತಿಕೊಳ್ಳಬೇಕೆಂದು ಕೇಳಿದರು. ನೆಹರು ಅವರು "ಈ ಕಾಯ್ದೆಯನ್ನು ಜಾರಿಗೆ ತರುವ ಬಗ್ಗೆ ನನಗೆ ಆಸಕ್ತಿ ಇದೆ ಮತ್ತು ದೃಢಸಂಕಲ್ಪನೆ ಮಾಡಿದ್ದೇನೆ" ಎಂದು ವಿವರಿಸಿದರು.

ಮತ್ತೆ ವಿಪಕ್ಷಗಳಿಂದ, ಕಾಂಗ್ರೆಸ್ಸಿನ ಸದಸ್ಯರಿಂದ ಹಾಗೂ ಹಿಂದೂ ಧಾರ್ಮಿಕ ಸಂಘಟನೆಗಳಿಂದ ತೀವ್ರ ವಿರೋಧ ವ್ಯಕ್ತವಾಗತೊಡಗಿತು. ಅಂಬೇಡ್ಕರ್ ಹಾಗೂ ನೆಹರು ಅವರ ಭಾವಚಿತ್ರಗಳನ್ನು ಸುಡುವ ಮಟ್ಟಕ್ಕೂ ಹೋಗಿ ಮುಂದೆ ಅದು ಸಾಮಾನ್ಯವಾಗಿಬಿಟ್ಟಿತು.

"ಹಿಂದೂ ಸಂಸ್ಕೃತಿ ಮತ್ತು ಧಾರ್ಮಿಕ ನಂಬಿಕೆಗಳಲ್ಲಿ ಸರ್ಕಾರ ಹಸ್ತಕ್ಷೇಪ ಮಾಡಬಾರದು. ಹಿಂದೂ ಧರ್ಮಶಾಸ್ತ್ರಗಳಲ್ಲಿ ಇರುವ ಏನನ್ನೂ ಬದಲಾಯಿಸುವ ಹಕ್ಕು ಸರ್ಕಾರಕ್ಕಿಲ್ಲ. ಹಿಂದೂ ಧರ್ಮಶಾಸ್ತ್ರಗಳ ಪ್ರಕಾರ ವಿಚ್ಛೇದನಕ್ಕೆ ಅವಕಾಶ ಇಲ್ಲ" – ಎಂಬ ವಾದವನ್ನು ಸ್ವಾಮಿ ಕರಪತ್ರಿಜೀ ಮಹಾರಾಜ ಮಂಡಿಸಿದರು.

ಸಂವಿಧಾನವೇ ಭಾರತೀಯರ ಜೀವನ ಮತ್ತು ಸಂಸ್ಕೃತಿಯಾಗಬೇಕೆಂದು ಬಯಸಿದ್ದ ಅಂಬೇಡ್ಕರರು ಮತ್ತೆ ಆ ಮಸೂದೆಯನ್ನು ಚರ್ಚಿಸಬೇಕೆಂದು ಒತ್ತಾಯಿಸ ತೊಡಗಿದರು. ಕೊನೆಗೂ ಮಸೂದೆ ಬಗ್ಗೆ ಚರ್ಚೆ ನಡೆದದ್ದು ಸೆಪ್ಟೆಂಬರ್ ೧೯೫೨ರಲ್ಲಿ. ಮೊದಲ ಸಾರ್ವತ್ರಿಕ ಚುನಾವಣೆಯು ನಡೆಯುವ ಮುನ್ನದ ಕೊನೆಯ ಅಧಿವೇಶನದಲ್ಲಿ. ಆ ಚರ್ಚೆಯಲ್ಲಿ ಭಾಗವಹಿಸಿದ ಬಹುತೇಕ ಸದಸ್ಯರು "ನಾವು ನೇರವಾಗಿ ಜನರಿಂದ (ಸಂವಿಧಾನ ರಚನಾ ಸದಸ್ಯರೇ ಸಂಸತ್ತಿನ ಸದಸ್ಯರಾಗಿರುವುದರಿಂದ) ಚುನಾಯಿತರಾಗಿಲ್ಲದ ಕಾರಣ ಈ ಕಾಯ್ದೆಯನ್ನು ಅಂಗೀಕರಿಸುವ ನೈತಿಕ ಹಕ್ಕು ನಮಗಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ಮತ್ತು ಕೆಲವು ಸದಸ್ಯರು ಕೇವಲ ಹಿಂದೂಗಳ ಧಾರ್ಮಿಕ ವಿಷಯಗಳಿಗೆ ಅಷ್ಟೇ ಏಕೆ? ಎಲ್ಲ ಮತೀಯರಿಗೂ ಅನ್ವಯವಾಗುವ ಏಕರೂಪ ಸಂಹಿತೆಯನ್ನು ಜಾರಿಗೆ ತನ್ನಿ ಎಂದರು." ಈ ಕಾಯ್ದೆ ಜಾರಿಗೊಳಿಸುವ ಬಗ್ಗೆ ಪ್ರಧಾನಿ ನೆಹರು ಮತ್ತು ರಾಷ್ಟ್ರಪತಿ ರಾಜೇಂದ್ರ ಪ್ರಸಾದ ನಡುವೆಯೂ ತೀವ್ರವಾದ ಭಿನ್ನಾಭಿಪ್ರಾಯವಿತ್ತು. ಒಂದು ವೇಳೆ ಈ ಕಾಯ್ದೆಯನ್ನು ಸಂಸತ್ತು ಅಂಗೀಕರಿಸಿದಲ್ಲಿ ರಾಷ್ಟ್ರಪತಿ ಅವರ ವಿವೇಚನಾ ಅಧಿಕಾರ ಬಳಸಿಕೊಂಡು ಈ ಕಾಯ್ದೆಯನ್ನು ಮೊಟಕುಗೊಳಿಸುವುದಾಗಿ ರಾಜೇಂದ್ರಪ್ರಸಾದ ಬೆದರಿಕೆ ಹಾಕಿದ್ದರು.

ಆಡಳಿತ ಪಕ್ಷ ಮತ್ತು ವಿಪಕ್ಷಗಳ ಸದಸ್ಯರ ತೀವ್ರ ವಿರೋಧ, ಧಾರ್ಮಿಕ ಸಂಘಟನೆಗಳ ಪ್ರತಿಭಟನೆಗೆ ಮಣಿದ ನೆಹರು ಅವರು ಈ ಕಾಯ್ದೆಯನ್ನು ಒಡೆದು ನಾಲ್ಕು ಪ್ರತ್ಯೇಕ ಕಾಯ್ದೆಗಳನ್ನಾಗಿ ಮಂಡಿಸಲು ಯೋಚಿಸಿದರು. ನೆಹರು ಅವರ ಈ ಕ್ರಮವೇ ಅಂಬೇಡ್ಕರ್ ಮತ್ತು ನೆಹರು ನಡುವೆ ತೀವ್ರವಾದ ಭಿನ್ನಾಭಿಪ್ರಾಯಕ್ಕೆ ದಾರಿ ಮಾಡಿಕೊಟ್ಟಿತು. ಸಂಸತ್ತಿನಲ್ಲಿ ನಡೆದ ಚರ್ಚೆಯ ವೇಳೆ ನೆಹರು ಅವರು ತಮ್ಮ ಪಕ್ಷದ ಸದಸ್ಯರಿಗೆ ವಿಪ್ ಹೊರಡಿಸಲಿಲ್ಲ. ನಿರ್ಧಾರ ತೆಗೆದುಕೊಳ್ಳುವ ಹಕ್ಕನ್ನು ಸದಸ್ಯರಿಗೇ ಬಿಟ್ಟರು.

ವಿವಾಹ ವಿಚ್ಛೇದನದ ಬಗ್ಗೆ ಒಂದು ಕಾಯ್ದೆಯನ್ನು ನೆಹರು ಅವರು ಸಂಸತ್ತಿನಲ್ಲಿ ಮಂಡಿಸಿದರಾದರೂ ಎರಡು ದಿನಗಳ ಕಾಲ ಚರ್ಚೆ ನಡೆದು ಇನ್ನಷ್ಟು ಚರ್ಚೆಯ ಅಗತ್ಯವಿದ್ದುದರಿಂದ ಸದರಿ ಕರಡನ್ನು ಅಂಗೀಕರಿಸಲು ಸಾಧ್ಯವಿಲ್ಲವೆಂದು ಮುಂದೂಡಿದರು. ಇದರಿಂದ ಮನನೊಂದ ಅಂಬೇಡ್ಕರ್ ತಮ್ಮ ಕ್ಯಾಬಿನೆಟ್ ಮಂತ್ರಿ ಹುದ್ದೆಗೆ ರಾಜೀನಾಮೆ ಕೊಟ್ಟರು. ತಮ್ಮ ರಾಜೀನಾಮೆ ಪತ್ರದ ಪ್ರತಿಗಳನ್ನು ಪತ್ರಿಕಾ ಮಿತ್ರರಿಗೆ ಹಂಚಿ, ಪತ್ರಕರ್ತರನ್ನು ಕುರಿತು "ನನಗೆ ನೆಹರು ಅವರ ನಿಷ್ಠೆಯ ಬಗ್ಗೆ ಗೌರವವಿದೆ; ಆದರೆ ಸಂಶಯವಿರುವುದು ಅವರ ಸಂಕಲ್ಪ ಮತ್ತು ಪ್ರಾಮಾಣಿಕತೆ ಬಗ್ಗೆ" ಎಂದು ಹೇಳಿ ಹೊರನಡೆದರು.

ಮರುದಿನದ ಅಧಿವೇಶನದಲ್ಲಿ ಈ ಕುರಿತು ಹೇಳಿಕೆ ನೀಡುವುದಾಗಿ ಅಂಬೇಡ್ಕರ್ ಕೋರಿದ್ದರು. "ನಿಮ್ಮ ರಾಜೀನಾಮೆ ಅಂಗೀಕೃತವಾಗಿರುವುದರಿಂದ (ಮರುದಿನದ ಅಧಿವೇಶನ ಆರಂಭವಾಗುವ ಮುನ್ನ ಬೆಳಿಗ್ಗೆಯೇ ಅವರ ರಾಜೀನಾಮೆಯನ್ನು ಅಂಗೀಕರಿಸಿದ್ದರು) ನೀವು ಮಂತ್ರಿಯಾಗಿ ಈ ಸದನದಲ್ಲಿ ಹೇಳಿಕೆ ನೀಡಲು ಅವಕಾಶವಿಲ್ಲ. ನಿಮ್ಮ ಲಿಖಿತ ಹೇಳಿಕೆಯನ್ನು ನನಗೆ ಸಲ್ಲಿಸಿ, ಪರಿಶೀಲಿಸಿ ಅವಕಾಶ ನೀಡಲಾಗುವುದು" ಎಂದು ಲೋಕಸಭೆಯ ಡೆಪ್ಯೂಟಿ ಸ್ಪೀಕರ್ ಅವರಿಗೆ ಹೇಳಿಕೆ ನೀಡಲು ಅವಕಾಶ ನೀಡುವುದಿಲ್ಲ. ಸ್ಪೀಕರ್ ಅವರ ಮಾತು ಕೇಳಿ ಒಂದು ಕ್ಷಣವೂ ಅಲ್ಲಿ ನಿಲ್ಲದ ಅಂಬೇಡ್ಕರ್ ಪಾರ್ಲಿಮೆಂಟಿನಿಂದ ಹೊರನಡೆದರು. ಪಾರ್ಲಿಮೆಂಟಿನಿಂದ ಹೊರನಡೆದ ಈ ಸನ್ನಿವೇಶ/ಘಟನೆಯನ್ನು ವಿಶ್ಲೇಷಿಸಿದ ರಾಜಕೀಯ ಚಿಂತಕರು "ಸಂವಿಧಾನದ ನಿರ್ಮಾತೃವನ್ನು ನಾವು ನಡೆಸಿಕೊಂಡ ಕ್ರಮವಿದು" ಎಂದು ವಿಷಾದಿಸಿದರು. ಹೀಗೆ ಭಾರತದ ಮಹಿಳೆಗೆ ಸ್ವಾತಂತ್ರ್ಯ ಕೊಡಿಸುವ ಹೋರಾಟದಲ್ಲಿ ಅವಮಾನಿತರಾದರೂ ಅಂಬೇಡ್ಕರ್‌ರು ಧೃತಿಗೆಡಲಿಲ್ಲ. 'ಮಹಿಳೆಗಿಲ್ಲದ ಅಧಿಕಾರ ತಮಗೂ ಬೇಡ' ಎಂದು ಅವರ ರಾಜೀನಾಮೆ ಅಧಿಕಾರವನ್ನೇ ನೀರಾಕರಿಸಿ ದಂತಿದೆ; ಅಧಿಕಾರ ಲಿಂಗಭೇದವಿಲ್ಲದೆ ದಕ್ಕಬೇಕೆಂದು ಒತ್ತಾಯಿಸುತ್ತಲೂ ಇದೆ.

ನಂತರದಲ್ಲಿ ನೆಹರು ಅವರು ಬಾಬಾಸಾಹೇಬ್ ಡಾ॥ ಅಂಬೇಡ್ಕರ್ ರೂಪಿಸಿದ ಕಾನೂನುಗಳನ್ನು ಒಂದೊಂದಾಗಿ ಜಾರಿಗೆ ತಂದರು.

೧. ಹಿಂದೂ ವಿವಾಹ ಕಾನೂನು–೧೯೫೬

೨. ಹಿಂದೂ ಉತ್ತರಾಧಿಕಾರ ಕಾನೂನು–೧೯೫೬

೩. ಹಿಂದೂ ಅಪ್ರಾಪ್ತತೆ ಮತ್ತು ಪೋಷಕತ್ವ ಕಾನೂನು–೧೯೫೬

೪. ಹಿಂದೂ ದತ್ತಕ ಮತ್ತು ಜೀವನಾಂಶ ಕಾನೂನು–೧೯೫೬

ಹಿಂದೂ ಉತ್ತರಾಧಿಕಾರ (ಆಸ್ತಿ) ಹಕ್ಕು ೧೯೫೬ರಿಂದ ಅಸ್ತಿತ್ವದಲ್ಲಿದ್ದರೂ ಪೂರ್ಣ ಪ್ರಮಾಣದಲ್ಲಿ ಜಾರಿ ಆಗುವುದಕ್ಕೆ ಐವತ್ತು ವರ್ಷಗಳು ಬೇಕಾಯಿತು. ಮೊನ್ನೆ ಮೊನ್ನೆಯೇ ಸರ್ವೋಚ್ಚ ನ್ಯಾಯಾಲಯ ೨೦೧೯ರಲ್ಲಿ ನೀಡಿದ್ದ ತೀರ್ಪಿನಿಂದಾಗಿ ಪಿತ್ರಾರ್ಜಿತ ಆಸ್ತಿಯಲ್ಲಿ ಮಹಿಳೆಯ ಪಾಲಿಗೆ ಸಂಬಂಧಿಸಿದ ಗೊಂದಲಗಳು ಬಗೆಹರಿದಿದ್ದರಿಂದ ೨೦೦೫ರಿಂದ ಪೂರ್ವಾನ್ವಯವಾಗುವಂತೆ ಜಾರಿಗೊಳಿಸುತ್ತಿದೆ ಎಂದು ತೀರ್ಪಿತ್ತು. ಇದರಿಂದಾಗಿ ಮಹಿಳೆ ಆಸ್ತಿಯಲ್ಲಿ ಪಾಲು ಹೊಂದುವಂತಾಯಿತು.

ಮನಜ ಅವರು "ಮಹಿಳೆಯನ್ನು ಕುರಿತು ಈ ನಾಲ್ಕು ಕಾನೂನುಗಳಿಂದ ಮಹಿಳೆಗೆ ಹಿಂದಿಲ್ಲದಿದ್ದ ಒಂದು ಗಂಭೀರ ಹಾಗೂ ಗಮನಾರ್ಹ ವ್ಯಕ್ತಿತ್ವ ನಿರ್ಮಾಣವಾಯಿತು ಎಂಬುದನ್ನು ಮರೆಯದಿರಬೇಕಾಗುತ್ತದೆ. ವೈದಿಕ ಶಾಸ್ತ್ರಾದಿಗಳಿಂದಾಗಿಯೂ ಮನುವಾದ ಚಿಂತನೆಯಿಂದಾಗಿಯೂ ವ್ಯಕ್ತಿತ್ವರಹಿತಳಾಗಿದ್ದ ಮಹಿಳೆ ಸಾವಿರಾರು ವರ್ಷಗಳ ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ಪ್ರಥಮ ಬಾರಿಗೆ ಗಣನೀಯ ವ್ಯಕ್ತಿತ್ವವನ್ನು ಪಡೆಯಲು ಅಂಬೇಡ್ಕರ್ ಹೋರಾಟದಿಂದ ಸಾಧ್ಯವಾಯಿತೆಂಬುದನ್ನು ಈ ನಾಲ್ಕೂ ಕಾನೂನುಗಳಿಂದ ಸಾಧ್ಯವಾಯಿತು ಎಂಬುದನ್ನು ತಿಳಿಯಬಹುದಾಗಿದೆ" ಎಂದಿದ್ದಾರೆ.

ಭಾರತಕ್ಕೆ ಶ್ರೇಷ್ಠ ಸಂವಿಧಾನವನ್ನು ನೀಡಿದ ಅಂಬೇಡ್ಕರ್‌ರು ಶಾಸನಾತ್ಮಕ ಹಕ್ಕುಗಳನ್ನು ಕೊಡುವ ಮೂಲಕ ಭಾರತದ ಮಹಿಳೆಯನ್ನು ಪುರುಷನ ಸರಿಸಮಾನ ಸ್ಥಾನದಲ್ಲಿ ನಿಲ್ಲಿಸಿದರು. ಕೇವಲ ದಲಿತ ಮಹಿಳೆಯರಿಗಾಗಿ ಈ ಕಾನೂನುಗಳನ್ನು ರೂಪಿಸಲಿಲ್ಲ. ಸಮಸ್ತ ಭಾರತದ ಮಹಿಳೆಯರಿಗಾಗಿ ಮಾಡಿದರು. ಮಹಿಳಾವಾದಿಗಳು, ಮಹಿಳಾ ಹೋರಾಟಗಾರ್ತಿಯರು, ಪ್ರಗತಿಪರರು ಈ ದಿಶೆಯಲ್ಲಿ ತಮ್ಮ ಅರಿವನ್ನು ವಿಸ್ತರಿಸಿಕೊಳ್ಳಬೇಕಿದೆ. ಇದು ಈ ನೆಲದ ಜನರ, ನೆಲದ ಸಮಾನತೆಯ ತತ್ವ. ಮಹಿಳೆಯನ್ನು ದೂರವಿತ್ತ ಯಾವ ಸಮಾಜ/ದೇಶವೂ ಬದುಕುವುದಿಲ್ಲವೆಂಬುದು ಅಂಬೇಡ್ಕರ್‌ರು ನಂಬಿದ ಸಾಮಾಜಿಕ ತತ್ವಜ್ಞಾನವಾಗಿದೆ.

**ಡಾ॥ ಅನಸೂಯ ಕಾಂಬಳೆ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ
ಸ್ನಾತಕೋತ್ತರ ಕೇಂದ್ರ, ಕೆರಿಮತ್ತಿಹಳ್ಳಿ, ಹಾವೇರಿ – ೫೮೧ ೧೧೦




ಅಂಬೇಡ್ಕರ್‌ರವರು ಎಷ್ಟು ಮೃದುವಾಗಿದ್ದರೋ ಅವರ ಭಾಷೆ ಅಷ್ಟೇ ಹರಿತವಾಗಿತ್ತು. ಲೇಖನಿಯನ್ನು ಅವರು ಖಡ್ಗವಾಗಿ ಬಳಸಿದರು. ತಾವು ನಂಬಿದ ಸಿದ್ಧಾಂತದ ಮುನ್ನಡೆಗಾಗಿ ಅಸಮಾನತೆಯ ವಿರುದ್ಧ ಲೇಖನಿ ಪ್ರಹಾರ ನಡೆಸಿದರು. ಅಂಬೇಡ್ಕರ್‌ರವರ ಮೊದಲ ಪತ್ರಿಕೆಯ ಭಾಷೆಗೂ ನಂತರದ ಪತ್ರಿಕೆಗಳ ಭಾಷೆಗೂ ಮಹತ್ತರ ಬದಲಾವಣೆಯಿದೆ. ಆರಂಭದಲ್ಲಿ ವಾಸ್ತವ ಮಾತ್ರ ಮಂಡಿಸುವುದು ಅಂಬೇಡ್ಕರ್ ಉದ್ದೇಶವಾಗಿತ್ತು. ಆದರೆ ಕ್ರಮೇಣ ದಲಿತ ಚಳವಳಿ ಹರಳುಗಟ್ಟುತ್ತಾ ಹೋದಂತೆ ಪತ್ರಿಕೆ ಅದರ ನಾಡಿ ಮಿಡಿತವಾಯಿತು.

# ಅಂಬೇಡ್ಕರ್ ಮತ್ತು ಪತ್ರಿಕೋದ್ಯಮ

**ಜಿ. ಎನ್. ಮೋಹನ್**

“ಭಾರತದ ಇಂದಿನ ಪತ್ರಿಕೋದ್ಯಮ ತಮಗೆ ಬೇಕಾದ ಹಾಗೂ ತಮಗೆ ಬೇಕಾದವರ ತುತ್ತೂರಿ ಊದಲು ಇರುವ ಪತ್ರಿಕೋದ್ಯಮ” ಎಂದು ಅಂಬೇಡ್ಕರ್ ದಶಕಗಳ ಹಿಂದೆಯೇ ಸಾರಿದ್ದರು.

ಹಲವು ದಶಕಗಳ ಹಿಂದಿನ ಈ ಅಂಬೇಡ್ಕರ್ ವಾಣಿ ಇಂದಿಗೂ ಅದೆಷ್ಟು ಪ್ರಸ್ತುತ ! ಅಂಬೇಡ್ಕರ್ ಅವರ ವಿಶೇಷವೇ ಈ ಮುಂಗಾಣ್ಕೆ.

ಭಾರತ ಇಂದು ಹೊರಳು ದಾರಿಯಲ್ಲಿ ನಿಂತಿದೆ. ರಾಜಕೀಯ ಹಾಗೂ ಸಾಮಾಜಿಕ ಏರುಪೇರುಗಳ ಅಂಚಿನಲ್ಲಿರುವ ದೇಶಕ್ಕೆ ಪತ್ರಿಕೋದ್ಯಮ ಕಣ್ಣಾಗಬೇಕಾಗಿತ್ತು. ನಾಡಿನ ನಾಡಿ ಬಡಿತವನ್ನು ಮುಂಚೆಯೇ ಕಂಡುಹಿಡಿದು ಅದರ ಓರೆಕೋರೆಗಳತ್ತ ಭೂತಗನ್ನಡಿ ಹಿಡಿದು ಸರಿದಾರಿಯಲ್ಲಿ ಮುನ್ನಡೆಸಬೇಕಾಗಿತ್ತು. ಭಾರತೀಯ ಪತ್ರಿಕೋದ್ಯಮ ಈ ನಿಟ್ಟಿನಲ್ಲಿ ವಿಫಲವಾಗಿದೆ. ಕಟುವಾಸ್ತವಗಳನ್ನು ಮುಂದೆ ಹರಡಿಕೊಂಡು ಕೈಚೆಲ್ಲಿ ಕುಳಿತಿದೆ. ಅಂಬೇಡ್ಕರ್ ಪತ್ರಿಕೋದ್ಯಮವನ್ನೂ ಅಂಬೆಗಾಲಿಕ್ಕುತ್ತಿದ್ದಾಗ ಆಡಿದ ಮಾತೇ ಇಂದಿಗೂ ಪದಶಃ ಅನ್ವಯಿಸುತ್ತಿರುವುದು ಪತ್ರಿಕೋದ್ಯಮದ ಕಟುವಿಮರ್ಶೆಯೇ ಸರಿ.

ಪತ್ರಿಕೋದ್ಯಮಕ್ಕೆ ಅಂಬೇಡ್ಕರ್ ಕೊಡುಗೆ ಅಪಾರವಾದದ್ದು. ಭಾರತದ ಪ್ರತಿಯೊಬ್ಬ ಹಿರಿಯ ನಾಯಕರೂ ಪತ್ರಿಕೆ ಆರಂಭಿಸಿ ಅದನ್ನು ಕೈಹಿಡಿದು ನಡೆಸಿದ್ದಾರೆ. ತಾವು ನಂಬಿದ ಸತ್ಯಗಳನ್ನು ಪ್ರಚುರಪಡಿಸಲು ಈ ಪತ್ರಿಕೆಗಳು ಅವರ ಮುಖವಾಣಿಯಾಗಿ ನಿಲ್ಲುತ್ತಿದ್ದವು. ಸಾಮಾಜಿಕ ಹಾಗೂ ರಾಜಕೀಯ ಹೋರಾಟಗಳಲ್ಲಿ ನಾಯಕರುಗಳಂತೆಯೇ ಈ ಪತ್ರಿಕೆಗಳೂ ಪ್ರಧಾನ ಪಾತ್ರ ವಹಿಸುತ್ತಿದ್ದವು.

ಮಹಾತ್ಮ ಗಾಂಧಿ ‘ಯಂಗ್ ಇಂಡಿಯಾ’ ‘ಹರಿಜನ’ ಪತ್ರಿಕೆಯನ್ನು ಆರಂಭಿಸಿದರು. ಲೋಕಮಾನ್ಯ ತಿಲಕ್ ‘ಕೇಸರಿ’ ಪತ್ರಿಕೆಯನ್ನು ಲಾಲಾ ಲಜಪತ್ ರಾಯ್ ‘ದಿ ಪೀಪಲ್’ ಪತ್ರಿಕೆಯನ್ನು ಜವಹರಲಾಲ್ ನೆಹರೂ ‘ದಿ ನ್ಯಾಷನಲ್ ಹೆರಾಲ್ಡ್’ ಪತ್ರಿಕೆಯನ್ನೂ ನಡೆಸುತ್ತಿದ್ದರು. ಅಂಬೇಡ್ಕರ್‌ರವರಿಗೆ ಪತ್ರಿಕೋದ್ಯಮ ಅತ್ಯಗತ್ಯ ಸಾಧನವಾಗಿತ್ತು. ಹಾಗೆಯೇ ಸಾಹಸದ ದಾರಿಯೂ ಆಗಿತ್ತು. ಅಂಬೇಡ್ಕರ್ ತಲುಪಬೇಕಾಗಿದ್ದುದು ತೀರಾ ಹಿಂದುಳಿದ, ತುಳಿತಕ್ಕೊಳಗಾದ, ಅಕ್ಷರ ಜಗತ್ತಿಗೆ ಅಪರಿಚಿತರಾದ, ಹೊಸ ಬೆಳಕಿನ ಲೋಕವನ್ನು ಕಾಣದ ಜನರನ್ನು. ಹೀಗಾಗಿ ಅಂಬೇಡ್ಕರ್‌ರವರು ಸಾಗಬೇಕಾದ ದಾರಿ ಬಹುದೂರದ್ದೂ ಹಾಗೂ ಕಠಿಣತಮವಾದದ್ದೂ ಆಗಿತ್ತು.

ಅಂಬೇಡ್ಕರ್ ಪತ್ರಿಕೆಗಳನ್ನು ತಾವು ತಲುಪಬೇಕಾಗಿದ್ದವರನ್ನು ಮುಟ್ಟುವುದಕ್ಕಿಂತ ತಲುಪಬೇಕಾದವರ ಸ್ಥಿತಿಯತ್ತ ಇತರರ ಕಣ್ಣು ತೆರೆಸಲು ಬಳಸಿಕೊಂಡರು. ಮೂಕ ಜಗತ್ತಿನ ಸಂಕಷ್ಟಗಳಿಗೆ ಬಾಯಾಗಲು ಪತ್ರಿಕೆಗಳನ್ನು ಬಳಸಿಕೊಂಡರು. ೧೯೨೦ರ ಜನವರಿ ೩೧ರಂದು ಅಂಬೇಡ್ಕರ್ ‘ಮೂಕನಾಯಕ’ ವಾರಪತ್ರಿಕೆಯನ್ನು ಆರಂಭಿಸಿದರು. ತಮ್ಮ ಮೊದಲ ಸಂಪಾದಕೀಯದಲ್ಲಿ “ಹಲವು ಪತ್ರಿಕೆಗಳು ಕೆಲವೊಂದು ಜಾತಿಗಳ ಹಿತಾಸಕ್ತಿಯನ್ನು ಮೆರೆಸುತ್ತವೆ. ಅವು ಇತರೆ ಜಾತಿಗಳ ಹಿತಾಸಕ್ತಿಯನ್ನು ಕಡೆಗಣಿಸುತ್ತವೆ” ಎಂದು ಬರೆದರು.

“ಈಗಿನ ಪತ್ರಿಕೆಗಳ ಹಿತಾಸಕ್ತಿಯೇ ಬೇರೆ. ಈ ರಾಷ್ಟ್ರ ಅಸಮಾನತೆಯ ತವರೂರು. ಬ್ರಾಹ್ಮಣೇತರರು ಹಾಗೂ ತುಳಿತಕ್ಕೊಳಗಾದ ವರ್ಗಗಳು ಯಾವುದೇ ರೀತಿ ಮುಂದುವರಿಯಲು ಸಾಧ್ಯವಿಲ್ಲ. ಬಡತನ, ಅಸಹಾಯಕತೆ ತುಳಿತಕ್ಕೊಳಗಾದ ಸಮಾಜದಲ್ಲಿ ತುಂಬಿಹೋಗಿದೆ” ಎಂದು ಬರೆದರು.

ಅಂಬೇಡ್ಕರ್ ೧೯೨೪ರಲ್ಲಿ ಮುಂಬೈನಲ್ಲಿ ತುಳಿತಕ್ಕೊಳಗಾದ ವರ್ಗಗಳ ಜನತೆಯ ಸಮಸ್ಯೆಯನ್ನು ಚರ್ಚಿಸಲು ಸಭೆಯೊಂದನ್ನು ಕರೆದರು. ಚರ್ಚೆ ನಂತರ ‘ಬಹಿಷ್ಕೃತ ಹಿತಕಾರಿಣಿ ಸಭಾ’ ರಚಿಸಲಾಯಿತು. ಅಂಬೇಡ್ಕರ್ ಈ ಸಭಾದ ಆಡಳಿತ ಸಮಿತಿಯ ಅಧ್ಯಕ್ಷರಾದರು. ೧೯೨೭ರ ಏಪ್ರಿಲ್ ೩ರಂದು ‘ಬಹಿಷ್ಕೃತ ಭಾರತ’ಪತ್ರಿಕೆಯನ್ನು ಆರಂಭಿಸಿದರು.

‘ಬಹಿಷ್ಕೃತ ಭಾರತ’ ಆಯುಧದಂತೆ ಕೆಲಸ ಮಾಡಿತು. ಅಂಬೇಡ್ಕರ್ ತಾವು ನಂಬಿದ್ದ ಧೋರಣೆಗಳತ್ತ ಜನರ ಗಮನ ಸೆಳೆಯುವುದೇ ಅಲ್ಲದೆ ಸರ್ಕಾರಕ್ಕೆ ಎಚ್ಚರಿಕೆಗಳನ್ನು ನೀಡಲು ಈ ಪತ್ರಿಕೆಯನ್ನು ಬಳಸಿದರು. ದೇವಸ್ಥಾನಗಳಿಗೆ ಪ್ರವೇಶ, ಸಾರ್ವಜನಿಕ ಬಾವಿಯಲ್ಲಿ ದಲಿತರು ನೀರು ತರುವಂತಾಗುವುದು, ಕೆಳವರ್ಗಕ್ಕೆ ಉನ್ನತ ಶಿಕ್ಷಣವನ್ನು ನೀಡುವುದು ಬ್ರಾಹ್ಮಣರು ಮಾತ್ರವೇ ಶಿಕ್ಷಣದ ಗುತ್ತಿಗೆ ಹಿಡಿಯುವುದನ್ನು ತಪ್ಪಿಸಲು ‘ಬಹಿಷ್ಕೃತ ಭಾರತ’ ವೇದಿಕೆಯಾಯಿತು. ಪತ್ರಿಕೆಗಳ ಮೂಲಕ ಸಂಪಾದಕೀಯದಲ್ಲಿ ಎಚ್ಚರಿಕೆ ನೀಡುತ್ತಿದ್ದುದು ಮಾತ್ರವೇ ಅಲ್ಲದೆ ಸಕ್ರಿಯವಾಗಿ ಆ ಬಗ್ಗೆ ಚಳವಳಿ ಹಮ್ಮಿಕೊಳ್ಳುತ್ತಿದ್ದುದು ಅಂಬೇಡ್ಕರ್ ಅವರ ವಿಶೇಷ.

“ಸೇವಕನಿಗೆ ಆತ ಸೇವಕ ಎಂಬುದನ್ನು ಹೇಳು, ಆಗ ಆತ ದಂಗೆಯೇಳುತ್ತಾನೆ” ಎಂಬ ಘೋಷಣೆಯೊಂದಿಗೆ ಅಂಬೇಡ್ಕರ್ ೧೯೩೦ರಲ್ಲಿ ‘ಜನತಾ’ ಪತ್ರಿಕೆ ಆರಂಭಿಸಿದರು. ನಾಗಪುರದಲ್ಲಿ ನಡೆದ ತುಳಿತಕ್ಕೊಳಗಾದವರ ಸಮ್ಮೇಳನದಲ್ಲಿ ಈ ಪತ್ರಿಕೆಯ ರೂಪುರೇಷೆಗಳನ್ನು ನಿರ್ಧರಿಸಲಾಯಿತು.

ಬಂಡವಾಳಶಾಹಿಗಳು ಮತ್ತು ಬ್ರಾಹ್ಮಣರ ಕೈಗೆ ರಾಜಕೀಯ ಅಧಿಕಾರ ನೀಡಿದರೆ ಆ ವರ್ಗಗಳ ಪ್ರತಿಷ್ಠೆ ಹೆಚ್ಚುತ್ತದೆ. ಆದರೆ ಅದೇ ಅಸ್ಪೃಶ್ಯರ, ಹಿಂದುಳಿದ ವರ್ಗದ ಜನತೆಗೆ ಈ ಅಧಿಕಾರ ನೀಡಿದರೆ ಇಡೀ ದೇಶದ ಪ್ರತಿಷ್ಠೆ ಹೆಚ್ಚುತ್ತದೆ ಎಂದು ಅವರು ‘ಜನತಾ’ದಲ್ಲಿ ಬರೆದರು.

ಜನತಾ ಪತ್ರಿಕೆ ಕೆಲವು ಕಾಲ ಸ್ಥಗಿತವಾಯಿತು. ೧೯೪೩ರಲ್ಲಿ ಮತ್ತೆ ಇದಕ್ಕೆ ಜೀವ ನೀಡುವ ಪ್ರಯತ್ನ ನಡೆಯಿತು. ನಂತರ ಜನತಾಗೆ “ಪ್ರಬುದ್ಧ ಭಾರತ” ಎಂದು ಮರುನಾಮಕರಣ ಮಾಡಲಾಯಿತು. “ತ್ಯಾಗದಲ್ಲಿ ಮಾತ್ರವೇ ತುಳಿತಕ್ಕೊಳಗಾದ ಜನಾಂಗಕ್ಕೆ ಭವ್ಯ ಭವಿಷ್ಯವಿದೆ. ನಮ್ಮ ಗುರಿ ಆಡಳಿತ ನಡೆಸುವುದು. ಹುಲಿಗಳಂತಿರಿ, ಹೋರಾಟ ಮತ್ತೂ ಹೋರಾಟ ನಡೆಸಿ” ಎಂದು ಅವರು ಪ್ರಬುದ್ಧ ಭಾರತದಲ್ಲಿ ಕರೆ ನೀಡಿ ಯುವಕರನ್ನು ಹುರಿದುಂಬಿಸಿದರು.

ಅಂಬೇಡ್ಕರ್ ‘ಸಮತಾ’ ಆರಂಭಿಸಿ ಅಲ್ಲಿಯೂ ಸಾಕಷ್ಟು ಲೇಖನಗಳನ್ನು ಬರೆದರು.

ಅಂಬೇಡ್ಕರ್‌ರವರು ಎಷ್ಟು ಮೃದುವಾಗಿದ್ದರೋ ಅವರ ಭಾಷೆ ಅಷ್ಟೇ ಹರಿತವಾಗಿತ್ತು. ಲೇಖನಿಯನ್ನು ಅವರು ಖಡ್ಗವಾಗಿ ಬಳಸಿದರು. ತಾವು ನಂಬಿದ ಸಿದ್ಧಾಂತದ ಮುನ್ನಡೆಗಾಗಿ

ಅಸಮಾನತೆಯ ವಿರುದ್ಧ ಲೇಖನಿ ಪ್ರಹಾರ ನಡೆಸಿದರು. ಅಂಬೇಡ್ಕರ್‌ರವರ ಮೊದಲ ಪತ್ರಿಕೆಯ ಭಾಷೆಗೂ ನಂತರದ ಪತ್ರಿಕೆಗಳ ಭಾಷೆಗೂ ಮಹತ್ತರ ವ್ಯತ್ಯಾಸವಿದೆ. ಆರಂಭದಲ್ಲಿ ವಾಸ್ತವ ಮಾತ್ರ ಮಂಡಿಸುವುದು ಅಂಬೇಡ್ಕರ್ ಉದ್ದೇಶವಾಗಿತ್ತು. ಆದರೆ ಕ್ರಮೇಣ ದಲಿತ ಚಳವಳಿ ಹರಳುಗಟ್ಟುತ್ತಾ ಹೋದಂತೆ ಪತ್ರಿಕೆ ಅದರ ನಾಡಿ ಮಿಡಿತವಾಯಿತು. ಸಂಘಟನೆಯತ್ತಲೂ ಹೆಚ್ಚು ಜನರನ್ನು ಆಕರ್ಷಿಸಲು, ಅವರನ್ನು ಹುರಿದುಂಬಿಸಲು, ಸರಿಯಾದ ಮಾರ್ಗದಲ್ಲಿ ಮುನ್ನಡೆಸಲು ಅಂಬೇಡ್ಕರ್ ಪತ್ರಿಕೆಯನ್ನು ಒಂದು ಸಾಧನವಾಗಿ ಬಳಸಿದರು. ಭಾಷೆಯಲ್ಲಿ ಬದಲಾವಣೆ ಮಾಡಿದರು. ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು ಹರಿಯಲು ಆರಂಭಿಸಿದಂತೆ ಅಂಬೇಡ್ಕರ್ ಲೇಖನಿ ಹೊಸ ಆಕಾರ ಪಡೆಯಿತು.

ಅಂಬೇಡ್ಕರ್ ಎಂದೂ ರಾಜಿ ಮನೋಭಾವದವರಾಗಿರಲಿಲ್ಲ. ಕಂಡದ್ದು ಕಂಡ ಹಾಗೆ ಹೇಳುವುದು ಅವರು ಮೈಗೂಡಿಸಿಕೊಂಡ ಗುಣ. ತಮ್ಮ ಸಮಕಾಲೀನ ನಾಯಕರು ಎಷ್ಟೇ ಆತ್ಮೀಯರಾಗಿದ್ದರೂ ಅವರ ದುರ್ಗುಣಗಳತ್ತ ತಮ್ಮ ಪತ್ರಿಕೆಯ ಮೂಲಕ ಬೊಟ್ಟು ಮಾಡದೆ ಬಿಡುತ್ತಿರಲಿಲ್ಲ.

ಲೋಕಮಾನ್ಯ ತಿಲಕ್‌ರವರ ಪತ್ರಿಕೆ "ಕೇಸರಿ" ಅಂಬೇಡ್ಕರ್‌ರವರು ಆರಂಭಿಸಿದ ದಲಿತರ ಪತ್ರಿಕೆಯ ಬಗ್ಗೆ ಜಾಹಿರಾತು ಪ್ರಕಟಿಸಲು ನಿರಾಕರಿಸಿತು. ಜಾಹಿರಾತು ಹಣ ನೀಡಿದರೂ ಜಾಹಿರಾತನ್ನು ಪ್ರಕಟಿಸದ ಪತ್ರಿಕೆಯನ್ನು ಅಂಬೇಡ್ಕರ್ ತರಾಟೆಗೆ ತೆಗೆದುಕೊಂಡರು. ಪತ್ರಿಕೆಯ ನೀತಿ ನಿಯಮ ಧೋರಣೆಗಳನ್ನು ಒರೆಗೆ ಹಚ್ಚಿದರು.

ಅಂಬೇಡ್ಕರ್ ಚಳವಳಿಗಳ ಆಳದಲ್ಲಿದ್ದುದು ಅವರ ಪತ್ರಿಕೆಗೆ ಹೊಸ ಮುನ್ನೋಟಗಳನ್ನು ಒದಗಿಸಿತು. ಚಳವಳಿಯ ಗಟ್ಟಿತನ ಪತ್ರಿಕೆಯನ್ನು ಬೆಳೆಸಿತು. ಅಂಬೇಡ್ಕರ್ ಅವರು ದಶಕಗಳ ಕಾಲ ಪತ್ರಿಕೆಯ ಒಡನಾಟದಲ್ಲಿದ್ದದ್ದು ಅವರಿಗೆ ಮಾಗಿದ ಅನುಭವಗಳನ್ನು ನೀಡಿತು. ವಿಶ್ವದ ಪತ್ರಿಕೋದ್ಯಮ, ಭಾರತದ ಪತ್ರಿಕೋದ್ಯಮ, ಭಾಷಾ ಪತ್ರಿಕೋದ್ಯಮದತ್ತ ಸೀಳುನೋಟ ಹರಿಸಲು ಸಹಾಯ ಮಾಡಿತು.

ಈ ಹಿನ್ನೆಲೆಯಲ್ಲಿಯೇ ಅಂಬೇಡ್ಕರ್ "ಲಾರ್ಡ್ ಸಾಲಿಸ್ ಬರಿ ತಮ್ಮ ಪತ್ರಿಕೋದ್ಯಮವನ್ನು ಕಚೇರಿ ಕಾರಕೂನರು ಕಚೇರಿ ಕಾರಕೂನರಿಗೆ ಬರೆದ ಪತ್ರಿಕೋದ್ಯಮ ಎಂದು ವರ್ಣಿಸಿದರು. ಭಾರತೀಯ ಪತ್ರಿಕೋದ್ಯಮ ಇದಕ್ಕಿಂತ ಒಂದು ಕೈ ಹೆಚ್ಚಿನದು. ಇದು ತಮ್ಮ ನಾಯಕರನ್ನು ಹೊಗಳಲು ಹೊಗಳು ಭಟ್ಟರು ಬರೆದದ್ದು" ಎಂದು ಟೀಕಿಸಿದರು.

"ಪತ್ರಿಕೆಯನ್ನು ಕೈಯಲ್ಲಿಟ್ಟುಕೊಂಡು ಮಹಾನ್ ನಾಯಕರನ್ನು ಉತ್ಪಾದಿಸುವುದು ಅತ್ಯಂತ ಸುಲಭದ ಕೆಲಸ" "ವ್ಯಕ್ತಿ ಆರಾಧನೆ ಭಾರತದಲ್ಲಿ ಇಂದು ಕಾಣಿಸುವಷ್ಟು ಕುರುಡಾಗಿ ಇನ್ನೆಂದೂ ಇರಲಿಲ್ಲ" "ಚರಿತ್ರೆಯಲ್ಲಿ ನಾಯಕರು ಎಂದರೆ, ಕಾರ್ಲೈಲ್ ಎಂಬಾತ ವರ್ಣಿಸಿದಂತೆ ಹಲವು ನೋಟುಗಳು ಇಂತಹ ಅಗ್ರಗಣ್ಯ ನಾಯಕರು ಕಂಡಾಗ ಇಲ್ಲಿ ಅಗ್ರಗಣ್ಯ ನಾಯಕರಿದ್ದಾರೆ, ಎಚ್ಚರಿಕೆ ಎಂಬ ಫಲಕ ತೂಗುಹಾಕಬೇಕು" ಎಂದು ಅವರು ವರ್ಣಿಸಿದರು.

ಕಾಲನ ತೆರೆ ಸರಿದ ಈ ದಿನಗಳಲ್ಲೂ ಅಂಬೇಡ್ಕರ್ ಮಾತು ಎಷ್ಟು ಪ್ರಸ್ತುತ! ಅಂಬೇಡ್ಕರ್ ಬದುಕಿನಲ್ಲಿ ಆರ್ಥಿಕತೆಯ ಪ್ರಾಮುಖ್ಯವನ್ನು ಅರಿತಿದ್ದರು. ಸಮಾಜದ ಬದಲಾವಣೆ ಆರ್ಥಿಕ ಸಮಾನತೆಯ ಆಧಾರದಲ್ಲಿದೆ ಎಂಬುದೇ ನಾಯಕರನ್ನು ಅವರು ಹಲವು ನೋಟುಗಳಂತೆ ಕಾಣುವಂತೆ ಮಾಡಿತ್ತು.

ಹೀಗೆಯೇ ಅವರು ಪತ್ರಿಕೋದ್ಯಮದಲ್ಲಿ ಆರ್ಥಿಕವಾಗಿ ಬಲಿಷ್ಠರಾದವರು ಕೈಗಳು ಆಡಲು ಆರಂಭಿಸುತ್ತಿದ್ದಂತೇ ಅದರ ಪರಿಣಾಮ ಏನಾಗುತ್ತದೆ ಎಂಬುದನ್ನೂ ಅರಿತಿದ್ದರು. ಗುತ್ತೇದಾರಿ ಬಂಡವಾಳ ಹುಟ್ಟುಹಾಕುವ ಪತ್ರಿಕಾ ಸರಣಿ ಹೇಗೆ ಕಿರುಪತ್ರಿಕೆಗಳನ್ನು, ಭಾಷಾಪತ್ರಿಕೆಗಳನ್ನು ನಿಧಾನವಾಗಿ ಮುಗಿಸುತ್ತದೆ, ಆ ಹಿನ್ನೆಲೆಯಲ್ಲಿ ತುಳಿತಕ್ಕೊಳಗಾದ ಜನಾಂಗಗಳ ಹೋರಾಟದ ದನಿ ಎಷ್ಟು ಕ್ಷೀಣವಾಗುತ್ತಾ ಬರುತ್ತದೆ ಎಂಬುದನ್ನು ಅರಿತಿದ್ದರು.

"ಭಾರತೀಯ ಪತ್ರಿಕೋದ್ಯಮದ ಇಂದಿನ ಚಿತ್ರ ಈ ಮಾತನ್ನು ಸಾಬೀತುಗೊಳಿಸಿದೆ. ಒಂದೊಂದೇ ಪತ್ರಿಕೆಗಳು ಸೆಣಸಲಾರದೆ ಸೋಲುತ್ತಿದ್ದಂತೆ ಅದನ್ನು ಕೊಳ್ಳಲು ಭಾರತದ ಮಹಾನ್ ಬಂಡವಾಳಗಾರರು ಮುಗಿಬೀಳುತ್ತಿದ್ದಾರೆ. ಇಂದಿನ ಭಾರತದಲ್ಲಿ ಕೆಲವು ಬೆರಳೆಣಿಕೆಯ ಪತ್ರಿಕೆಗಳನ್ನು ಬಿಟ್ಟರೆ ಇನ್ನುಳಿದ ಎಲ್ಲವೂ ಬಂಡವಾಳಗಾರರ ಮಡಿಲಲ್ಲಿವೆ. ಈ ಬಂಡವಾಳಗಾರರು ಇಂದು ಜನಾಭಿಪ್ರಾಯ ರೂಪಿಸುವ ರೂವಾರಿಗಳೂ ಹೌದು. ಇವರ ತಾಳಕ್ಕೆ ತಕ್ಕಂತೆ ಹೆಜ್ಜೆಹಾಕಲು ಕಲಿಸುವುದು ಈ ಪತ್ರಿಕೆಗಳ, ಮಾಲೀಕರ ಉದ್ದೇಶ.

"ಭಾರತದಲ್ಲಿ ಪತ್ರಿಕೋದ್ಯಮ ಹಿಂದೆ ವೃತ್ತಿಯಾಗಿತ್ತು. ಆದರೆ ಇಂದು ಅದು ವ್ಯಾಪಾರವಾಗಿದೆ" ಎಂದು ಅಂಬೇಡ್ಕರ್ ವಿಷಾದದಿಂದ ನುಡಿದಿದ್ದರು. "ಭಾರತದ ಪತ್ರಿಕೆಗಳು ತಮ್ಮನ್ನು ಜನತೆಯ ಹೊಣೆಗಾರಿಕೆಯ ಸಲಹೆಗಾರರಾಗಿ ಭಾವಿಸಿಲ್ಲ ಎಂದರು. ಅಂದು ಅಂತೆಯೇ ಆ ಮುಂದೂ ಆ ಲಕ್ಷಣಗಳು ಪತ್ರಿಕೋದ್ಯಮದಲ್ಲಿ ಸ್ಥಾಯಿಯಾಗಿ ಉಳಿದುಕೊಂಡೇ ಬಂದಿವೆ.







ಇತ್ತೀಚಿನ ಮೀಸಲಾತಿ ವಿಚಾರದಲ್ಲಿ ಭಾರತದ ಗಣ್ಯ ಪತ್ರಿಕೆಗಳು ನಡೆದುಕೊಂಡ ರೀತಿಯನ್ನು ಗಮನಿಸಿದರೆ ಸಾಕು ಈ ಅಂಶ ಹೊರಬೀಳುತ್ತದೆ. ಮೇಲ್ವರ್ಗದ ಕೆಲವೇ ಕೆಲವು ವಿದ್ಯಾವಂತರ ಕೈಯಲ್ಲಿ ಸಿಕ್ಕಿರುವ ಪತ್ರಿಕೆಗಳು ಜನತೆಯ ಅಭಿಪ್ರಾಯವನ್ನೇ ಬದಲುಮಾಡುವ ಹಾದಿಗೆ ಇಳಿದವು. ಹಲವು ತುಳಿತಕ್ಕೊಳಗಾದ ಜೀವಗಳ ಬದುಕಿಗೆ ಭದ್ರತೆ ತರುವ ಮಂಡಲ್ ಆಯೋಗದ ವರದಿಯ ಜಾರಿ ಒಂದು ಜನಪರ ಸರ್ಕಾರದ ಭದ್ರತೆಗೇ ಆತಂಕವೊಡ್ಡುವ ರೀತಿಯಲ್ಲಿ ಪತ್ರಿಕೆಗಳು ನಡೆದುಕೊಂಡವು. ಅಕ್ಷರಗಳ ಬೆಳಕು, ಸೃಷ್ಟಿಮಾಡುವ ಲೋಕ, ಉಂಟುಮಾಡುವ ಬದಲಾವಣೆಯನ್ನು ಅರಿತಿರುವುದರಿಂದಲೇ ಈ ವರ್ಗ ಸದಾ ಇತರರನ್ನು ಅಕ್ಷರದಿಂದ ವಂಚಿಸುವುದರಿಂದಲೇ ದೊಡ್ಡವರಾಗುತ್ತವೆ.

"ಯಾವುದೇ ಉದ್ದೇಶಗಳಿಂದಲೂ ಬಣ್ಣ ಲೇಪಿಸಿಕೊಳ್ಳದ ಸುದ್ದಿಯನ್ನು ನೀಡುವುದು, ಸಮುದಾಯಕ್ಕೆ ಒಳಿತನ್ನು ಉಂಟುಮಾಡುವ ದೃಷ್ಟಿಕೋನವನ್ನು ನೀಡುವುದು, ಎಷ್ಟೇ ದೊಡ್ಡದಾದರೂ ತಪ್ಪುದಾರಿಗಿಳಿದಿದ್ದನ್ನು ನಿರ್ಭಯವಾಗಿ ತಿದ್ದುವುದು ತನ್ನ ಪ್ರಥಮ ಕರ್ತವ್ಯ ಎಂದು ಭಾರತ ಪತ್ರಿಕೋದ್ಯಮ ಭಾವಿಸಿಲ್ಲ" ಎಂಬುದು ಅಂಬೇಡ್ಕರ್‌ರವರ ಕೊರಗಾಗಿತ್ತು.

ದಶಕಗಳ ಅಂಕದ ಪರದೆ ಸರಿದಾದ ಮೇಲೂ ಕಾಣಸಿಗುವ ಚಿತ್ರ ಭಾರತೀಯ ಪತ್ರಿಕೋದ್ಯಮದ ಸ್ಪಷ್ಟ ಆಕಾರ ವಿಕಾರಗಳನ್ನು ಪರಿಚಯಿಸುತ್ತದೆ. ದೇಶದ ಮನಸ್ಸು ಒಡೆದ ಸಂದರ್ಭದಲ್ಲಿ ಪತ್ರಿಕೆಗಳು ಸುರಿವ ಎಣ್ಣೆ ಪತ್ರಿಕೋದ್ಯಮದ ಇತಿಹಾಸಕ್ಕೆ ಕಪ್ಪು ಮೆತ್ತುತ್ತವೆ. ಪತ್ರಿಕೋದ್ಯಮದ ಸ್ಥಿತಿ ಬದಲಾಗಬೇಕಾದರೆ ಅಂಬೇಡ್ಕರ್ ಬಯಸಿದಂತೆ ಅಲ್ಲಿ ಹೊಸ ಉಸಿರಾಟ ಕೇಳಬೇಕು. ಅಕ್ಷರ ಕಾಣದ ಜಗತ್ತಿನಲ್ಲಿ ನಲುಗಿದ ಜೀವಗಳು ಅಕ್ಷರವೇ ಲೋಕವಾದ ಈ ಜಗತ್ತನ್ನು ಪ್ರವೇಶಿಸಬೇಕು. ಅಕ್ಷರಗಳೊಳಗೆ ಮಾನವೀಯತೆಯ ಸೆಲೆ ಚಿಮ್ಮಿ ಹರಿಯುವಂತಾಗಬೇಕು.

**ಜಿ. ಎನ್. ಮೋಹನ್**
ನಂ. ೧೪೨, ೬ನೇ ಅಡ್ಡರಸ್ತೆ, ೫ನೇ ಹಂತ
ರಾಜಾಜಿನಗರ, ಬೆಂಗಳೂರು – ೫೬೦ ೦೧೦

# 'ಭಾರತ ಭಾಗ್ಯ ವಿಧಾತ'– ಎಲ್ಲರಿಗೂ ಸಲ್ಲುವ ಅಂಬೇಡ್ಕರ್

■ ಬಿ. ಯು. ಸುಮಾ

ಅಂಬೇಡ್ಕರರ ಬಾಲ್ಯ, ಯೌವ್ವನ, ವಿದ್ಯಾಭ್ಯಾಸ, ವಿದೇಶದ ಅಧ್ಯಯನ, ಉದ್ಯೋಗ, ಅವರು ಬ್ಯಾರಿಸ್ಟರ್ ಆಗಿ ಭಾರತೀಯ ಸಮಾಜದ ಶ್ರೇಣೀಕರಣ ವ್ಯವಸ್ಥೆಯ ವಿರುದ್ಧ ಸಾರಿದ ಸಮರ, ಅವರ ಸಾಮಾಜಿಕ–ರಾಜಕೀಯ ಸಂಘರ್ಷ, ಅಂಬೇಡ್ಕರರ ಬದುಕಿಗೆ ಬೆನ್ನೆಲುಬಾದ ಅವರ ಗುರುಗಳಾದ ಅಂಬೇಡ್ಕರ್, ಶಾಹು ಮಹಾರಾಜ್, ಚೌಡರ್ ಕೆರೆ ನೀರಿನ ಪ್ರಸಂಗ, ಸ್ವತಂತ್ರ ಹೋರಾಟ, ದುಂಡು ಮೇಜಿನ ಸಮ್ಮೇಳನ, ಗಾಂಧಿ ಜೊತೆಗಿನ ಮುಖಾಮುಖಿ, ಪೂನಾ ಒಪ್ಪಂದ, ಸಂವಿಧಾನದ ರಚನೆ, ಬೌದ್ಧ ಧರ್ಮಕ್ಕೆ ಮತಾಂತರ – ಈ ಎಲ್ಲಾ ವಿಷಯಗಳನ್ನು ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳ ನಡುವೆ ಲಾಳಿಯಾಡಿಸುತ್ತಾ ಸೂತ್ರಧಾರ ಮತ್ತು ರಮಾಬಾಯಿ ಅಂಬೇಡ್ಕರ್ ಮೂಲಕ ಹೇಳಿಸುವ ನಿರ್ದೇಶಕರು ಆಯಾ ಸಂದರ್ಭಕ್ಕೆ ಪೂರಕವಾಗುವಂತೆ ಅದನ್ನು ಸಮಕಾಲೀನ ಸಂಕಥನಗಳ ಜೊತೆಗೆ ತಳುಕಿ ಹಾಕಿಬಿಡುತ್ತಾರೆ.

**ಈ**ಗ ಹತ್ತು ಹದಿನೈದು ವರ್ಷಗಳ ಹಿಂದೆ, ಸಾಮಾನ್ಯವಾಗಿ ಅಂಬೇಡ್ಕರ್ ಅವರ ಪ್ರತಿಮೆ ಅಥವಾ ಚಿತ್ರ ಇರುವ ತಗಡಿನ ಬೋರ್ಡ್‌ಗಳು ದಲಿತ ಸಂಘರ್ಷ ಸಮಿತಿಯ ಕಛೇರಿಯ ಮುಂದೋ ಅಥವಾ ಯಾವುದೋ ಕೊಳೆಗೇರಿಯಲ್ಲೋ ಕಂಡುಬರುತ್ತಿದ್ದವು. ಈ ಹೊತ್ತು ಎಲ್ಲರ ಅಂಗೈ ಆಟಿಕೆಯಾಗಿರುವ ವಾಟ್ಸ್‌ಆಪ್, ಫೇಸ್‌ಬುಕ್‌ನಂಥ ಜಾಲ ಜಗತ್ತಿನಲ್ಲಿ ಹತ್ತು ಹಲವು ಕಾರಣಗಳಿಗಾಗಿ ಅಂಬೇಡ್ಕರ್ ಸದಾ ಸರ್ಕ್ಯುಲೇಟ್ ಆಗುತ್ತಿರುತ್ತಾರೆ.

ದಲಿತರ ಹಕ್ಕುಗಳ ಹೋರಾಟದ, ಸಾಮಾಜಿಕ ನ್ಯಾಯದ ಹರಿಕಾರ ಅಂಬೇಡ್ಕರ್, ಅವಕಾಶವಾದಿ ರಾಜಕಾರಣದ ವಶವಾಗಿದ್ದು, ಅರುಣ್ ಶೌರಿಯಂಥ ಅಸಹಿಷ್ಣುಗಳಿಗೆ 'ವರ್ಶಿಪಿಂಗ್ ಫಾಲ್ಸ್ ಗಾಡ್ಸ್' ಆಗಿದ್ದು ಎಲ್ಲರಿಗೂ ಗೊತ್ತು. ಇತ್ತೀಚಿನ ವರ್ಷಗಳಲ್ಲಿ ಅಂಬೇಡ್ಕರ್ ಅವರು ಪ್ರತಿಪಾದಿಸಿದ ಮೌಲ್ಯಗಳನ್ನು ಹೊಸಕಿ ಹಾಕುತ್ತಾ ಅವರಿಗೆ ಕೇಸರಿ ಬಣ್ಣ ಬಳಿಯುವ ಪ್ರಯತ್ನಗಳು  ನಡೆಯುತ್ತಿರುವ ಸಂದರ್ಭದಲ್ಲಿಯೇ ಕನ್ಹಯ್ಯ ಕುಮಾರ್, ಜಿಗ್ನೇಶ್ ಮೇವಾನಿ ಅಂಥವರು ಅನೇಕ ನಿರ್ಬಂಧಗಳಿಗೆ ಸೆಡ್ಡು ಹೊಡೆದು ಅಂಬೇಡ್ಕರ್ ಅವರನ್ನು ವಿಸ್ತರಿಸುತ್ತಿರುವ ರೀತಿಯೂ ಇದೆ. ನಮ್ಮ ಕರ್ನಾಟಕದಲ್ಲಿನ 'ಉಡುಪಿ ಚಲೋ', ಸರ್ಕಾರದ ಸಮಾಜ ಕಲ್ಯಾಣ ಇಲಾಖೆ ಯುವಜನತೆಯತ್ತ ಅಂಬೇಡ್ಕರ್ ಅವರನ್ನು ಕೊಂಡೊಯ್ಯಲು ಹಮ್ಮಿಕೊಂಡಿರುವ 'ಅಂಬೇಡ್ಕರ್ ಜ್ಞಾನದರ್ಶನ ಅಭಿಯಾನ', ಮಹಿಳಾ ಸಂಘಟನೆಗಳು, ಚಳುವಳಿಗಳು ಮುಂದಿಡುತ್ತಿರುವ ಅಂಬೇಡ್ಕರ್, ಎನ್.ಜಿ.ಓ.ಗಳ ಪ್ರಚಾರದ ಅಂಬೇಡ್ಕರ್... ಎಷ್ಟೆಲ್ಲಾ ಅಂಬೇಡ್ಕರ್...

ಅಂಬೇಡ್ಕರ್ ಬಗೆಗಿನ ಕಲ್ಪಿತ ಕಟ್ಟುಗಳು ಕಳಚಿಬೀಳುತ್ತಿರುವ ಹೊತ್ತಿನಲ್ಲಿಯೇ, ಹಲವು ಸಮುದಾಯಗಳಲ್ಲಿ ಕೆಲವು ಕೆಲವಾಗಿ ಹಂಚಿಹೋಗಿರುವ ಅಂಬೇಡ್ಕರ್ ಅವರನ್ನು ಒಂದು ಸಮಾಜಕ್ಕೆ ಇಡಿಯಾಗಿ ಕೊಡುವುದು, ಅಧಿಕೃತವಾಗಿ ಸಲ್ಲಿಸುವುದು ಹೇಗೆ ?

ಅಂಬೇಡ್ಕರ್ ಅವರ ೧೨೬ನೇ ಜಯಂತಿಯ ವರ್ಷದಲ್ಲಿ ಕರ್ನಾಟಕದ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯ ನಿರ್ದೇಶಕರಾದ ಎನ್. ಆರ್. ವಿಶುಕುಮಾರ್ ಅವರಿಗೆ ಈ ಪ್ರಶ್ನೆ ಕಾಡಿದ ಫಲವೇ 'ಭಾರತ ಭಾಗ್ಯ ವಿಧಾತ' ಎಂಬ ಅಂಬೇಡ್ಕರ್ ಅವರ ಜೀವನ, ದರ್ಶನಗಳ ರೂಪಕ ಪರಿಕಲ್ಪಿತವಾಯಿತು.



ಒಂದೂವರೆ ತಾಸಿನ, ೮೦ಕ್ಕೂ ಹೆಚ್ಚು ಕಲಾವಿದರು ಅಭಿನಯಿಸಿರುವ ಈ ರೂಪಕವನ್ನು 'ಮೈತ್ರಿ', 'ನವಿಲಾದವರು', 'ಜಟ್ಟ'ದಂಥ ಪೆರಿಫೆರಲ್ ವಿಷಯಗಳನ್ನು ಚಲನಚಿತ್ರವಾಗಿಸುತ್ತಿರುವ ಪ್ರತಿಭಾವಂತ ಅಂಬೇಡ್ಕರ್‌ವಾದಿ ಯುವ ನಿರ್ದೇಶಕ ಬಿ. ಎಮ್. ಗಿರಿರಾಜ್ ಅವರು ನಿರ್ದೇಶಿಸಿದ್ದಾರೆ. ನಿಬ್ಬೆರಗಾಗಿಸುವ ಗ್ರ್ಯಾಂಡ್‌ಸ್ಕೇಲ್‌ನಲ್ಲಿ ತಯಾರಾದ ಈ ರೂಪಕ, ಅಭಿನಯ, ನೃತ್ಯ, ಹಾಡು, ಸಂಗೀತ, ಧ್ವನಿ, ಬೆಳಕು, ದೃಶ್ಯಗಳ ಅಭೂತಪೂರ್ವ ಸಂಯೋಜನೆಯೊಂದಿಗೆ ಹಿಂದೂ ಧರ್ಮದ ಔಟ್‌ಸೈಡರ್‌ನ ಕಥೆಯನ್ನು ಔಟ್‌ಸ್ಟ್ಯಾಂಡಿಂಗ್ ಎನ್ನುವಂತೆ ಹೇಳುತ್ತದೆ.

ಅಂಬೇಡ್ಕರ್ ಅವರಂಥ ವಿರಾಟ ವ್ಯಕ್ತಿತ್ವವನ್ನು ರೂಪಕದ ಚೌಕಟ್ಟಿಗೆ ಅಳವಡಿಸುವುದು ದೊಡ್ಡ ಸವಾಲು. ದೇಶದ ಜೊತೆಗಿನ ಸಾವಯವ ಸಂಬಂಧ ಕಳೆದುಕೊಂಡ, ಸ್ಯೂಡೋ ಸೋಶಿಯಲ್ ಮಾದರಿಗಳಿಗೆ ಜೋತುಬಿದ್ದಿರುವ ಇಂದಿನ ಯುವಜನರ ನೆಲೆಯಿಂದ ರೂಪಕ ಟೇಕ್‌ಆಫ್ ಆಗುತ್ತದೆ. ಅಂಬೇಡ್ಕರರ ಬಾಲ್ಯ, ಯೌವ್ವನ, ವಿದ್ಯಾಭ್ಯಾಸ, ವಿದೇಶದ ಅಧ್ಯಯನ, ಉದ್ಯೋಗ, ಅವರು ಬ್ಯಾರಿಸ್ಟರ್ ಆಗಿ ಭಾರತೀಯ ಸಮಾಜದ ಶ್ರೇಣೀಕರಣ ವ್ಯವಸ್ಥೆಯ ವಿರುದ್ಧ ಸಾರಿದ ಸಮರ, ಅವರ ಸಾಮಾಜಿಕ–ರಾಜಕೀಯ ಸಂಘರ್ಷ, ಅಂಬೇಡ್ಕರರ ಬದುಕಿಗೆ ಬೆನ್ನೆಲುಬಾದ ಅವರ ಗುರುಗಳಾದ ಅಂಬೇಡ್ಕರ್, ಶಾಹು ಮಹಾರಾಜ್, ಚೌಡರ್ ಕೆರೆ ನೀರಿನ ಪ್ರಸಂಗ, ಸ್ವತಂತ್ರ ಹೋರಾಟ, ದುಂಡು ಮೇಜಿನ ಸಮ್ಮೇಳನ, ಗಾಂಧಿ ಜೊತೆಗಿನ ಮುಖಾಮುಖಿ, ಪೂನಾ ಒಪ್ಪಂದ, ಸಂವಿಧಾನದ ರಚನೆ, ಬೌದ್ಧ ಧರ್ಮಕ್ಕೆ ಮತಾಂತರ ? ಈ ಎಲ್ಲಾ ವಿಷಯಗಳನ್ನು ಭೂತ, ವರ್ತಮಾನ ಮತ್ತು ಭವಿಷ್ಯತ್ತುಗಳ ನಡುವೆ ಲಾಳಿಯಾಡಿಸುತ್ತಾ ಸೂತ್ರಧಾರ ಮತ್ತು ರಮಾಬಾಯಿ ಅಂಬೇಡ್ಕರ್ ಮೂಲಕ ಹೇಳಿಸುವ ನಿರ್ದೇಶಕರು ಆಯಾ ಸಂದರ್ಭಕ್ಕೆ ಪೂರಕವಾಗುವಂತೆ ಅದನ್ನು ಸಮಕಾಲೀನ ಸಂಕಥನಗಳ ಜೊತೆಗೆ ತಳುಕಿ ಹಾಕಿಬಿಡುತ್ತಾರೆ.

**ಬೆಲೆ**

ಬದುಕಿನಲ್ಲಿ
ಯಾವುದೂ ಪುಕ್ಕಟೆ
ಸಿಕ್ಕದು;
ಪ್ರತಿಯೊಂದನ್ನೂ
ಬೆಲೆ ತೆರಬೇಕು:
ಒಲವಿಗೂ!

**ಸಿ.ಪಿ.ಕೆ**
ಮೈಸೂರು

ಇದರ ಜೊತೆಗೆ ಅಂಬೇಡ್ಕರ್ ಮಂಡಿಸಿದ ಚಾರಿತ್ರಿಕವಾದ, ಈ ಹೊತ್ತಿಗೂ ಪ್ರಸ್ತುತವಾಗಿರುವ ಹಿಂದೂ ಕೋಡ್‌ಬಿಲ್ ಅಥವಾ ಮತಾಂತರಕ್ಕೆ ಸಂಬಂಧಿಸಿದ ಐಡಿಯಾಲಾಜಿಕಲ್ ಡಿಬೇಟ್ಸ್‌ಗಳನ್ನು ಅದರ ಟೆನೆಟ್ಸ್‌ಗೆ ಸ್ವಲ್ಪವೂ ಧಕ್ಕೆ ಒದಗದಂತೆ ನಿರೂಪಿಸಲಾಗಿದೆ.

ಸಾರ್ವಜನಿಕ ವಲಯದಲ್ಲಿ ಎರಡು ಪ್ರಧಾನ ಮಾದರಿಗಳಲ್ಲಿ, ಎಂದರೆ ಸಂವಿಧಾನ ಶಿಲ್ಪಿ ಮತ್ತು ಕೆಳಜಾತಿಗಳ ನಾಯಕ ಎಂದು ಮಾತ್ರ ಪ್ರತಿಬಿಂಬಿತವಾಗಿರುವ ಅಂಬೇಡ್ಕರ್ ಅವರನ್ನು ನಿರಚನೆಗೊಳಿಸುವುದಕ್ಕೆ ನಿರ್ದೇಶಕರು ಈ ಎರಡೂ ಗ್ರ್ಯಾಂಡ್ ನೆರೇಟಿವ್ಸ್‌ಗಳ ಹೊರ ಆವರಣದೊಳಗೆ ಅಡಕವಾಗಿರುವ ಅವರ ಮಹತ್ವಪೂರ್ಣವಾದ ಅನೇಕ ಚಿಂತನೆಗಳು ಮತ್ತು ಕೊಡುಗೆಗಳನ್ನು ಪರಿಚಯಿಸುತ್ತಾರೆ. ದುಡಿಯುವ ಮಹಿಳೆಯರಿಗೆ ಹೆರಿಗೆ ಭತ್ಯೆ ನೀಡಬೇಕೆಂದು ಮುಂಬಯಿಯ ಶಾಸಕಾಂಗ ಸಭೆಯಲ್ಲಿ ಅಂಬೇಡ್ಕರ್ ಮಂಡಿಸಿದ ಮಸೂದೆ, ಹಿಂದೂ ಕೋಡ್‌ಬಿಲ್‌ನ ಮೂಲಕ ಎಲ್ಲಾ ಧರ್ಮದ, ಜಾತಿಯ, ವರ್ಗದ ಮಹಿಳೆಯರನ್ನು ಪುರುಷಾಧಿಪತ್ಯದ ಕಬಂಧ ಬಾಹುಗಳಿಂದ ಬಿಡಿಸಲು ಮಾಡಿದ ಹೋರಾಟ, ಜಾತೀಯ ಅಥವಾ ಧರ್ಮೀಯ ಮೂಲಭೂತ ವಾದಿತ್ವದ ಎದುರು ನಾವು ಅಪಾರವಾದ ಸಹನೆಯಿಂದ ತುಳಿಯಲೇಬೇಕಾದ ಶಾಂತಿಯ ಪಥ, ನಮ್ಮ ಸಮಾಜದ ಆಳಕ್ಕೆ ಇಳಿದು ಅಲ್ಲಾಡಿಸಲಾರದಂತೆ ಬೇರು ಬಿಟ್ಟುಕೊಂಡಿರುವ ಅಸ್ಪೃಶ್ಯತೆಯ ಸಮಸ್ಯೆಯನ್ನು ರೌಂಡ್ ಟೇಬಲ್ ಕಾನ್ಫರೆನ್ಸ್‌ನಲ್ಲಿ ಮಂಡಿಸುವ ಮೂಲಕ ಭಾರತೀಯ ಸಮಾಜವನ್ನು ನಾಗರಿಕವಾಗಿಸುವುದಕ್ಕೆ ಮುನ್ನುಡಿಯನ್ನು ಹಾಡಿದ್ದು ? ಇಂಥ ಹಲವಾರು ವಿಷಯಗಳನ್ನು ಪೊಲಿಟಿಸೈಸ್ ಮಾಡದೇ ನಿರೂಪಿಸುವುದರ ಮೂಲಕವೇ ಅಂಬೇಡ್ಕರ್ ಬಗ್ಗೆ ರಚಿತವಾದ ಕಾಂಟೋರ್‌ಗಳನ್ನು ತೆಳುವಾಗಿಸಿಬಿಡುತ್ತಾರೆ. ಈ ಮೂಲಕ ಅಂಬೇಡ್ಕರ್ ಬಗ್ಗೆ ಮುಖ್ಯವಾಹಿನಿಯ ಗ್ರಹಿತದಲ್ಲಿರುವ ಪೂರ್ವಗ್ರಹಗಳನ್ನು ನಿರ್ದೇಶಕರು ಅತ್ಯಂತ ಜಾಣತನದಿಂದ ಮೌಲ್ಯಮಾಪನ ಮಾಡುತ್ತಾ ಹೋಗುತ್ತಾರೆ.



ಎಲ್ಲಕ್ಕಿಂತ ಮುಖ್ಯವಾಗಿ ಯಾವುದೇ ಕ್ಷೇತ್ರದ, ವರ್ಗದ, ಧರ್ಮದ ಜನರಿಗೆ ಅಂಬೇಡ್ಕರ್ ನೇರವಾಗಿ ತಮ್ಮ ಬದುಕಿಗೇ ಸಂಬಂಧಪಟ್ಟವರು ಎನ್ನುವಂತೆ, ಬಹುಸ್ತರೀಯವಾದ ಪದರುಗಳು ರೂಪಕದಲ್ಲಿ ಗೋಜಲೇ ಇಲ್ಲದಂತೆ ರೂಪುಗೊಳ್ಳುತ್ತವೆ. ಹೀಗೆ ಎಲ್ಲೆಲ್ಲಿಯೂ ಸಲ್ಲುವ ಅಂಬೇಡ್ಕರ್ ಅವರ ದೂರದೃಷ್ಟಿತ್ವದ ಚಿಂತನೆಗಳು, ಜಾಗತಿಕ ಬಿಕ್ಕಟ್ಟಿನ ಸಮಯದಲ್ಲಿ ಅದು ಭಾರತವನ್ನು ಕೈಹಿಡಿದು ನಡೆಸಿದ ರೀತಿಯನ್ನು ರೂಪಕ ಕಟ್ಟಿಕೊಡುತ್ತದೆ – ಉದಾಹರಣೆಗೆ, ೨೦೦೮ರಲ್ಲಿ ಶಕ್ತರಾಷ್ಟ್ರಗಳು ಆರ್ಥಿಕ ಕುಸಿತದಿಂದ ತತ್ತರಿಸುತ್ತಿದ್ದಾಗ, ಭಾರತದ ಆರ್ಥಿಕ ವ್ಯವಸ್ಥೆ ಸುಸ್ಥಿರವಾಗಿದ್ದಕ್ಕೆ ಕಾರಣವಾದ ರಿಸರ್ವ್ ಬ್ಯಾಂಕ್‌ನ ನೀತಿಗಳು, ಅದನ್ನು ರೂಪಿಸಿದ ಅಂಬೇಡ್ಕರ್ ಚಿಂತನೆಗಳು; ಆರ್ಥಿಕ, ಧಾರ್ಮಿಕ, ಜಾತೀಯ... ಎಲ್ಲಾ ರೀತಿಯ ವಸಾಹತುಶಾಹಿತ್ವದ ಭೀತಿಯಲ್ಲೂ ಉಸಿರಾಡುವ ಬಹುತ್ವ ? ಅದಕ್ಕೆ ಕಾರಣವಾದ ಅಂಬೇಡ್ಕರ್ ಪರಿಕಲ್ಪಿತ ಪ್ರಜಾಪ್ರಭುತ್ವವು ಭಾರತವನ್ನು ಸಶಕ್ತವಾಗಿಸಿರುವ ರೀತಿ – ಹೀಗೆ ನಮ್ಮ ದೇಶದ 'ಸರ್ವಾಂಗೀಣ' ಅಭಿವೃದ್ಧಿಗೆ ಅಂಬೇಡ್ಕರ್ ಹಠ ತೊಟ್ಟು ಶ್ರಮಿಸಿದ್ದನ್ನು ಹೇಳುತ್ತಲೇ ಈ ಹೊತ್ತಿನ 'ಅಭಿವೃದ್ಧಿ'ಯನ್ನು ಕುರಿತು ಯೋಚಿಸುವ ಹಾಗೆ ಮಾಡುತ್ತದೆ.

ಭಾರತದ ಭಾಗ್ಯವನ್ನು ಬರೆದ, ಆದರೆ ಅದರ ಸಾಮಾಜಿಕ ಸುಪ್ತಪ್ರಜ್ಞೆಯಲ್ಲಿ ಮಾನಸಿಕ ದೂರಕ್ಕೆ ಒಳಗಾದ ಇಂಥ ವ್ಯಕ್ತಿಯ, ಅವರ ಹೈಲಿ ಪೊಲಿಟಿಕಲ್ ಆದ ಬದುಕನ್ನು ನೋಡುಗರಿಗೆ ಕನ್ವಿನ್ಸಿಂಗ್ ಆಗಿ ಹೇಳುವುದು ಹೇಗೆ ?

ವಿಶುಕುಮಾರ್, ಗಿರಿರಾಜ್ ಮತ್ತು ಅವರ ಸೃಜನಶೀಲ ಹಾಗೂ ಪ್ರತಿಭಾವಂತ ತಂಡ ನೋಡುಗರು ಮೈಮರೆತು ತಲ್ಲೀನವಾಗುವ ಇನ್ನೋವೇಟಿವ್ ಆದ ವಿಧಾನಗಳ ಮೂಲಕ ಈ ಸವಾಲನ್ನು ಸರಾಗವಾಗಿ ನಿರ್ವಹಿಸಿಬಿಡುತ್ತಾರೆ. ಚೌಡಕಿ, ಕಂಸಾಳೆ, ಡೊಳ್ಳು ಕುಣಿತ, ಯಕ್ಷಗಾನ, ವೀರಗಾಸೆ, ತಮಾಷ, ಗೀಗೀಪದ, ಲಾವಣಿ, ಮಂಟೇಸ್ವಾಮಿ ಕಾವ್ಯ , ಬುಡುಬುಡಿಕೆ ... ಹೀಗೆ ಇನ್ನೂ ಹಲವು ಪ್ರದರ್ಶನ ಕಲೆಗಳ ಜೊತೆಗೆ, ರೂಪಕದ ಬೇರೆ ಬೇರೆ ಪದರುಗಳನ್ನು ಸ್ಟೇಜ್‌ನ ಹಿಂದಿನ ದೊಡ್ಡ ಸಿನೆಮಾದ ಪರದೆಯ ಮೇಲೆ ಅಭಿನಯಕ್ಕೆ ಸಮಾನಾಂತರವಾಗಿ ಪ್ರೊಜೆಕ್ಟ್ ಮಾಡಲಾಗುತ್ತಿತ್ತು. ಅತ್ತ ಪರ್ಫಾರ್ಮೆನ್ಸ್ ನಡೆಯುತ್ತಿದ್ದರೆ, ಇತ್ತ ಇತಿಹಾಸದ ಇಮೇಜ್‌ಗಳು, ಭಾರತದ ರಾಜಕೀಯ ವಿದ್ಯಮಾನಗಳ ವೀಡಿಯೋಗಳ ಕ್ಲಿಪಿಂಗ್‌ಗಳು ಪರದೆಯ ಮೇಲೆ ಮೂಡುತ್ತಿದ್ದವು. ಇದರ ಜೊತೆಗೆ, ರೂಪಕದ ಡೆಪ್ತ್ ಮತ್ತು ಡೈಮೆನ್ಷನ್‌ಅನ್ನು ಹೆಚ್ಚಿಸುವುದಕ್ಕೆ ಸಂಕೇತಗಳು, ಧ್ವನ್ಯಾತ್ಮಕವಾದ ಹಾಡು ಸಂಭಾಷಣೆಗಳು,



ಪ್ರಜ್ವಲಿಸುವ ಬೆಳಕು, ಬಣ್ಣ ಮತ್ತು ಕಾಸ್ಟ್ಯೂಮ್ಸ್‌ಗಳನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಳ್ಳಲಾಗಿದೆ. ಸುಮಾರು ಹದಿನೈದು–ಇಪ್ಪತ್ತು ಅಡಿಯ ಸಸ್ಪೆಂಡೆಡ್ ಊಫರ್ಸ್ ರೂಪಕದ ಆಶಯವನ್ನು ಎದೆ ಝಲ್ಲೆನ್ನುವಂತೆ ಅನುರಣಿಸುತ್ತಿದ್ದರೆ, ಏಕಕಾಲಕ್ಕೆ ೮೦ ಜನ ಕಲಾವಿದರು ಕುಣಿದು ಕುಪ್ಪಳಿಸುವ ಬೃಹತ್ ಸ್ಟೇಜ್‌ನ ಎಫೆಕ್ಟ್, ಒಂದು ಮೆಗಾ ಸ್ಟ್ರಕ್ಚರ್‌ಅನ್ನು ಸೃಷ್ಟಿಸುತ್ತಿತ್ತು. ಈ ಎಲ್ಲದರ ಮೂಲಕ ಉಂಟಾದ ಪರಿಣಾಮ ಏನೆಂದರೆ, ಸಂರಚಿತ ಅಂಬೇಡ್ಕರ್ ನಿರಚನೆಗೆ ಒಳಗಾಗುತ್ತಿದ್ದರು.

ಇಡೀ ರೂಪಕದಲ್ಲಿ  ಅತ್ಯಂತ ಒರಿಜಿನಲ್ ಆದ ಮೆಟಾಫರ್ ಎಂದರೆ, ಬ್ರಿಟಿಷರೊಂದಿಗೆ ಮುಖಾಮುಖಿಯಾದಾಗ ರಮಾಬಾಯಿ ಇಂಗ್ಲಿಷ್‌ನಲ್ಲಿ ಆಡುವ ಮಾತುಗಳು. ಅಂಬೇಡ್ಕರ್ ಬಹಳ ಪ್ರೀತಿಸುತ್ತಿದ್ದ ಅವರ ನಾಯಿ ಒಂದು ಆಕ್ಟಿವ್ ವಾಯ್ಸ್ ಆಗಿ ವ್ಯಕ್ತವಾಗುವ ತಂತ್ರ ಯಶಸ್ವಿಯಾಗುತ್ತದೆ.

ನಿರ್ದಿಷ್ಟ ಕಾಲಘಟ್ಟದಲ್ಲಿ, ನಿರ್ದಿಷ್ಟ ರೀತಿಯಲ್ಲಿ ರೂಪುಗೊಳ್ಳುವ ಎಲ್ಲಾ ಕಥನಗಳಿಗೂ ಒಂದು ರಾಜಕಾರಣ ಇರುತ್ತದೆ. ಹಾಗಾದರೆ, 'ಭಾರತ ಭಾಗ್ಯ ವಿಧಾತ' ಮುಂದಿಡುವ ರಾಜಾಕಾರಣ ಯಾವುದು ? ನಮ್ಮ ದೇಶದ ಬಹುಸಂಖ್ಯಾತರ ಮೇಲೆ 'ಅಲ್ಪಸಂಖ್ಯಾತ'ರ ಹುನ್ನಾರಗಳನ್ನು ಒತ್ತಾಯಪೂರ್ವಕವಾಗಿ, ಆಕ್ರಮಣಕಾರಿಯಾಗಿ ಹೇರುತ್ತಾ, ರಾಷ್ಟ್ರವನ್ನು 'ಏಕ'ವಾಗಿ ಬಿಂಬಿಸುತ್ತಿರುವ ಈ ಹೊತ್ತಿನಲ್ಲಿ, 'ಬಹುತ್ವ'ಕ್ಕೆ ನ್ಯಾಯವಾಗಿ ಸಲ್ಲಬೇಕಾದ ಅಧಿಕೃತತೆಯನ್ನು ಆಧರಿಸಿಯೇ, ಈ ಎಲ್ಲಾ ಬಹುತ್ವಗಳನ್ನು ಒಂದು ಸರಳ ಸೂತ್ರದಲ್ಲಿ 'ಏಕ'ವಾಗಿ ಸೇರಿಸುವ ಹಾಗೂ ಭಾರತದ ನಿಜವಾದ ಐಡೆಂಟಿಟಿಯನ್ನು ಅದರ ತತ್ವ ಮತ್ತು ಮೌಲ್ಯಗಳನ್ನು ನೆನಪಿಸುವ ಮಹತ್ವಾಕಾಂಕ್ಷೆಯ ರಾಜಕಾರಣವನ್ನು ಈ ರೂಪಕ ಮುಂದಿಡುತ್ತದೆ.

ಅಂಬೇಡ್ಕರ್ ಅವರ ಜೀವನ ಮತ್ತು ದರ್ಶನಗಳನ್ನು ಸಾರಾಂಶ ರೂಪದಲ್ಲಿ ಹೇಳುವುದಾದರೆ, ಆಧುನಿಕ ತಾರ್ಕಿಕತೆಯನ್ನು, ಬಂಡವಾಳಶಾಹಿತ್ವದ ಬಡಿವಾರವನ್ನು, ಭಾರತೀಯ ಸಮಾಜದ ವಿಕಾರಗಳನ್ನು ನೈತಿಕತೆಯ ಮತ್ತು ಆಧ್ಯಾತ್ಮಿಕತೆಯ ನಿಯಂತ್ರಣಕ್ಕೆ ಒಳಪಡಿಸುವುದು. ಇದನ್ನು ಯಥಾವತ್ತಾಗಿ ಸೂಚಿಸುವಂತೆ ಈ ದೃಶ್ಯರೂಪಕ ಬುದ್ಧನ ಆಶಯಗಳನ್ನು ಸೂಚಿಸುತ್ತಾ ಕೊನೆಗೊಳ್ಳುತ್ತದೆ.

೨೦೧೭, ಫೆಬ್ರವರಿ ೧ರಿಂದ ರಾಜ್ಯದಾದ್ಯಂತ ೩೦ ಜಿಲ್ಲೆಗಳಲ್ಲಿ ಪ್ರದರ್ಶಿಸಲ್ಪಟ್ಟ ಈ ರೂಪಕದ ಗ್ರ್ಯಾಂಡ್ ಫಿನಾಲೆ, ಈ ತಿಂಗಳು ಬೆಂಗಳೂರಿನ ಬಸವೇಶ್ವರನಗರದ ಅಂಬೇಡ್ಕರ್ ಕ್ರೀಡಾಂಗಣದಲ್ಲಿತ್ತು; ಈ 'ಗ್ರ್ಯಾಂಡ್ ಫಿನಾಲೆ', ಒಂದು 'ಗ್ರ್ಯಾಂಡ್ ಬಿಗಿನ್ನಿಂಗ್'ಗೆ ನಾಂದಿ ಹಾಡಿತು ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಸರ್ಕಾರದ ಎಷ್ಟೋ ಪ್ರೊಜೆಕ್ಟ್‌ಗಳು ಹೇಳಹೆಸರಿಲ್ಲದೆ ಹೋಗುವ ಕಾಲದಲ್ಲಿ, ಇಷ್ಟು ಸಾರ್ಥಕವಾದ, ಯಶಸ್ವಿಯಾದ, ಪರಿಣಾಮಕಾರಿಯಾದ ಪ್ರದರ್ಶನವನ್ನು ಪರಿಕಲ್ಪಿಸಿದ ಸರ್ಕಾರ, ನಿರ್ದೇಶಕರು ಮತ್ತು ಅವರ ತಂಡಕ್ಕೆ ಹ್ಯಾಟ್ಸ್ ಆಫ್.

**ಬಿ. ಯು. ಸುಮಾ**
ಸಹಾಯಕ ಪ್ರಾಧ್ಯಾಪಕಿ, ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ
ಬೆಂಗಳೂರು – ೫೬೦ ೦೪೦,







**ಸೂ**ಕ್ಷ್ಮಾತಿ ಸೂಕ್ಷ್ಮ ಅಣುವಿನಂತಹ
ಈ ಗೆರೆ
ಅವಚಿಕೊಂಡು ಇರುವಂತೆ
ಅಸಹಜ ಗೆರೆ;
ಬಗೆ ಬಗೆಯ ಮನುಷ್ಯ ಲೋಕದ
ಒಳ ಗೆರೆ
ಅದಲು ಬದಲುಗೊಳ್ಳುತ್ತಲೇ
ಅತೀ ಜಾಣ್ಮೆಯ ಸಮಾನಾಂತರ
ಗಹನ ಮನಃಸ್ಥಿತಿಯ
ಮಜಲುಗಳಲ್ಲಿ ಬಿಗಿದುಹಾಕುವ
ದ್ವಂದ್ವಗಳೊಳಗೆ ಕೊಯ್ಯುತ್ತಲೆ...
ಅಚಾನಕ್ಕಾಗೆ ಸೂಕ್ಷ್ಮವಾಗಿ
ವೃತ್ತ ನಿರ್ಮಿಸಿಬಿಟ್ಟಿತ್ತು
ತಿವಿಯುತ್ತಾ ತುಳಿಯುತ್ತಲೆ
ಅಸ್ತವ್ಯಸ್ತಗೊಳಿಸಿದಂಥ
ಆ – ಗೆರೆ

**ರಜಿಯಾ ಡಿ. ಬಿ.**
ನಂ. ಎಫ್–೭೮, ಎಸ್. ಬಿ. ಎಂ. ವೃತ್ತ , ಗೋಪಾಲಗೌಡ ಬಡಾವಣೆ
ಶಿವಮೊಗ್ಗ – ೫೭೭ ೦೦೫




# ಮುಂಜಾವಿನಲ್ಲಿ ಶುಕ್ರ

**ಕ**ಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ರಾರಾಜಿಸುತ್ತಿದ್ದ ಶುಕ್ರಗ್ರಹ ಈ ತಿಂಗಳಲ್ಲಿ ಮುಂಜಾವಿನಲ್ಲಿ ಕಾಣಲಿದೆ. ೨ನೇ ತಾರೀಖಿನಂದೇ ಇದು ಮುಂಜಾನೆ ೫:೩೦ಕ್ಕೆ ಪೂರ್ವ ದಿಗಂತದ ಅಂಚಿನಲ್ಲಿ ಕಾಣುವುದು. ದಿನೇ ದಿನೇ ಮೇಲೆ ಏರಿ ಸ್ಪಷ್ಟವಾಗಿ ಕಾಣತೊಡಗುವುದು. ಅದರ ಎತ್ತರವನ್ನು (ದಿಗಂತದಿಂದ ಅದರ ಕೋನ – ಇದಕ್ಕೆ ಉನ್ನತಾಂಶ ಎಂದು ಹೆಸರು) ಗಮನಿಸುತ್ತಾ ಬಂದಲ್ಲಿ ಅದರ ಚಲನೆ ಸ್ಪಷ್ಟವಾಗಿ ತಿಳಿಯುವುದು. ೨೩ರಂದು ಚಂದ್ರನ ಪಕ್ಕದಲ್ಲೇ ಕಾಣುವ ಸಂದರ್ಭ ಛಾಯಾಗ್ರಾಹಕರಿಗೆ ಸದವಕಾಶ.

ಸಂಜೆಯ ಆಕಾಶದಲ್ಲಿ ಪಶ್ಚಿಮ ದಿಗಂತದಲ್ಲಿ ಮಂಗಳ ಗ್ರಹ ಕಾಣುವುದು. ೧ನೇ ತಾರೀಖು ಪಶ್ಚಿಮ ದಿಕ್ಕಿಗೆ ದೃಷ್ಟಿ ಹರಿಸಿದರೆ ಚಂದ್ರ, ಮಂಗಳ ಮತ್ತು ಬುಧ ಗ್ರಹಗಳು ಒಂದರ ಕೆಳಗೊಂದು ಜೋಡಿಸಿದಂತೆ ಕಾಣುತ್ತವೆ. ಚಂದ್ರನಿಗೆ ಅಂಟಿಕೊಂಡಂತೆ ಕಾಣುವ ನಕ್ಷತ್ರವೇ ರೋಹಿಣಿ. ಮಂಗಳದ ಸಮೀಪ ಕಾಣುವುದು ನಕ್ಷತ್ರ ಗುಚ್ಛವೇ ಕೃತ್ತಿಕಾ. ದಿನೇ ದಿನೇ ಮಂಗಳ ಸ್ಥಾನ ಬದಲಿಸುವುದನ್ನು ತಿಳಿಯಲು ಕೃತ್ತಿಕಾ ಮತ್ತು ಮಂಗಳದ ನಡುವಿನ ಅಂತರವನ್ನು ಗಮನಿಸಿ ಬರೆದಿಟ್ಟುಕೊಳ್ಳಬಹುದು. ಮೂರನೇ ವಾರದಲ್ಲಿ ಅಂತರ ಕನಿಷ್ಠವಾಗಿ ಪುನಃ ಅವು ದೂರ ಸರಿಯುವುದನ್ನು ಕಾಣ ಬಹುದು. ೨೮ರ ಸಂಜೆ ಮಂಗಳ ಗ್ರಹದ ಪಕ್ಕದಲ್ಲಿಯೇ ಚಂದ್ರ ಕಾಣುವುದು. ಹೀಗೆ ಮಂಗಳದ ಸಹಾಯದಿಂದ ರೋಹಿಣಿ ಮತ್ತು ಕೃತ್ತಿಕಾ ನಕ್ಷತ್ರಗಳನ್ನು ಗುರುತಿಸಲು ಸಾಧ್ಯವಾಯಿತಲ್ಲವೇ? ಇದು ವೃಷಭ ರಾಶಿ. ನೆತ್ತಿಯ ಮೇಲಿರುವುದು ಮಿಥುನ; ಇವೆರಡರ ನಡುವೆ ಸ್ವಲ್ಪ ದಕ್ಷಿಣಕ್ಕಿರುವುದು ಮಹಾವ್ಯಾಧ. ಅದರ ದಕ್ಷಿಣಕ್ಕೆ ಅತಿ ಪ್ರಕಾಶಮಾನ ನಕ್ಷತ್ರ ಲುಬ್ಧಕ (ಸಿರಿಯಸ್) ಮತ್ತು ಪ್ರಕಾಶದಲ್ಲಿ ಎರಡನೇ ಸ್ಥಾನ ಪಡೆಯುವ ಅಗಸ್ತ್ಯ (ಕೆನೋಪಸ್). ಇತರ ಪುಂಜಗಳನ್ನು ನಕ್ಷೆಯ ಸಹಾಯದಿಂದ ಗುರುತಿಸ ಬಹುದು. ನಕ್ಷೆ ಸಂಜೆ ಏಳಕ್ಕೆ ಅನ್ವಯವಾಗುತ್ತದೆ.

ಇನ್ನೊಂದು ಪ್ರಕಾಶಮಾನ ಗ್ರಹ ಗುರು ಚಿತ್ರಾ ನಕ್ಷತ್ರದ ಸಮೀಪವಿದೆ. ಮೊದಲ ವಾರದಲ್ಲಿ ಸುಮಾರು ಏಳೂವರೆಯ ಹೊತ್ತಿಗೆ ಉದಯಿಸುವ ಇವೆರಡೂ ಚುಕ್ಕೆಗಳು ಹುಣ್ಣಿಮೆ ಯಂದು ಚಂದ್ರನೊಡನೆ ಉದಯಿಸುತ್ತವೆ. ಕ್ರಮೇಣ ಇನ್ನೂ ಬೇಗ ಬೇಗ ಉದಯಿಸಿ ತಿಂಗಳ ಕೊನೆಗೆ ಕತ್ತಲಾಗುವಾಗಲೇ ಪೂರ್ವದ ಅಂಚಿನಲ್ಲಿ ಕಾಣುತ್ತವೆ. ಚಿತ್ರಾ ಸಮೀಪ ಹುಣ್ಣಿಮೆ ಚಂದ್ರ ಕಾಣುವುದರಿಂದ ಈ ತಿಂಗಳಿಗೆ ಚೈತ್ರ ಎಂದು ಹೆಸರು.


೧ರ ಸಂಜೆ ಚಂದ್ರ, ರೋಹಿಣಿ, ಬುಧ ಮತ್ತು ಮಂಗಳ

ಶನಿಗ್ರಹ ಸುಮಾರು ಅರ್ಧರಾತ್ರಿಗೆ ಉದಯಿಸುವುದರಿಂದ ಬೆಳಗಿನ ಜಾವ ನೆತ್ತಿಯ ಮೇಲೆ ಕಾಣುತ್ತದೆ. ಧನುರಾಶಿಯಲ್ಲಿರುವ ಇದರ ಆಸುಪಾಸಿನಲ್ಲಿ ಅಸಂಖ್ಯಾತ ನೆಬ್ಯುಲಾಗಳು, ನಕ್ಷತ್ರ ಗುಚ್ಛಗಳೂ ಇವೆ. ೧೭ರ ಮುಂಜಾವಿನಲ್ಲಿ ಚಂದ್ರನ ಪಕ್ಕದಲ್ಲೇ ಕಾಣುವುದು. ಏಪ್ರಿಲ್ ೧ರಂದು ಸಂಜೆ ಸ್ಫುಟವಾಗಿ ಪಶ್ಚಿಮ ದಲ್ಲಿ ಕಾಣುವ ಬುಧ ಬಹಳ ಬೇಗ (ಒಂದೇ ವಾರದಲ್ಲಿ) ಕೆಳಗಿಳಿದುಬಿಡುತ್ತದೆ. ೨೦ರಂದು ಸೂರ್ಯನನ್ನು ಹಾದು (ಇದಕ್ಕೆ ನೀಚಯುತಿ ಎಂದು ಹೆಸರು) ೨೫ರಂದು ಮುಂಜಾವು ಚಂದ್ರನ ಜೊತೆಗೂಡುತ್ತದೆ. ಆದರೆ, ಇದು ಅಮಾವಾಸ್ಯೆಯ ಹಿಂದಿನ ದಿನವಾದದ್ದರಿಂದ ವೀಕ್ಷಣೆ ಕಷ್ಟವಿದೆ.

ಈ ತಿಂಗಳಲ್ಲಿ ಥ್ಯಾಚರ್ ಧೂಮಕೇತುವಿನ ಧೂಳಿನ ಕಣಗಳು ಉಂಟುಮಾಡುವ ಲಿರಿಡ್ಸ್ ಉಲ್ಕಾವೃಷ್ಟಿ ಇದೆ. ೨೨ರ ಮುಂಜಾವು ಗರಿಷ್ಠ ಚಟುವಟಿಕೆ ಅಂದರೆ ಗಂಟೆಗೆ ೧೦–೨೦ ಉಲ್ಕೆಗಳು ಬೀಳುವುವು. ಲೈರಾ ಪುಂಜದ ವೇಗಾ (ಅಭಿಜಿತ್) ನಕ್ಷತ್ರದಿಂದ ಹೊರಟಂತೆ ಕಾಣುತ್ತದೆ. ಆದ್ದರಿಂದ ಲಿರಿಡ್ಸ್ ಎಂಬ ಹೆಸರಿದೆ.

ಉ
ಧ್ರುವ
ಸಪ್ತರ್ಷಿ ಮಂಡಲ
ಪಾರ್ಥ
ವಿಜಯಸಾರಥಿ
ಕೃಷ್ಣವೇಣಿ
ಸಿಂಹ
ವೃಷಭ
ಮಂಗಳ
ಮಿಥುನ
ಪೂ
ಪ
ಮಹಾವ್ಯಾಧ
ಚಿತ್ರಾ
ಹಸ್ತ
ಲುಬ್ಧಕ
ಮಹಾಶ್ವಾನ
ಅಜಗರ
ವೈತರಣೀ
ನೌಕಾಪಟ
ಅಗಸ್ತ್ಯ
ದ

**ಏಪ್ರಿಲ್ ತಿಂಗಳ ಖಗೋಳ ದಿನಚರಿ**

೧ ಬುಧ ಗ್ರಹದ ಗರಿಷ್ಠ ಕೋನೋನ್ನತಿ (ಸಂಜೆ) ರೋಹಿಣಿ – ಚಂದ್ರ ಜೋಡಿ (ಸಂಜೆ)*
೩ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೭ ಗುರು ಗ್ರಹದ ಯುತಿ (ಸೂರ್ಯಾಸ್ತದಲ್ಲಿ ಗುರೋದಯ)
೧೦ ಗುರು – ಚಂದ್ರ ಜೋಡಿ (ಸಂಜೆ)*
೧೧ ಹುಣ್ಣಿಮೆ ೧೧:೩೦ಕ್ಕೆ
೧೨ ಶುಕ್ರ ಗ್ರಹದ ಹಿನ್ನಡೆ ಮುಕ್ತಾಯ
೧೫ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೧೭ ಶನಿ – ಚಂದ್ರ ಜೋಡಿ (ಮುಂಜಾವು)*
೧೯ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೦ ಬುಧಗ್ರಹದ ನೀಚಯುತಿ
೨೩ ಶುಕ್ರ – ಚಂದ್ರ ಜೋಡಿ (ಮುಂಜಾವು)*
೨೫ ಬುಧ – ಚಂದ್ರ ಜೋಡಿ (ಮುಂಜಾವು)*
೨೬ ಅಮಾವಾಸ್ಯೆ ೧೭:೪೬ಕ್ಕೆ
೨೭ ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೨೮ ಮಂಗಳ – ಚಂದ್ರ ಜೋಡಿ (ಸಂಜೆ)*
೩೦ ಶುಕ್ರ ಗ್ರಹದ ಗರಿಷ್ಠ ಪ್ರಕಾಶ (ಮುಂಜಾವು)*

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಮಲದ ಗುಂಡಿಯಲ್ಲಿ ಉಸಿರು ಸಿಕ್ಕಿಸಿಕೊಂಡು...




'ಜಟ್ಟ', 'ನವಿಲಾದವರು' ಹಾಗೂ 'ಮೈತ್ರಿ' ಸಿನೆಮಾಗಳ ಮೂಲಕ ಮನೆಮಾತಾಗಿ ಹೋದ ಬಿ. ಎಂ. ಗಿರಿರಾಜ್ ಈಗ 'ಅಮರಾವತಿ' ಸಿನೆಮಾದೊಂದಿಗೆ ನಮ್ಮ ಮುಂದೆ ಬಂದಿದ್ದಾರೆ.

ಇಂದ್ರನ ಅಮರಾವತಿ ಐಭೋಗದ ತಾಣ. ಹಾಗೆಂದೇ ನೀವು ಸಿನೆಮಾ ನೋಡಲು ಹೋದರೆ ನಿಮಗೆ ಸಿಕ್ಕುವುದು ಅದರ ವಿರುದ್ಧ ದಿಕ್ಕಿನಲ್ಲಿರುವ ಒಂದು ಚಿತ್ರ. ಅಮರಾವತಿಯ ನೆಲದಾಳದಲ್ಲಿ ಮಲದ ಗುಂಡಿಗಳು ಇವೆ. ಅದರಲ್ಲಿ ಉಸಿರು ಸಿಕ್ಕಿಸಿಕೊಂಡ ನೋವು ಇದೆ. ಚರಿತ್ರೆ ಇದೆ.

ಇಂತಹ ಸಿನೆಮಾ ನೂರು ದಿನವಿರಲಿ, ಮೂರು ವಾರ ಬಾಳುವುದೂ ಕಷ್ಟ . ಏಕೆಂದರೆ ಪ್ರಭುತ್ವ ಅದನ್ನು ಬಾಳಿಸುವುದಿಲ್ಲ. ಈ ಸಿನೆಮಾ ಎದುರು ನಿಂತವರ ಕೊರಳ ಪಟ್ಟಿ ಹಿಡಿದು ಪ್ರಶ್ನೆಗಳನ್ನು ಕೇಳುತ್ತದೆ. 'ನೀವೇ ಏಕೆ ಈ ಮಲದ ಗುಂಡಿಗೆ ಇಳಿದು ಆ ಕೆಲಸಗಾರರು ಏನು ಅನುಭವಿಸುತ್ತಿದ್ದಾರೆ ಎಂಬುದನ್ನು ಅನುಭವಿಸಿ ನೋಡಬಾರದು' ಎಂದು ಅಧಿಕಾರಿಗಳಿಗೆ ಕೇಳಿದ್ದು ಕರ್ನಾಟಕ ಹೈಕೋರ್ಟ್. 'ಕೆಂಡದ ಮೇಲೆ ನಡೆದವರಿಗೆ ಮಾತ್ರವೇ ಕೆಂಡದ ಬಿಸಿ ಗೊತ್ತಾಗಲು ಸಾಧ್ಯ' ಎನ್ನುತ್ತಾರೆ ಕವಿ ಸು. ರಂ. ಎಕ್ಕುಂಡಿ.

ಹಾಗೆ ಮಲದ ಗುಂಡಿಯೊಳಗೆ ಇಳಿಸಿ ಅವರ ನೋವುಗಳನ್ನು ನಮ್ಮ ಮನದೊಳಗೆ ಇರಿಸಿದ ಬಿ. ಎಂ. ಗಿರಿರಾಜ್‌ಗೆ ಅಭಿನಂದನೆಗಳು. 'ಈ ಸಿನೆಮಾ ಚೆನ್ನಾಗಿದೆ' ಎಂದು ಹೇಳುವುದು ಹೇಗೆ ? ಈ ಸಿನೆಮಾ ನಮ್ಮ ಮನಸ್ಸೆಂಬ ಮಲದ ಗುಂಡಿಗೆ ಹಿಡಿದ ಕನ್ನಡಿ ಎಂದಷ್ಟೇ ಹೇಳಬಹುದೇನೋ...?

ಈ ಸಿನೆಮಾದ ನೆಪದಲ್ಲಿ ಈ ಹಿಂದೆ ಮಲದ ಗುಂಡಿಯಲ್ಲಿ ಇಳಿದು ಉಸಿರು ಸಿಕ್ಕಿಸಿಕೊಂಡವರ ಕಥೆಗಳನ್ನು ಬಿಚ್ಚಿಟ್ಟಿದ್ದೇನೆ.

✶ ✶ ✶

'ಮುಖ್ಯಮಂತ್ರಿಗಳ ತವರು ಜಿಲ್ಲೆಯಲ್ಲಿಯೇ ಒಂದು ಸಾವು ಸಂಭವಿಸಿದೆ ನೋಡಿ' ಎನ್ನುವ ಎಸ್.ಎಂ.ಎಸ್.ಅನ್ನು ಗೆಳೆಯ ಹರ್ಷಕುಮಾರ ಕುಗ್ವೆ ರವಾನಿಸಿದಾಗ ನನಗೆ ಇನ್ನಿಲ್ಲದ ಷಾಕ್ ಆಯಿತು.

ಆತ ಮಾತನಾಡುತ್ತಿದ್ದುದು ಆಗ ಮುಖ್ಯಮಂತ್ರಿಯಾಗಿದ್ದ ಸದಾನಂದ ಗೌಡರ ಜಿಲ್ಲೆಯ ಬಗ್ಗೆ.

ದಕ್ಷಿಣ ಕನ್ನಡದಲ್ಲಿ ಸಂಭವಿಸಿದ ಈ ಒಂದು ಸಾವು ಖಂಡಿತಾ ನನ್ನನ್ನು ಕಾಡಿತ್ತು. ಯಾಕೆಂದರೆ ಅದು ಅಂತಿಂತಹ ಸಾವಲ್ಲ. ಮಲದ ಗುಂಡಿಯೊಳಗೆ ಸಿಲುಕಿ ಆದ ಸಾವು. ಅದೂ ಇಡೀ ದೇಶದಲ್ಲಿ ಯಾವ ಜಿಲ್ಲೆ ಮಲ ಹೊರುವ ಪದ್ಧತಿಯ ವಿರುದ್ಧ ದೃಢಮನಸ್ಸಿನಿಂದ ಹೋರಾಟ ನಡೆಸಿತ್ತೋ, ಮಲ ಹೊರುವ ಪದ್ಧತಿಯನ್ನು

**ಕಿನ್ನರಿ ಬೊಮ್ಮಯ್ಯ**

ಸವಣೂರಿನಲ್ಲಿ ಪೌರ ಕಾರ್ಮಿಕರು ತಲೆಯ ಮೇಲೆ ಮಲ ಸುರಿದುಕೊಂಡು ತಮ್ಮ ಹೀನಾಯ ಪರಿಸ್ಥಿತಿಯ ಬಗ್ಗೆ ಪ್ರತಿಭಟಿಸಿದಾಗ ಸಮಾಜ ಬೆಚ್ಚಿ ಬಿತ್ತು. ಮಲ ಎನ್ನುವ ಪದವೇ ಇಷ್ಟೊಂದು ಕಸಿವಿಸಿ ಉಂಟುಮಾಡುವಾಗ ಅದನ್ನು ತಲೆಯ ಮೇಲೆ ಸುರಿದುಕೊಂಡದ್ದು ಇಂತಹ ಪದ್ಧತಿಯೊಂದು ಇದೆ ಎಂಬುದನ್ನು ಗೊತ್ತುಮಾಡಿಕೊಟ್ಟಿತು. ಈ ಪದ್ಧತಿ ಸವಣೂರು ಪ್ರಕರಣಕ್ಕೂ ಮುಂಚೆ ಇತ್ತು ಹಾಗೂ ಆನಂತರವೂ ಜೀವಂತವಾಗಿದೆ.

೨೦೧೧ರ ಗಣತಿ ಇಡೀ ದೇಶದಲ್ಲಿ ೭ ಲಕ್ಷ ಮಲ ಹೊರುವವರು ಇದ್ದಾರೆ ಎಂಬುದನ್ನು ಪ್ರಕಟಿಸಿತು.





ಇಲ್ಲವಾಗಿಸಿತ್ತೋ ಆ ಜಿಲ್ಲೆಯಲ್ಲಿ ಈ ಸಾವು ಸಂಭವಿಸಿತ್ತು.

ನಟ ಅಮೀರ್ ಖಾನ್ ಪ್ರಧಾನಿಯ ಎದುರು ಕೂತು ಈ ಮಲ ಹೊರುವ ಪದ್ಧತಿಯನ್ನು ನಿಷೇಧಿಸಿ ಎಂದು ಕಳಕಳಿಯಿಂದ ಮನವಿ ಮಾಡುತ್ತಿದ್ದಾಗ ನನ್ನ ಕಣ್ಣಮುಂದೆ ಸುಳಿದ ಚಿತ್ರ ಇದು. ಅಮೀರ್ ಖಾನ್ 'ಸತ್ಯಮೇವ ಜಯತೆ'ಯಲ್ಲಿ ಮನುಷ್ಯ ಕುಲವೇ ನಾಚಿಕೆಯಿಂದ ತಲೆತಗ್ಗಿಸಬೇಕಾದ ಈ ಪದ್ಧತಿಯ ವಿರುದ್ಧ ಮಾತನಾಡಿದ್ದಾರೆ. ದೇಶದ ಗಮನ ಸೆಳೆದಿದ್ದಾರೆ. ಇದರ ಮುಂದುವರಿಕೆಯಾಗಿ ಪ್ರಧಾನಿಗಳ ಮೇಲೆ ಒತ್ತಡ ಹೇರಲು ಮುಂದಾಗಿದ್ದಾರೆ.

ಆದರೆ ಅವರೊಬ್ಬರಿದ್ದರು – ಬಿ. ಬಸವಲಿಂಗಪ್ಪ .

ಇಂತಹ ಒಂದು ಹೀನ ಪದ್ಧತಿಯೊಂದು ಇದೆ ಎಂದು ಗುರುತಿಸಲು ದೇಶ ನಿರಾಕರಿಸುತ್ತಿದ್ದ ಸಮಯದಲ್ಲಿಯೇ ಮಲ ಹೊರುವ ಪದ್ಧತಿಯ ವಿರುದ್ಧ ದನಿ ಎತ್ತಿದವರು. ಇಡೀ ರಾಜ್ಯದಲ್ಲಿ ಬರಿಗೈಯಲ್ಲಿ ಮಲವನ್ನು ಬಾಚಿ, ತಲೆಯ ಮೇಲೆ ಅದನ್ನು ಹೊತ್ತು ಸಾಗಿಸುವ ವ್ಯವಸ್ಥೆಯಿದೆಯಲ್ಲಾ ಎಂದು ನಾಚಿದವರು.

ಈ ಪದ್ಧತಿಯೇ ಇಲ್ಲ ಎಂದು ಸಾಧಿಸುತ್ತಿರುವಾಗ 'ಖಂಡಿತಾ ಇದೆ. ನಾವು ಮಲ ಹೊರುತ್ತಿದ್ದೇವೆ' ಎಂದು ಬೆಳಗಾವಿ ನ್ಯಾಯಾಲಯದಲ್ಲಿ ಪ್ರಮಾಣ ಪತ್ರ ಸಲ್ಲಿಸುವಂತೆ ಮಾಡಿದವರು. ಅಷ್ಟೇ ಅಲ್ಲ, ಅದನ್ನು ಆಧಾರವಾಗಿಟ್ಟುಕೊಂಡು ಇಡೀ ರಾಜ್ಯದಿಂದಲೇ ಮಲ ಹೊರುವ ಪದ್ಧತಿಯನ್ನು ಇಲ್ಲವಾಗಿಸುವ ನಿಟ್ಟಿನಲ್ಲಿ ಮೊದಲ ಕಾಯಿದೆ ರಚಿಸಿದವರು.

೧೯೯೩ರಲ್ಲಿ ಸಾರ್ವಜನಿಕ ಹಿತಾಸಕ್ತಿ ರಿಟ್ ಮುಂದಿಟ್ಟುಕೊಂಡು ಸುಪ್ರೀಂ ಕೋರ್ಟ್ ಕೇಂದ್ರ ಸರ್ಕಾರದ ಕಿವಿ ಹಿಂಡಿದಾಗ ದೇಶದಲ್ಲಿ ಮಲ ಹೊರುವ ಪದ್ಧತಿಯನ್ನು ಇಲ್ಲವಾಗಿಸುತ್ತೇನೆ ಎನ್ನುವ ವಾಗ್ದಾನವನ್ನು ನೀಡಿತು. ಅದಕ್ಕೂ ೨೦ ವರ್ಷಗಳ ಮುಂಚೆಯೇ ಈ ಪದ್ಧತಿ ನಿಗ್ರಹಿಸುವ ನಿಟ್ಟಿನಲ್ಲಿ ಕಾಯಿದೆ ರಚನೆಗೆ ಮುಂದಾಗಿದ್ದು ಆಗ ಪೌರಾಡಳಿತ ಸಚಿವರಾಗಿದ್ದ ಬಿ. ಬಸವಲಿಂಗಪ್ಪ .

ಅಮೀರ್ ಖಾನ್ ದೇಶದ ಮುಂದೆ ಈ ಅನಿಷ್ಟ ಪದ್ಧತಿಯನ್ನು ಬಿಚ್ಚಿಡುತ್ತಿರುವಾಗಲೇ ಕರ್ನಾಟಕದಲ್ಲಿ ಸಾವಿರಾರು ಜನ ಇನ್ನೂ ತಲೆ ಮೇಲೆ ಮಲ ಹೊರುತ್ತಿದ್ದಾರೆ. ಬರಿಗೈಯಲ್ಲಿ ಮಲ ಬಾಚುತ್ತಿದ್ದಾರೆ. ಮೂಗಿಗೆ ಮಾತ್ರ ಬಟ್ಟೆ ಕಟ್ಟಿಕೊಂಡು ಮಲದ ಗುಂಡಿಯೊಳಗೆ ಇಳಿಯುತ್ತಿದ್ದಾರೆ. 'ಉತ್ತರ ಕರ್ನಾಟಕದ ಎಲ್ಲೆಡೆ ಇದು ರಾಜಾರೋಷವಾಗಿ ನಡೆಯುತ್ತಿದೆ. ದಕ್ಷಿಣ ಕರ್ನಾಟಕದಲ್ಲಿ ಕದ್ದೂಮುಚ್ಚಿ ನಡೆಯುತ್ತಿದೆ. ಸಿಲಿಕಾನ್ ಸಿಟಿಯಲ್ಲಿ ವಿಧಾನಸೌಧಕ್ಕೆ ತೀರಾ ಹತ್ತಿರದಲ್ಲಿರುವ ಸಂಪಂಗಿರಾಮನಗರದಲ್ಲೂ ಇದು ನಡೆಯುತ್ತಿದೆ' ಎಂದು ರಾಜ್ಯದ ಸ್ಥಿತಿಯನ್ನು ಬಿಚ್ಚಿಟ್ಟವರು ಈ ಬಗ್ಗೆ ಆಳ ಅಧ್ಯಯನ ಮಾಡಿರುವ ಟಿ. ಕೆ. ದಯಾನಂದ್.

ಸವಣೂರಿನಲ್ಲಿ ಪೌರ ಕಾರ್ಮಿಕರು ತಲೆಯ ಮೇಲೆ ಮಲ ಸುರಿದುಕೊಂಡು ತಮ್ಮ ಹೀನಾಯ ಪರಿಸ್ಥಿತಿಯ ಬಗ್ಗೆ ಪ್ರತಿಭಟಿಸಿದಾಗ ಸಮಾಜ ಬೆಚ್ಚಿಬಿತ್ತು. ಮಲ ಎನ್ನುವ ಪದವೇ ಇಷ್ಟೊಂದು ಕಸಿವಿಸಿ ಉಂಟುಮಾಡುವಾಗ ಅದನ್ನು ತಲೆಯ ಮೇಲೆ ಸುರಿದುಕೊಂಡದ್ದು ಇಂತಹ ಪದ್ಧತಿಯೊಂದು ಇದೆ ಎಂಬುದನ್ನು ಗೊತ್ತುಮಾಡಿಕೊಟ್ಟಿತು. ಈ ಪದ್ಧತಿ ಸವಣೂರು ಪ್ರಕರಣಕ್ಕೂ ಮುಂಚೆ ಇತ್ತು ಹಾಗೂ ಆನಂತರವೂ ಜೀವಂತವಾಗಿದೆ.

**ಪ್ರಸಕ್ತ**

ನಗದಾಲಯದಿಂದ
ಪಡೆಯಲು ಹೇರಿದ್ದರೂ
ನಿಯಂತ್ರಣ,
ಎಲ್ಲಿಯೂ ನಿಲ್ಲದ
ಭ್ರಷ್ಟಾಚಾರದ
ಕುದುರೆಗೊಂದು
ಬಿಗಿಯಾದ ಕಡಿವಾಣ
ಬೀಳದಿರುವುದೊಂದು ಮಹಾದುರಂತ

**ಮೈಸೂರು ಎನ್. ಶ್ರೀನಿವಾಸ್**

೨೦೧೧ರ ಗಣತಿ ಇಡೀ ದೇಶದಲ್ಲಿ ೭ ಲಕ್ಷ ಮಲ ಹೊರುವವರು ಇದ್ದಾರೆ ಎಂಬುದನ್ನು ಪ್ರಕಟಿಸಿತು.

ದೇಶದಲ್ಲಿ ನೀರು ಬಳಸದ ಒಣ ಶೌಚಾಲಯಗಳೇ ೭.೯೪ ಲಕ್ಷ ಇದೆ ಎನ್ನುವ ಅಂಶವನ್ನು ಈ ಗಣತಿ ಬಯಲಿಗಿಟ್ಟಿದೆ. ಈ ಗಣತಿಯ ಪ್ರಕಾರ ಕರ್ನಾಟಕದಲ್ಲಿ ಇರುವ ಒಣ ಶೌಚಾಲಯಗಳ ಸಂಖ್ಯೆಯೇ ೭೭೪೦. ಅನಧಿಕೃತವಾಗಿ ಇರುವ ಶೌಚಾಲಯಗಳ ಅಂಕಿಯನ್ನು ಪಕ್ಕಕ್ಕಿಟ್ಟರೂ ಸರ್ಕಾರವೇ ಇಷ್ಟು ಶೌಚಾಲಯಗಳಲ್ಲಿ ಕೈನಲ್ಲಿ ಬಾಚಿ ತಲೆಯ ಮೇಲೆ ಮಲ ಹೊರುವ ಸ್ಥಿತಿ ಇದೆ ಎನ್ನುವುದನ್ನು ಒಪ್ಪಿದಂತಾಯಿತು. ಇದರ ಅರ್ಥ ಸರ್ಕಾರವೇ ತಾನು ೧೯೯೩ರಲ್ಲಿ ಇಂತಹ ಒಣ ಶೌಚಾಲಯವನ್ನು ನಿರ್ಮಿಸುವುದರ ವಿರುದ್ಧ, ತಲೆಯ ಮೇಲೆ ಮಲ ಹೊರುವುದರ ವಿರುದ್ಧ ರೂಪಿಸಿದ ಕಾಯಿದೆಯನ್ನು ಉಲ್ಲಂಘಿಸಿದೆ ಎಂದು. ಈ ಕಾಯಿದೆಯನ್ನು ಉಲ್ಲಂಘಿಸಿದರೆ ಒಂದು ವರ್ಷ ಜೈಲು, ೨ ಸಾವಿರ ರೂ. ದಂಡ.

ಆದರೆ ಇಡೀ ದೇಶದಲ್ಲಿ ಕಳೆದ ಮೂರು ವರ್ಷಗಳ ಹಿಂದಿನವರೆಗೂ ಈ ಕಾಯಿದೆಯಡಿ ಒಂದೇ ಒಂದು ಮೊಕದ್ದಮೆ ದಾಖಲಾಗಿಲ್ಲ. ಯಾರೊಬ್ಬರೂ ಜೈಲಿಗೆ ಹೋಗಿಲ್ಲ. ಆದರೆ ಈಗಲೂ ಇಡೀ ದೇಶದಲ್ಲಿ ಈ ಕಾಯಿದೆಯಡಿ ಬಂಧನ ಆಗಿರುವುದು ಕರ್ನಾಟಕದಲ್ಲಿ ಮಾತ್ರವೇ.

ಸವಣೂರು ಪ್ರಕರಣದ ನಂತರ ಕರ್ನಾಟಕದಲ್ಲಿ ಈ ಮಲ ಹೊರುವ ಪದ್ಧತಿಯ ವಿರುದ್ಧ ಒಂದು ಜಾಗೃತಿ ಮೂಡಿದೆ. ಪಿ.ಯು.ಸಿ.ಎಲ್. ರಾಜ್ಯದಲ್ಲಿರುವ ಈ ಪದ್ಧತಿಯ ವಿರುದ್ಧ ನ್ಯಾಯಾಲಯದ ಮೆಟ್ಟಿಲು ಹತ್ತಿದೆ. ರಾಜ್ಯದ ವಿವಿಧ ಭಾಗಗಳಲ್ಲಿ ಈ ಪದ್ಧತಿ ಜಾರಿಯಲ್ಲಿರುವುದನ್ನು ದಾಖಲೆಗಳ ಸಮೇತ ಮುಂದಿಟ್ಟಿದೆ. ಸಾವುಗಳು ಸಂಭವಿಸಿರುವುದನ್ನು ಬೆಳಕಿಗೆ ತಂದಿದೆ.

ಸವಣೂರು ಪ್ರಕರಣ ಹೊರಬಂದಾಗ ಅದರ ಸುತ್ತಮುತ್ತಲಿನ ಗ್ರಾಮಗಳನ್ನು ಅಧ್ಯಯನ ಮಾಡಲು ಹೊರಟ ತಂಡ ಕಂಡುಕೊಂಡ ಅಂಶಗಳು ಪರಿಸ್ಥಿತಿಯ ಭೀಕರತೆಯನ್ನು ಮನವರಿಕೆ ಮಾಡಿಕೊಟ್ಟವು. ಇದು ಇಡೀ ರಾಜ್ಯಕ್ಕೆ ಅಧ್ಯಯನವನ್ನು ವಿಸ್ತರಿಸಲು ಕಾರಣವಾಯಿತು. ರಾಜ್ಯದಲ್ಲಿ ಜರುಗಿದ ೧೧ ಸಾವಿನ ಪ್ರಕರಣಗಳಲ್ಲೂ ಮೊಕದ್ದಮೆ ದಾಖಲಾಗಿದೆ. ಬಂಧನವೂ ಆಗಿದೆ. ಈ ಪದ್ಧತಿಯ ವಿಡಿಯೋಗಳನ್ನು ದಾಖಲಿಸುವುದರ ಮೂಲಕ ಸಮಸ್ಯೆಯ ಭೀಕರತೆಯನ್ನು ಸರ್ಕಾರದ ಮುಂದೆಯೂ ಮಂಡಿಸಲಾಗಿದೆ.

ಕಳೆದ ಮೂರು ವರ್ಷಗಳಿಂದೀಚೆಗೆ ಬೆಳಕಿಗೆ ಬಂದಿರುವ ಮಲದ ಗುಂಡಿಯಲ್ಲಿ ಸಿಕ್ಕು ಸಾವನ್ನಪ್ಪಿದವರ ಸಂಖ್ಯೆ ೧೧. ಈ ಪೈಕಿ ದಕ್ಷಿಣ ಕನ್ನಡದಲ್ಲಿಯೇ ೫ ಸಾವು ಸಂಭವಿಸಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಉಡುಪಿ ಹಾಗೂ ಮಂಗಳೂರು ಪುರಸಭೆಗಳೇ ಈ ಮಲ ಹೊರುವ ಪದ್ಧತಿಯನ್ನು ಸಂಪೂರ್ಣವಾಗಿ ಇಲ್ಲವಾಗಿಸುವ ಪಣ ತೊಟ್ಟಿದ್ದವು. ಬಿ. ಬಸವಲಿಂಗಪ್ಪನವರು ತಂದ ಕಾಯಿದೆಯನ್ನು ಹಲ್ಲು ಕಚ್ಚಿ ಜಾರಿ ಮಾಡಿದ

ನಗರಸಭೆಗಳು ಇವು. ಒಂದೆಡೆ ವಿ. ಎಸ್. ಆಚಾರ್ಯ, ಇನ್ನೊಂದೆಡೆ ಬ್ಲೇಸಿಯಸ್ ಡಿಸೋಜಾ ಇಬ್ಬರೂ ಮಲ ಹೊರುವ ಪದ್ಧತಿ ಹಿಂದೆ ಸರಿಯಲು ಕಾರಣರಾಗಿದ್ದರು. ಆದರೆ ಈಗ ಅದೇ ಜಿಲ್ಲೆಯಲ್ಲಿ ಐದು ಸಾವುಗಳು ಸಂಭವಿಸಿವೆ.

ಫ್ರಾನ್ಸ್‌ನಲ್ಲಿ ಜರುಗಿದ ಆರನೆಯ ಜಾಗತಿಕ ಜಲ ಸಮಾವೇಶದಲ್ಲಿ ಮಾತನಾಡಲು ಅವಕಾಶ ಸಿಕ್ಕಿದ್ದು ಉಷಾ ಚೆನ್ಮಾವೋಗೆ. ಆಕೆ ರಾಜಸ್ಥಾನದ ಕುಗ್ರಾಮದಲ್ಲಿ ಹೇಗೆ ತಾನು ಮಲ ಬಳಿದೆ, ತಲೆಮೇಲೆ ಹೊತ್ತು ಸಾಗಿಸಿದೆ ಎನ್ನುವುದನ್ನು ಹೇಳುತ್ತಾ ಹೋದಂತೆ 'ಭಾರತ ಪ್ರಕಾಶಿಸುತ್ತಿದೆ' ಎಂದೇ ನಂಬಿದ್ದ ಜಗತ್ತಿನ ಮುಂದೆ ಅದರ ಇನ್ನೊಂದು ಮುಖವೂ ಅನಾವರಣಗೊಳ್ಳುತ್ತಾ ಹೋಯಿತು. ಹತ್ತನೆಯ ವಯಸ್ಸಿಗೆ ಮದುವೆಯಾಗಿ ಮಾವನ ಮನೆಗೆ ಬಂದ ಈಕೆ ಅವರು ತಲೆತಲಾಂತರದಿಂದ ಮಾಡಿಕೊಂಡು ಬಂದ ಮಲ ಬಾಚುವ ಕೆಲಸಕ್ಕೆ ಕೈ ಹಚ್ಚಿದ್ದಳು.

ದೇಶದ ಯಾವುದೇ ರಾಜ್ಯವನ್ನು ತೆಗೆದುಕೊಳ್ಳಿ ಇಂತಹ ಕಡೆ ಮಲ ಹೊರುವ ಪದ್ಧತಿ ಇಲ್ಲ ಎನ್ನಲು ಸಾಧ್ಯವೇ ಇಲ್ಲ. ವಾಣಿಜ್ಯ ನಗರಿ ಮುಂಬೈನಲ್ಲೂ ಇದೆ. ವಿಠೋಬಾನ ತವರು ಪುಣೆಯಲ್ಲಿಯೂ ಇದೆ. ಸುಂದರ ಕಾಶ್ಮೀರದಲ್ಲಿಯೂ ಇದೆ. ಕಾರ್ಮಿಕ ಹೋರಾಟದ ನೆಲೆ ಪಶ್ಚಿಮ ಬಂಗಾಳದಲ್ಲಿಯೂ ಇದೆ. ಐಟಿ–ಬಿಟಿ ಸ್ವರ್ಗ ಬೆಂಗಳೂರಿನಲ್ಲಿಯೂ ಇದೆ.

೧೯೯೨ರಿಂದಲೂ ತಾನು ಮಲ ಹೊರುವ ಪದ್ಧತಿಯಿಂದ ಮುಕ್ತವಾದ ರಾಜ್ಯ ಎಂದು ಘೋಷಿಸಿಕೊಂಡಿದ್ದ ಗುಜರಾತ್‌ಗಂತೂ ೨೦೧೧ರ ಗಣತಿಯಿಂದ ಮುಖಭಂಗವಾಗಿದೆ. ಗುಜರಾತ್‌ನ ೨೫೦೦ ಶೌಚಾಲಯಗಳಿಂದ ತಲೆಯ ಮೇಲೆ ಮಲ ಹೊತ್ತು ಸಾಗಿಸಲಾಗುತ್ತಿದೆ ಎನ್ನುವುದನ್ನು ಈ ಗಣತಿ ಬಯಲು ಮಾಡಿದೆ. ಗುಜರಾತ್ ಹೈಕೋರ್ಟ್ ಸಹ ಇದನ್ನು ಗುರುತಿಸಿದೆ.

'ಇದು ಕೇವಲ ಶುಚಿತ್ವದ ವಿಷಯವಲ್ಲ ಬದಲಿಗೆ ಗೌರವದಿಂದ ಬದುಕುವ ಮೂಲಭೂತ ಹಕ್ಕಿನ ಪ್ರಶ್ನೆ' ಎನ್ನುತ್ತಾರೆ ರಾಷ್ಟ್ರೀಯ ಸಲಹಾ ಮಂಡಳಿಯ ಮಾಜಿ ಸದಸ್ಯ ಹರ್ಷ ಮಂದರ್.

ಕರ್ನಾಟಕ ಉಚ್ಚ ನ್ಯಾಯಾಲಯ ಹೇಳುತ್ತಿರುವುದೂ ಇದನ್ನೇ. ರಾಜ್ಯದಲ್ಲಿ ಮಲ ಹೊರುವ ಪದ್ಧತಿಯನ್ನು ತೊಡೆದುಹಾಕಲು ಆಗದ ಬಗ್ಗೆ ಮುಖ್ಯ ನ್ಯಾಯಮೂರ್ತಿ ವಿಕ್ರಮಜಿತ್ ಸೇನ್ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದು ಇಷ್ಟು ವರ್ಷವಾದರೂ ಸಹ ಈ ಪದ್ಧತಿಯನ್ನು ಇಲ್ಲವಾಗಿಸಿಲ್ಲ ಎನ್ನುವುದನ್ನು ವಿಚಾರಣೆಯ ವೇಳೆ ಕಂಡುಕೊಂಡ ನ್ಯಾಯಾಲಯ 'ನೀವೇ ಏಕೆ ಈ ಮಲದ ಗುಂಡಿಗೆ ಇಳಿದು ಆ ಕೆಲಸಗಾರರು ಏನು ಅನುಭವಿಸುತ್ತಿದ್ದಾರೆ ಎಂಬುದನ್ನು ಅನುಭವಿಸಿ ನೋಡಬಾರದು' ಎಂದು ಅಧಿಕಾರಿಗಳಿಗೆ ಪ್ರಶ್ನಿಸಿದೆ.

ಕೆಂಡದ ಮೇಲೆ ನಡೆದವರಿಗೆ ಮಾತ್ರವೇ ಕೆಂಡದ ಬಿಸಿ ಗೊತ್ತಾಗಲು ಸಾಧ್ಯ ಎನ್ನುತ್ತಾರೆ ಕವಿ ಸು. ರಂ. ಎಕ್ಕುಂಡಿ.

**ಕಿನ್ನರಿ ಬೊಮ್ಮಯ್ಯ**
ನಂ. ೧೪೨, ೯ನೇ ಅಡ್ಡರಸ್ತೆ, ೫ನೇ ಹಂತ, ರಾಜಾಜಿನಗರ, ಬೆಂಗಳೂರು – ೫೬೦ ೦೧೦




# ಬಂಡೆಗಳಾಗಿ ಕಂಡಿದ್ದು ಯಾಕ !



**ಮ**ಂಜಿನ ಹನಿಯಾಗ ಹುಡುಕಿದರೂ ಸಿಗದ ಹೆಜ್ಜೆಗಳು ಬಂಡೆಗಳಾಗಿ ಕಂಡಿದ್ದು ಯಾಕ !
ನೆಲದ ಎದಿಯಾಗ ತಡಕಾಡಿದರೂ ಸಿಗದ ನೆನಪುಗಳು ಉಲ್ಕೆಗಳಾಗಿ ಕಂಡಿದ್ದು ಯಾಕ !

ರಾತ್ರಿಯ ಮನದ ಮಗ್ಗಲಿನ್ಯಾಗ ಅರಳಿದ ಚಂದ್ರ ಚುಕ್ಕಿಗಳ ಚಿತ್ತ ನೋಡೂದು ಮರತಿದ್ದು
ಯಾಕ !
ಹಗಲ ಕಣ್ಣಾಗಿ ನಿಂತ ಸೂರ್ಯ ಬೆವರ ನಾಡಿಯ ಮೆರವಣಿಗೆಯಲಿ ನಿಸ್ತೇಜ ಚಿತ್ರವಾಗಿ
ಕಂಡಿದ್ದು ಯಾಕ !

ಮರದ ಕೊಂಬ್ಯಾಗ ಇಣಿಕಿ ಹಾಕಿ ಬೇರಿನ ಬಸುರಿಗೆ ವಿಷ ಗುಳಿಗೆಗಳಾಗಿ ಉಣಿಸಿದ್ದು ಯಾಕ !
ಬಾಡಿದ ಎಲೆಗಳ ಆಯಸ್ಸಿನ್ಯಾಗ ನೆಲದ ಕರುಣೆ ಗರ್ಭದ ಮೊಳಕೆಗಳಾಗಿ ಕಂಡಿದ್ದು ಯಾಕ !

ಒಮ್ಮೆಗೆ ತನ್ನ ಸುತ್ತ ಬಿಗಿದ ಬೇಲ್ಯಾಗ ಸಿಡಿದು ಅರಳುವ ನೆರಳು ಸಂತರಾಗಿ ಮೂಡಿದ್ದು ಯಾಕ !
ಬೇಲಿಯ ಕಣ್ಣಾಗ ಮನುಷ್ಯರ ಉಸಿರು ಆತುಕೊಂಡ ನೋಟಗಳಾಗಿ ಮುಗಿಲಗಲ ಕಂಡಿದ್ದು ಯಾಕ !

ಹೊಲದ ಬದುನ್ಯಾಗ ಮೊಗ್ಗಾಗಿ ಹಿಗ್ಗಿದ ಸಂಭ್ರಮ ಸೆಟೆದು ಶಿಲ್ಪಗಳಾಗಿ ನೆಲೆಗೊಂಡಿದ್ದು ಯಾಕ !
ಬೆಟ್ಟದ ಮನಸ ಕದ್ದು ಕೋಟೆಗಳಾಗಿ ಅರಳಿಸಿದ ಇರುವೆಗಳು ನಕಾಶೆಗಳಾಗಿ ಕಂಡಿದ್ದು ಯಾಕ !

ಸವುಳು ಮಣ್ಣಾಗ ಸಖಿಯ ಕಸುವು ನೆಲದುಸಿರ ದೀಪ ಹೊತ್ತಿಸಿ ನೆದರುಗೊಂಬೆಯ್ಹಂಗ ಕಂಡಿದ್ದು ಯಾಕ !
ಮರಳು ಒಡಲಾಗಿನ ಗಿರಿಯ ನೆನಪುಗಳ ಕಾವು ತಣಿಸಿ ಬಯಲಾಗಿನ ನೆಲದ ರೆಂಬೆಯಾಗಿ ಕಂಡಿದ್ದು ಯಾಕ !

**ಗಿರಿಯಪ್ಪ ಅಸಂಗಿ,** ಕಿರಸೂರ – ಮುಖ್ಯ ಪೋಸ್ಟ್, ಬಾಗಲಕೋಟೆ ತಾಲೂಕು ಮತ್ತು ಜಿಲ್ಲೆ, ಪಿನ್ – ೫೮೭ ೧೧೧







**ನೇಸರ** (ಸಣ್ಣ ಕತೆಗಳು)

ಭಾರತೀ ಕಾಸರಗೋಡು

**ಪುಟ : ೧೧೮**

**ಬೆಲೆ : ರೂ. ೯೦**

**ಇಂದಿರಾ ಪ್ರಕಾಶನ**

ನಂ. ೯೭೨ ಸಿ

೪ನೇ 'ಇ' ವಿಭಾಗ

೧೧ನೇ 'ಎ' ಮುಖ್ಯರಸ್ತೆ

ರಾಜಾಜಿನಗರ

ಬೆಂಗಳೂರು – ೧೦

*ಭಾರತೀ ಕಾಸರಗೋಡು ಅವರ ಸಣ್ಣ ಕಥಾ ಸಂಕಲನ 'ನೇಸರ'ದಲ್ಲಿ ಒಟ್ಟು ೧೨ ಸಣ್ಣ ಕಥೆಗಳಿದ್ದು, ಎಲ್ಲವೂ ತಮ್ಮ ಸುತ್ತಲೂ ನಡೆಯುವ ಘಟನೆಗಳು ಮತ್ತು ಮನುಷ್ಯ ನಡಾವಳಿಗಳನ್ನೇ ಒಳಗೊಂಡಿವೆ. ಎಲ್ಲಾ ಕಥೆಗಳು ಒಂದು ರೀತಿಯಲ್ಲಿ ಆತ್ಮೀಯತೆ, ಮನಸೂರೆಗೊಳ್ಳುವ ಮತ್ತು ಆಪ್ಯಾಯಮಾನವಾದ ಸರಳಭಾಷೆಯಲ್ಲಿರುವ ಕಥೆಗಳಾಗಿವೆ. 'ನೇಸರ ಕಿರಣ' ಕಥೆಯಲ್ಲಿ ಒಂದು ಪುಟ್ಟ ಮಗುವಿನ ವರ್ಣನೆ ಹೀಗಿದೆ: "ಆಹ! ಪುಟ್ಟ ನೇಸರನ ಆ ಮೃದು ಬೆಣ್ಣೆ ಮೈ.. ಅದರಿಂದ ಒಸರುವ ದಿವ್ಯ ಸುಗಂಧ.. ಆ ಪುಟ್ಟ ಸುರಸುಂದರ ಮುಖದ ಸುತ್ತ ಅಲೆಅಲೆಯಾಗಿ ತೇಲಾಡುವ ಮುದ್ದು ಜೊಂಪೆ ಜೊಂಪೆ ಗುಂಗುರುಕೂದಲು! ಆ ಪುಟ್ಟನ ಹೊಳೆವ ಬಿಳಿಬಣ್ಣ ಶಂಖದೊಡನೆ ಸ್ಪರ್ಧಿಸುತ್ತದೆ. ದಂತವನ್ನು ಮೀರಿಸುತ್ತದೆ.. ಮಿರುಗುವ ಬಿಳಿಗೆನ್ನೆ, ಮುದ್ದು ಮುದ್ದು ಹಾಲುದೊಡೆ....." ಇದೇ ಕಥೆಯ ಕೊನೆಯಲ್ಲಿ ಅಜ್ಜಿ ತನ್ನ ಮುದ್ದು ಮೊಮ್ಮಗ ಅಂದರೆ ಇಂದಿನ ಆಧುನಿಕ ಮೊಮ್ಮಗನ ಮಾತುಗಳಿಂದ ಆಶ್ಚರ್ಯ ಮತ್ತು ಪುಳಕದಿಂದ ದಿವ್ಯತೆಯ ಭಾವದೊಂದಿಗೆ ಆಶ್ಚರ್ಯ ಮತ್ತು ಅನುಬಂಧದಿಂದ ನೋಡುವುದನ್ನು ನೋಡಬಹುದು. ಈ ಕಥೆಯ ಕೊನೆಯಲ್ಲಿ ಮೊಮ್ಮಗ ಬೆಂಗಳೂರಿನ ವಿಮಾನ ನಿಲ್ದಾಣದಲ್ಲಿ ಅಜ್ಜಿಯನ್ನು ಬಿಟ್ಟು ತನ್ನ ಪೋಷಕರೊಂದಿಗೆ ಅಮೆರಿಕಕ್ಕೆ ಹೋಗುವಾಗ ಹೀಗೆ ಹೇಳುತ್ತಾನೆ, 'ಅಲ್ಬೇದಾ ಬಾಪ್ಪಾ (ಅಜ್ಜಿ) ಅಲ್ಬೇದಾ.. ನಾನು.. ನಾನು.. ಬೇಗ ವಾಪಸ್ ಬಂದುಬಿತ್ತೀನಿ ಆಯ್ತಾ?' ಎಂದು.*




**ಓದಿನ ಜಾಡು** (ಸಾಹಿತ್ಯ ಸಂಸ್ಕೃತಿಯ ಬರೆಹಗಳು) *ರಂಗನಾಥ ಕಂಟನಕುಂಟೆ*

**ಪುಟ : ೨೫೨** **ಬೆಲೆ : ರೂ. ೧೬೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಕನ್ನಡಕ್ಕೆ ತನ್ನದೇ ವ್ಯಾಕರಣ ಬೇಕಿದೆ ಎನ್ನುವ ಡಿ. ಎನ್. ಶಂಕರ ಭಟ್ಟರ ಶಾಲೆಯಲ್ಲಿ ಪಳಗಿದಂತೆ ತೋರುವ ರಂಗನಾಥ ಕಂಟನಕುಂಟೆ ಬರೆದಿರುವ 'ಓದಿನ ಜಾಡು' ಕೃತಿಯ ಉಪ ಶೀರ್ಷಿಕೆ 'ಸಾಹಿತ್ಯ ಸಂಸ್ಕೃತಿಯ ಬರೆಹಗಳು'. ಇಲ್ಲಿ ೨೦ ಲೇಖನಗಳಿದ್ದು ಸಾಹಿತ್ಯ, ಸಂಸ್ಕೃತಿ ಮತ್ತು ಪರಿಕಲ್ಪನೆಗಳು, ವೈಚಾರಿಕತೆಯ ಗೊಂದಲಗಳು, ಕನ್ನಡ ರಾಷ್ಟ್ರೀಯತೆ ಇತ್ಯಾದಿ ಶೀರ್ಷಿಕೆಗಳ ಲೇಖನಗಳಿವೆ. ಇದರ ಜೊತೆಗೆ ಮಂಟೇಸ್ವಾಮಿ ಪರಂಪರೆ: ಮುಖಾಮುಖಿ ಸವಾಲು, ಕೀರಂ: ಸಾಹಿತ್ಯ ಓದುತ್ತಿದ್ದ ಬಗೆ, ಲಂಕೇಶ್ ಚೈತನ್ಯದ ನೆಲೆಗಳ ಶೋಧಕ, (ತೇಜಸ್ವಿಯವರ) ಚಿದಂಬರ ರಹಸ್ಯ: ಗ್ರಹಿಕೆಯ ನೆಲೆಗಳು, ಕೆವ್ವೆಎನ್ ನಾಟಕಗಳ ವಸ್ತುವಿನ್ಯಾಸ, ಅಮರೇಶರ ಕತೆಗಳ ನುಡಿ ವಿನ್ಯಾಸ, ಕನಕನ ಲೋಕದೃಷ್ಟಿ: ಬದಲಿ ಸಾಂಸ್ಕೃತಿಕ ರಾಜಕಾರಣ ನೆಲೆಗಳು, ರಾಮಧಾನ್ಯ ಮತ್ತು ಮಾರುಕಟ್ಟೆಯ ಆಹಾರ ರಾಜಕಾರಣ ಮತ್ತು ಸಂತ ಪರಂಪರೆ: ಕನ್ನಡನುಡಿಯ ಸಾಮಾಜಿಕ ನೆಲೆಗಳು ಇತ್ಯಾದಿ ಶೀರ್ಷಿಕೆಗಳ ಲೇಖನಗಳನ್ನು ನೋಡಬಹುದು. ಚೆನ್ನಾಗಿ ಓದಿಕೊಂಡಿರುವ ಕಂಟನಕುಂಟೆ ತಮ್ಮದೇ ರೀತಿಯಲ್ಲಿ ವಿಶ್ಲೇಷಣೆ ಮಾಡಿ ಕೆಲವು ತೀರ್ಮಾನಗಳನ್ನು ಕೃತಿಯಲ್ಲಿ ದಾಖಲಿಸಿದ್ದಾರೆ. ಈ ಲೇಖನಗಳಲ್ಲಿ ಮುಖ್ಯವಾಗಿ ಕಾಣಿಸುವ ವಸ್ತುವೆಂದರೆ ಸಾಹಿತ್ಯ, ಸಂಸ್ಕೃತಿ ಮತ್ತು ಪರಿಕಲ್ಪನೆಗಳು. ಈ ಎಲ್ಲವೂ ಇಲ್ಲಿ ಮುಖಾಮುಖಿಯಾಗಿ ಇತ್ತೀಚಿನ ತಲೆಮಾರಿನ ಚಿಂತಕರು ನೋಡುವ ಒಂದು ವಿಧಾನ ಇಲ್ಲಿ ನೆಲೆಗೊಂಡಿದೆ ಎನ್ನಬಹುದು. ಇನ್ನು ಶಂಕರ ಭಟ್ಟರ ಶಾಲೆಯ ವಿಷಯಕ್ಕೆ ಬಂದರೆ, ಕೃತಿಯಲ್ಲಿನ ಈ ಪದಗಳನ್ನು ನೋಡಿ: ಆಗ್ಗಾಗ್ಗೆ, ಸೃಷ್ಠಿ, ಚಪ್ಪಟನ್ನೇ, ಕೇಳ್ವಿ (ತಮಿಳಿನಲ್ಲಿ ಪ್ರಶ್ನೆ), ಕನಿಷ್ಠ, ವಿಶ್ಲೇಶನೆ, ಎಶ್ಟು, ಬರೆಹಗಳು ಹೀಗೆ.. ಇವು ಓದುಗರಲ್ಲಿ ಗೊಂದಲ ಹುಟ್ಟಿಸುತ್ತವೆ. ಇವೆಲ್ಲದರ ಮೇಲೆಯೂ ಸಾಹಿತ್ಯ/ ವಿಮರ್ಶೆಗಾರರು ಈ ಕೃತಿಯನ್ನು ಒಮ್ಮೆ ಪರಿಶೀಲಿಸುವ ಅಗತ್ಯವಿದೆ.*




**ಭಾರತ ಚರಿತ್ರೆಯಲ್ಲಿ ರೈತ**

*ಇಂಗ್ಲಿಷ್ ಮೂಲ : ಇರ್ಫಾನ್ ಹಬೀಬ್, ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*

**ಪುಟ : xii + ೮೮** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

*ಈ ಸಣ್ಣ ಪುಸ್ತಕ ಖ್ಯಾತ ಚರಿತ್ರೆಕಾರ ಇರ್ಫಾನ್ ಹಬೀಬ್ 'ಇಂಡಿಯನ್ ಹಿಸ್ಟರಿ ಕಾಂಗ್ರೆಸ್'ನಲ್ಲಿ (ಕುರುಕ್ಷೇತ್ರ ೧೯೮೨) ಮಾಡಿದ ಅಧ್ಯಕ್ಷೀಯ ಭಾಷಣ 'ದಿ ಪೆಸೆಂಟ್ ಇನ್ ಇಂಡಿಯನ್ ಹಿಸ್ಟರಿ'ಯ ಅನುವಾದ. ಅಂದರೆ ೩೫ ವರ್ಷಗಳ ಹಿಂದೆ ಮಾಡಿದ ಭಾಷಣ. ಸಿಂಧೂ ಕಣಿವೆಯಲ್ಲಿ ರೈತಾಪಿ ವರ್ಗದ ಹುಟ್ಟು, ಗಂಗಾನದಿ ಕಣಿವೆಯಲ್ಲಿ ಸುದೀರ್ಘ ಬೆಳವಣಿಗೆ, ಜಾತಿವಾರು ರೈತಾಪಿವರ್ಗ ವ್ಯವಸ್ಥೆಯ ಹುಟ್ಟು, ದಕ್ಷಿಣ ಭಾರತದಲ್ಲಿ ರೈತಾಪಿವರ್ಗ, ಮೊದಲ ಸಹಸ್ರಮಾನದಲ್ಲಿ ಗ್ರಾಮೀಣ ಸಮಾಜ: ಜಮೀನ್ದಾರಿ ಪದ್ಧತಿ ಮತ್ತು ರೈತಾಪಿ ವರ್ಗಗಳ ದಂಗೆಗಳು ಇತ್ಯಾದಿಯಾಗಿ ವಿಂಗಡಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಅಸ್ಪೃಶ್ಯರು ಹೇಗೆ ಸೃಷ್ಟಿಯಾದರು ಎನ್ನುವುದರ ವಿಶ್ಲೇಷಣೆಗಳು ಅಂಬೇಡ್ಕರ್ ಅವರ ಕೃತಿಗಳಲ್ಲಿನ ತರ್ಕಗಳಿಗಿಂತ ಇಲ್ಲಿ ಭಿನ್ನವಾಗಿದೆ. ಉದಾ : 'ಪ್ರಾಣಿಗಳನ್ನು ಬೇಟೆಯಾಡುವ 'ಜಾತಿ'ಗಳನ್ನು ಬೌದ್ಧರೇ ಅಲ್ಲದೆ, ಬ್ರಾಹ್ಮಣ ಗ್ರಂಥಗಳು ಕೂಡ ದ್ವೇಷ ಭಾವದಿಂದ ಚಿತ್ರಿಸಿವೆ. ಇವರನ್ನು ಅಧೀನಕ್ಕೆ ತೆಗೆದುಕೊಂಡು, ಸಂಕರ ಜಾತಿಗಳಲ್ಲಿ ಸೇರಿಸಿದ ನಂತರ ಅದರ ಜೊತೆಗೆ ಹೇಗೆ ವ್ಯವಹರಿಸಬೇಕೆಂಬುದನ್ನು ಮನು ಸೂತ್ರೀಕರಿಸಿದ. ಇವರನ್ನು 'ಚಂಡಾಲರು' 'ಶ್ವಪಚರು' ಎಂದು ಕರೆಯುತ್ತಾ ಇವರನ್ನು ಊರಿನ ಹೊರಗೆ ಇಡಬೇಕೆಂದು, ಕೀಳು ಕೆಲಸಗಳನ್ನೇ ಮಾಡಬೇಕೆಂದು ನಿಬಂಧನೆಗಳನ್ನು ವಿಧಿಸಿದ. ಈ ರೀತಿ 'ಕೀಳುಜಾತಿಗಳು' 'ಅಸ್ಪೃಶ್ಯತೆ' ಎಂಬ ಭಾವನೆಗಳು ಸೇರಿಕೊಂಡವು' (ಪುಟ ೨೯). ಅಂಬೇಡ್ಕರ್ ನೀಡಿರುವ ತರ್ಕಗಳು ಮತ್ತು ಮನು ನೀಡಿರುವ ವಿವರಣೆಗಳು ಬೇರೆಯೇ ಇವೆ.*

– **ಡಾ॥ ಎಂ. ವೆಂಕಟಸ್ವಾಮಿ,** *ಕಸವನಹಳ್ಳಿ ರಸ್ತೆ, ಬೆಂಗಳೂರು – ೩೫*

**ಗೀತ ಮಾಧುರಿ** (ಭಾವಗೀತೆಗಳು – ಜನಪರ ಗೀತೆಗಳು) *ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ*

**ಪುಟ : ೨೫೬** **ಬೆಲೆ : ರೂ. ೧೮೦**

**ಅಕ್ಷರ ಮಂಟಪ,** ನಂ. ೯ನೇ 'ಬಿ' ಮುಖ್ಯ ರಸ್ತೆ, ಹಂಪಿ ನಗರ, ವಿಜಯನಗರ, ಬೆಂಗಳೂರು – ೫೬೦ ೧೦೪




*ಗೀತ ಮಾಧುರಿ – ಇದು ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ಅವರ ಈವರೆಗಿನ ೨೧೨ ಭಾವಗೀತೆಗಳ, ಜನಪರ ಗೀತೆಗಳ ಮತ್ತು ಓದುಗವಿತೆಗಳ ಸಂಕಲನ. ಮೈಸೂರು ಅನಂತಸ್ವಾಮಿ ಅವರು ಇದರ ಬೆನ್ನುಡಿಯಲ್ಲಿ ಗುರುತಿಸಿರುವಂತೆ ಇಲ್ಲಿಯ ಅನೇಕ ಭಾವಗೀತೆಗಳಲ್ಲಿ ತರುಣರ ಆಸೆ, ಆಕಾಂಕ್ಷೆ, ದಿಟ್ಟತನ, ಜಾನಪದ ಧಾಟಿ, ಗೇಯತೆ, ಒಟ್ಟು ಭಾವಗೀತೆಯ ಸ್ವರೂಪ ಪರಿಪಕ್ವವಾಗಿ ಮಿಂಚಿದೆ. ಹಾಗಾಗಿ ಹಾಡುಗಾರರಿಗೆ ಇಲ್ಲಿಯ ಹಾಡುಗಳು ಸುಲಭವಾಗಿ ದಕ್ಕುತ್ತವೆ. ಭಾವಗೀತ ಪ್ರಕಾರಕ್ಕೆ ಮತ್ತೆ ಹೊಸ ಹುಮ್ಮಸ್ಸನ್ನು, ನುಡಿಗಟ್ಟನ್ನು ಒದಗಿಸುವ ಒಂದು ಒಳ್ಳೆಯ ಪ್ರಯತ್ನ ಇಲ್ಲಿ ನಡೆದಿದೆ ಎಂದು ನಾಡೋಜ ಡಾ॥ ಚೆನ್ನವೀರ ಕಣವಿ ಅವರು ಅಭಿಪ್ರಾಯಪಟ್ಟರೆ, ಡಾ॥ ಎಚ್. ಎಸ್. ವೆಂಕಟೇಶಮೂರ್ತಿ ಅವರು ಗೀತೆಗಳ ರಚನಾ ವಿಧಾನ ತನ್ನದೇ ಆದ ಪ್ರತ್ಯೇಕ ಮನೋಧರ್ಮವನ್ನು ಹೊಂದಿರುತ್ತದೆ; ಅಂತಹ ಸೂಕ್ಷ್ಮ ಅಂಶಗಳನ್ನು ಹೊಂದಿರುವ ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ಅವರ ಕೃತಿಗಳು ಕನ್ನಡ ಸಾಹಿತ್ಯದಲ್ಲಿನ ಕೊರತೆಯನ್ನು ತುಂಬಿವೆ; ಇವರ ಕಾವ್ಯ ಓದುತ್ತಿದ್ದರೆ ಕನ್ನಡದಲ್ಲಿ ಇನ್ನೊಂದು ಕೋಗಿಲೆ ಜನ್ಮ ತಾಳಿತು ಅನ್ನಿಸುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.*

– **ಶ್ರೀಸುಮಿತ್ರಾಸುತ,** *ಅಗಸಬಾಳ*

ಮುಂಬೈಯಲ್ಲಿ ಪ್ರಸಿದ್ಧ ಕಾರ್ಮಿಕ ನಾಯಕರಾಗಿ ಬೆಳೆದ ಎನ್. ಎಂ. ಜೋಶಿ ಅವರು ಎಲ್ಫಿನ್‌ಸ್ಟೋನ್ ಪ್ರೌಢಶಾಲೆಯಲ್ಲಿ ಅಂಬೇಡ್ಕರ್ ಅವರ ಶಿಕ್ಷಕರಾಗಿದ್ದರು. ತರಗತಿಯಲ್ಲಿ ಒಮ್ಮೆ ಜೋಶಿಯವರು ಕೇಆದ ಪ್ರಶ್ನೆಗೆ ಯಾರಿಂದಲೂ ಉತ್ತರ ಹೇಳಲಾಗಅಲ್ಲ. ಜಾತಿಯಿಂದ ಬ್ರಾಹ್ಮಣರಾಗಿದ್ದರೂ ಎಡಪಂಥೀಯರಾಗಿದ್ದ ಜೋಶಿ ಅವರಿಗೆ ಅಸ್ಪೃಶ್ಯತೆಯಲ್ಲಿ ನಂಬಿಕೆ ಇರಅಲ್ಲ. ಅವರು ಅಂಬೇಡ್ಕರ್ ಅವರನ್ನು ಕರೆದು ಉತ್ತರವನ್ನು ಕಪ್ಪು ಹಲಗೆ ಮೇಲೆ ಬರೆಯುವಂತೆ ಹೇಆದರು. ಇದಕ್ಕೆ ಸವರ್ಣೀಯ ಹಿಂದೂ ವಿದ್ಯಾರ್ಥಿಗಳು ಆಕ್ಷೇಪವೆತ್ತಿದರು. ಇದಕ್ಕೆ ಕಾರಣ ಅವರ ಊಟದ ಬುತ್ತಿಗಳನ್ನು ಕಪ್ಪು ಹಲಗೆ ಹಿಂದೆ ನೇತುಹಾಕಲಾಗಿತ್ತು. ಅಸ್ಪೃಶ್ಯರಾದ ಅಂಬೇಡ್ಕರ್ ಕಪ್ಪು ಹಲಗೆಯನ್ನು ಮುಟ್ಟಿದರೆ, ತಮ್ಮ ಬುತ್ತಿ ಮಅನವಾಗುತ್ತೆಂದು ಈ ಹುಡುಗರು ಭಾವಿಸಿದ್ದರು. ಆದರೆ ಶಿಕ್ಷಕರಾದ ಎನ್. ಎಂ. ಜೋಶಿ ಇದನ್ನು ಒಪ್ಪಅಲ್ಲ. ಯಾರಿಗೂ ಹೆದರದೇ ಕಪ್ಪು ಹಲಗೆ ಮೇಲೆ ಉತ್ತರ ಬರೆಯಬೇಕೆಂದು, ತಪ್ಪದೇ ಆದೇಶ ಪಾಅಸಬೇಕೆಂದು ಒತ್ತಾಯಿಸಿ ಬರೆಸಿದರು.

# ಇದು ಬಾಬಾ ಸಾಹೇಬರು ನಡೆದುಬಂದ ಹಾದಿ

ಬುದ್ಧ ಬಸವಣ್ಣನಿಂದ ಹಿಡಿದು ಬಾಬಾ ಸಾಹೇಬರವರೆಗೆ ನಿರಂತರವಾಗಿ ಸಾಗಿ ಬಂದ ಸಮಾನತೆಯ ಜ್ಯೋತಿಯನ್ನು ಆರಿಸಲು ಭಾರೀ ಹುನ್ನಾರವೇ ನಡೆದಿರುವ ಹಿನ್ನೆಲೆಯಲ್ಲಿ ಡಾ॥ ಅಂಬೇಡ್ಕರ್ ಬದುಕಿದ್ದಾಗ ಇಂತಹ ಶಕ್ತಿಗಳೊಂದಿಗೆ ಹೇಗೆಲ್ಲ ಸೆಣಸಿದರು ಎಂಬ ಬಗ್ಗೆ ನಾವು ಚರಿತ್ರೆಯತ್ತ ಹೊರಳಿ ನೋಡಬೇಕಾಗಿದೆ.

ಬಹಳ ಜನ ತಿಳಿದೋ, ತಿಳಿಯದೆಯೋ ಭಾವಿಸಿದಂತೆ ಬಾಬಾ ಸಾಹೇಬರು ಕಮ್ಯುನಿಸ್ಟ್ ವಿರೋಧಿ ಆಗಿರಲಿಲ್ಲ. ಹಾಗೆಂದು ಕಮ್ಯುನಿಸಂಅನ್ನು ಅವರು ಪೂರ್ಣ ಒಪ್ಪಿರಲೂ ಇಲ್ಲ. ಆದರೆ ಸಮಾಜ ಬದಲಾವಣೆಗೆ ಅಡ್ಡಿಯಾಗಿರುವ ಪ್ರಧಾನ ಶತ್ರುವಿನ ವಿರುದ್ಧ ಹೋರಾಡಲು ಸಮಾನ ಮನಸ್ಕ ಶಕ್ತಿಗಳು ಹೆಗಲಿಗೆ ಹೆಗಲು ಕೊಡಬೇಕೆಂದು ಅಂಬೇಡ್ಕರ್ ನಿಲುವಾಗಿತ್ತು. ಅಂತಲೇ ಅನೇಕ ಬಾರಿ ಕಮ್ಯುನಿಸ್ಟರ ಜೊತೆ ಕೂಡಿಕೊಂಡು ಅವರು ಕೆಲಸ ಮಾಡಿದರು.

ವಾಸ್ತವವಾಗಿ ಡಾ॥ ಅಂಬೇಡ್ಕರ್ ಅವರ ಮೇಲೆ ಪ್ರಭಾವ ಬೀರಿದ ಜಾಗತಿಕ ಚಿಂತಕರಲ್ಲಿ ಕಾರ್ಲ್‌ಮಾರ್ಕ್ಸ್ ಕೂಡ ಒಬ್ಬರು. ಮಾರ್ಕ್ಸ್ ವ್ಯಾಖ್ಯಾನಿಸಿದ ವರ್ಗ ಸಂಘರ್ಷ ತತ್ವವನ್ನು ಅವರು ಒಪ್ಪಿದರು. ಆದರೆ ಭಾರತದಲ್ಲಿ ಬಡಜನರು ಧನಿಕರಿಂದ ಮಾತ್ರ ಶೋಷಿಸಲ್ಪಡುವುದಿಲ್ಲ. ಶ್ರವಣೀಯ ಹಿಂದೂಗಳು ಶೋಷಣೆ ಮಾಡುತ್ತಿದ್ದಾರೆಂದು ಅಂಬೇಡ್ಕರ್ ಹೇಳಿದರು. ಎಲ್ಲಾ ವಿಷಯಗಳಲ್ಲೂ ಮಾರ್ಕ್ಸ್‌ವಾದ ಒಪ್ಪಿದ ಅಂಬೇಡ್ಕರ್ ಜಗತ್ತಿನ ಅನೇಕ ದೇಶಗಳಲ್ಲಿ ಆರ್ಥಿಕ ಶೋಷಣೆ ಮಾತ್ರವಲ್ಲ ಸಾಮಾಜಿಕ ಶೋಷಣೆಯೂ ಇದೆಯೆಂದು ತಮ್ಮದೇ ವಾದ ಪ್ರತಿಪಾದಿಸಿದರು. ಕೈಗಾರಿಕೆ, ಭೂಮಿ, ಜೀವವಿಮೆ ಇವೆಲ್ಲ ರಾಷ್ಟ್ರೀಕರಣಗೊಳ್ಳಬೇಕೆಂದು ಪ್ರತಿಪಾದಿಸಿದ ಅಂಬೇಡ್ಕರ್ ಅವರು ಪ್ರಭುತ್ವ ಸಮಾಜವಾದಿಯಾಗಿದ್ದರು. ಗಾಂಧೀಜಿ, ಲೋಹಿಯಾ, ಜೆಪಿಯವರ ಸಮಾಜವಾದಕ್ಕಿಂತ ಭಿನ್ನವಾಗಿದ್ದ ಅಂಬೇಡ್ಕರ್ ಅವರ ಸಮಾಜವಾದ ಸಮಾಜದ ಅಸ್ಪೃಶ್ಯ ದಲಿತ ಸಮುದಾಯ ಒಳಗೊಂಡಿತ್ತು. ಲೋಹಿಯಾರ ವಿಕೇಂದ್ರೀಕರಣ ನೀತಿಗೆ ಭಿನ್ನವಾಗಿ ಸಂಪತ್ತಿನ ರಾಷ್ಟ್ರೀಕರಣವನ್ನು ಅಂಬೇಡ್ಕರ್ ಪ್ರತಿಪಾದಿಸಿದರು.

ಡಾ॥ ಅಂಬೇಡ್ಕರ್‌ಗೆ ಆರಂಭದಿಂದಲೂ ಎಡಪಂಥೀಯರು ಆತ್ಮೀಯರಾಗಿದ್ದರು. ಮುಂಬೈಯಲ್ಲಿ ಪ್ರಸಿದ್ಧ ಕಾರ್ಮಿಕ ನಾಯಕರಾಗಿ ಬೆಳೆದ ಎನ್. ಎಂ. ಜೋಶಿ ಅವರು ಎಲ್ಫಿನ್‌ಸ್ಟೋನ್ ಪ್ರೌಢಶಾಲೆಯಲ್ಲಿ ಅಂಬೇಡ್ಕರ್ ಅವರ ಶಿಕ್ಷಕರಾಗಿದ್ದರು. ತರಗತಿಯಲ್ಲಿ ಒಮ್ಮೆ ಜೋಶಿಯವರು ಕೇಳಿದ ಪ್ರಶ್ನೆಗೆ ಯಾರಿಂದಲೂ ಉತ್ತರ ಹೇಳಲಾಗಲಿಲ್ಲ. ಜಾತಿಯಿಂದ ಬ್ರಾಹ್ಮಣರಾಗಿದ್ದರೂ ಎಡಪಂಥೀಯರಾಗಿದ್ದ ಜೋಶಿ ಅವರಿಗೆ ಅಸ್ಪೃಶ್ಯತೆಯಲ್ಲಿ ನಂಬಿಕೆ ಇರಲಿಲ್ಲ. ಅವರು ಅಂಬೇಡ್ಕರ್ ಅವರನ್ನು ಕರೆದು ಉತ್ತರವನ್ನು ಕಪ್ಪು ಹಲಗೆ ಮೇಲೆ ಬರೆಯುವಂತೆ ಹೇಳಿದರು. ಇದಕ್ಕೆ ಸವರ್ಣೀಯ ಹಿಂದೂ

**ಸನತ್‌ಕುಮಾರ ಬೆಳಗಲಿ**

ವಿದ್ಯಾರ್ಥಿಗಳು ಆಕ್ಷೇಪವೆತ್ತಿದರು. ಇದಕ್ಕೆ ಕಾರಣ ಅವರ ಊಟದ ಬುತ್ತಿಗಳನ್ನು ಕಪ್ಪು ಹಲಗೆ ಹಿಂದೆ ನೇತುಹಾಕಲಾಗಿತ್ತು. ಅಸ್ಪೃಶ್ಯರಾದ ಅಂಬೇಡ್ಕರ್ ಕಪ್ಪು ಹಲಗೆಯನ್ನು ಮುಟ್ಟಿದರೆ, ತಮ್ಮ ಬುತ್ತಿ ಮಲಿನವಾಗುತ್ತದೆಂದು ಈ ಹುಡುಗರು ಭಾವಿಸಿದ್ದರು. ಆದರೆ ಶಿಕ್ಷಕರಾದ ಎನ್. ಎಂ. ಜೋಶಿ ಇದನ್ನು ಒಪ್ಪಲಿಲ್ಲ. ಯಾರಿಗೂ ಹೆದರದೇ ಕಪ್ಪು ಹಲಗೆ ಮೇಲೆ ಉತ್ತರ ಬರೆಯಬೇಕೆಂದು, ತಪ್ಪದೇ ಆದೇಶ ಪಾಲಿಸಬೇಕೆಂದು ಒತ್ತಾಯಿಸಿ ಬರೆಸಿದರು.

ವೈಚಾರಿಕವಾಗಿ ಭಾರತದ ಕಮ್ಯುನಿಸ್ಟ್ ಚಳವಳಿಯಲ್ಲಿ ಪಿತಾಮಹರಲ್ಲಿ ಒಬ್ಬರಾದ ಮಾನವೇಂದ್ರನಾಥ ರಾಯ್ (ಎಂ. ಎನ್. ರಾಯ್) ಅವರು ಆರಂಭದ ದಿನಗಳಲ್ಲಿ ಅಂಬೇಡ್ಕರ್ ಅವರ ವೈಚಾರಿಕ ಒಡನಾಡಿಯಾಗಿದ್ದರು. ಅನೇಕ ಸಮಸ್ಯೆಗಳ ಬಗ್ಗೆ ರಾಯ್ ಅವರೊಂದಿಗೆ ಅಂಬೇಡ್ಕರ್ ಸಮಾಲೋಚಿಸುತ್ತಿದ್ದರು. ಮಹಾರಾಷ್ಟ್ರದ ಹಿರಿಯ ಕಮ್ಯುನಿಸ್ಟ್ ನಾಯಕ, ರೈತ ಹೋರಾಟಗಾರರಾದ ಶಾಮರಾವ ಪರುಳೇಕರ್ ಅವರು ಕೂಡ ಅಂಬೇಡ್ಕರ್ ಅವರ ಒಡನಾಡಿಯಾಗಿದ್ದರು. ಅಂಬೇಡ್ಕರ್ ಅವರು ಹಿಂದುತ್ವವಾದಿಗಳ ಆಕ್ಷೇಪಗಳನ್ನು ಎದುರಿಸಿ, ಲಂಡನ್ನಿನ ದುಂಡುಮೇಜಿನ ಸಭೆಗೆ ಹೋದಾಗ, ಅವರೊಂದಿಗೆ ಕಾರ್ಮಿಕ ನಾಯಕ ಎನ್. ಎಂ. ಜೋಶಿಯವರು ಸಹ ಇದ್ದರು. ೧೯೩೭ರಲ್ಲಿ ಮುಂಬೈ ಪ್ರಾಂತ್ಯದ ನ್ಯಾಯ ವಿಧಾಯಕ ಸಭೆ ಚುನಾವಣೆಯಲ್ಲಿ ಅಂಬೇಡ್ಕರ್ ಅವರು ತಮ್ಮ ಸ್ವತಂತ್ರ ಕಾರ್ಮಿಕ ಪಕ್ಷದಿಂದ ಕಮ್ಯುನಿಸ್ಟ್ ನಾಯಕ ಶಾಮರಾವ ಪರುಳೇಕರ್ ಅವರನ್ನು ಠಾಣೆ ಮತಕ್ಷೇತ್ರದಿಂದ ನಿಲ್ಲಿಸಿ, ವಿಧಾನಸಭೆಗೆ ಆರಿಸಿ ಬರುವಂತೆ ಮಾಡಿದರು.

ಅಂಬೇಡ್ಕರ್ ಜೀವನದ ಇನ್ನೊಂದು ಅವಿಸ್ಮರಣೀಯ ಘಟನೆಯೆಂದರೆ, ಮಹಾಡನ ಚೌದಾರ ಕೆರೆ ನೀರನ್ನು ಮುಟ್ಟಲು ನಡೆಸಿದ ಹೋರಾಟ. ಚೌದಾರ ಕೆರೆ ನೀರನ್ನು ಮುಟ್ಟಲು ದಲಿತ ಸಮುದಾಯವನ್ನು ಕಟ್ಟಿಕೊಂಡು ಅಂಬೇಡ್ಕರ್ ನಡೆಸಿದ ಈ ಹೋರಾಟದಲ್ಲಿ ಅವರೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಓಡಾಡಿದವರು ಕಮ್ಯುನಿಸ್ಟ್ ನಾಯಕ ರಾಮಚಂದ್ರ ಮೋರೆ.

೩೦ರ ದಶಕದಲ್ಲಿ ಕಾರ್ಮಿಕರ ಹೋರಾಟದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ ಅಂಬೇಡ್ಕರ್ ಬ್ರಾಹ್ಮಣ್ಯ ಮತ್ತು ಬಂಡವಾಳಶಾಹಿ ಕಾರ್ಮಿಕ ವರ್ಗದ ಅವಳಿ ಶತ್ರುಗಳೆಂದು ಹೇಳಿದರು. ಜಗತ್ತಿನ ಕಾರ್ಮಿಕರು ಒಂದೇ ಎಂದು ಘೋಷಣೆ ಕೂಗಿದರೂ ಕೂಡ ಮೇಲ್ಜಾತಿಯ ಕಾರ್ಮಿಕರು ಅಸ್ಪೃಶ್ಯತೆ ಪಾಲನೆ ಮಾಡುತ್ತಿರುವ ಬಗ್ಗೆ ಅಂಬೇಡ್ಕರ್ ಅವರಿಗೆ ಅಸಮಾಧಾನವಿತ್ತು. ಮುಂಬೈ ಮತ್ತು ಅಹಮದಾಬಾದ್‌ನಲ್ಲಿ ಜವಳಿ ಗಿರಣಿಗಳ ನೇಯ್ಗೆ ವಿಭಾಗದಿಂದ ದಲಿತ ಕಾರ್ಮಿಕರನ್ನು ಹೊರಗಿಟ್ಟ ಬಗ್ಗೆ ಅವರಿಗೆ ಅಸಮಾಧಾನವಿತ್ತು. ಕಡಿಮೆ ಸಂಬಳದ ನೂಲುವ ವಿಭಾಗದಲ್ಲಿ ಮಾತ್ರ ದಲಿತರು ಕೆಲಸ ಮಾಡಬೇಕಿತ್ತು. ದಲಿತರನ್ನು ನೇಯ್ಗೆ ವಿಭಾಗದಿಂದ ಹೊರಗಿಡಲು ಕಾರಣ ಸವರ್ಣೀಯ ಹಿಂದೂ ಕಾರ್ಮಿಕರು. ಅವರೊಡನೆ ಕೆಲಸ ಮಾಡಲು ಒಪ್ಪಿಕೊಳ್ಳಲಿಲ್ಲ ಎಂಬುದಾಗಿತ್ತು. ಬ್ರಾಹ್ಮಣ್ಯವೆಂದರೆ, ಬ್ರಾಹ್ಮಣರಲ್ಲ. ಅದು ಸ್ವಾತಂತ್ರ್ಯ ಸಮಾನತೆಯ ನಿರಾಕರಣೆ ಎಂದು ಪ್ರತಿಪಾದಿಸಿದ ಅಂಬೇಡ್ಕರ್ ಅವರು ಜವಳಿ ಗಿರಣಿ ಕಾರ್ಮಿಕರಲ್ಲಿ ಇರುವ ಅಸ್ಪೃಶ್ಯತೆಯನ್ನು ಯಾಕೆ ಪ್ರತಿಭಟಿಸುವುದಿಲ್ಲ ಎಂದು ಕಮ್ಯುನಿಸ್ಟ್ ನಾಯಕರನ್ನು ಪ್ರಶ್ನಿಸುತ್ತಿದ್ದರು. ಆದರೆ ಕ್ರಾಂತಿ ಮಾಡಿ, ಹೊಸ ಸಮಾಜ ನಿರ್ಮಾಣವಾದಾಗ ಎಲ್ಲಾ ಸರಿಹೋಗುತ್ತದೆ ಎಂದು ನಂಬಿದರು ಅಂದಿನ ಕಮ್ಯುನಿಸ್ಟ್ ನಾಯಕರು. ಕಾರ್ಮಿಕರಲ್ಲಿನ ಅಸ್ಪೃಶ್ಯತೆ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಕಮ್ಯುನಿಸ್ಟ್ ನಾಯಕರಾದ ಡಾಂಗೆ ಮತ್ತು ರಣದಿವೆ ಜೊತೆಗೆ ಹಲವಾರು ಬಹಿರಂಗ ಸಭೆಗಳಲ್ಲಿ ವೇದಿಕೆ ಹಂಚಿಕೊಂಡ ಅಂಬೇಡ್ಕರ್ ಅವರ ವೇದಿಕೆಯಲ್ಲಿ ಜೊತೆಗಿದ್ದ ಕಮ್ಯುನಿಸ್ಟ್ ನಾಯಕರನ್ನು ಉದ್ದೇಶಿಸಿ ಮಾರ್ಕ್ಸ್‌ವಾದ ಮತ್ತು ಸಮಾಜವಾದ ಸಿದ್ಧಾಂತಕ್ಕೆ ಸಂಬಂಧಿಸಿದಂತೆ ನೀವೆಲ್ಲರೂ ಓದಿರುವುದಕ್ಕಿಂತ ಹೆಚ್ಚು ಪುಸ್ತಕಗಳನ್ನು ನಾನು ಓದಿದ್ದೇನೆ ಎಂದು ಹೇಳಿದರು. ಭಾರತದಲ್ಲಿ ಕಾರ್ಮಿಕ ವರ್ಗ ಆರ್ಥಿಕ ಬೇಡಿಕೆಗೆ ಮಾತ್ರವೇ ಮುಂದಾದರೆ ಸಾಲದು. ಕಾರ್ಮಿಕರಲ್ಲಿರುವ ಜಾತಿವ್ಯವಸ್ಥೆ ಮತ್ತು ಅಸ್ಪೃಶ್ಯತೆ ತೊಲಗಿಸಬೇಕೆಂದು ಪ್ರತಿಪಾದಿಸಿದರು.

## ಅಭಿನಂದನೆ...

ಕರ್ನಾಟಕ ಲೇಖಕಿಯರ ಸಂಘದ ವತಿಯಿಂದ ೨೦೧೭ನೇ ಸಾಲಿನ 'ನೀಳಾದೇವಿ ದತ್ತಿ ಪ್ರಶಸ್ತಿ'ಯನ್ನು ಡಾ॥ ಗೀತಾ ಶೆಣೈ ಅನುವಾದಿಸಿರುವ ಧರ್ಮಾನಂದ ಕೊಸಾಂಬಿ ಅವರ 'ನಿವೇದನೆ' ಎಂಬ ಕೃತಿಗೆ ಲಭಿಸಿದೆ. ಅನುವಾದಕಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.




ಆರ್ಥಿಕ ಪುನರ್ ನಿರ್ಮಾಣ ಪ್ರಶ್ನೆಗೆ ಸಂಬಂಧಿಸಿದಂತೆ ಅಂಬೇಡ್ಕರ್ ಅವರಿಗೆ ಕಮ್ಯುನಿಸ್ಟ ರೊಂದಿಗೆ ಯಾವುದೇ ಭಿನ್ನಾಭಿಪ್ರಾಯ ಇರಲಿಲ್ಲ. ಕಾಂಗ್ರೆಸ್ ನಾಯಕರು ಪ್ರತಿಪಾದಿಸುತ್ತಿದ್ದ ಪ್ರಜಾಸತ್ತಾತ್ಮಕ ಸಮಾಜವಾದವನ್ನು ಅವರು ಒಪ್ಪಿಕೊಳ್ಳಲಿಲ್ಲ. ಶೋಷಣೆಗೆ ಒಳಗಾದವರ ಜನಪ್ರಭುತ್ವವನ್ನು ಸ್ವಾಧೀನ ಪಡಿಸಿಕೊಂಡು ಬದಲಾವಣೆ ತರಬೇಕೆಂದು ಹೇಳುತ್ತಿದ್ದರು.

ಈ ಮಾತನ್ನು ಯಾವುದೇ ಪಕ್ಷದ ಸಮರ್ಥನೆಗಾಗಿ ನಾನು ಹೇಳುತ್ತಿಲ್ಲ. ಚಾರಿತ್ರಿಕ ಸತ್ಯಗಳು ಮರೆಮಾಚಲ್ಪಡಬಾರದೆಂಬ ಕಾಳಜಿಯಿಂದ ಪ್ರಸ್ತಾಪಿಸುತ್ತಿರುವೆ. ಬಾಬಾ ಸಾಹೇಬರ ಜೊತೆ ಒಡನಾಟ ಹೊಂದಿದ್ದ ಕೆಲ ಹಿರಿಯರು ಹೇಳಿದ್ದ ಮಾತುಗಳನ್ನು ಇಲ್ಲಿ ದಾಖಲಿಸುತ್ತಿರುವೆ. ಮನುವಾದಿ ಶಕ್ತಿಗಳು ಕಾರ್ಪೊರೇಟ್ ಬಂಡವಾಳಶಾಹಿ ಜೊತೆಗೆ ಸೇರಿ ಭಾರತವನ್ನು ಶತಮಾನಗಳ ಹಿಂದಿನ ಕತ್ತಲ ಯುಗಕ್ಕೆ ಕೊಂಡೊಯ್ಯುವ ಮಸಲತ್ತು ನಡೆಸಿರುವ ಇಂದಿನ ದಿನಗಳಲ್ಲಿ ನಾವು ತುಂಬ ಎಚ್ಚರದಿಂದ ಹೆಜ್ಜೆ ಇಡಬೇಕಾಗಿದೆ, ಒಂಟಿಯಾಗಿ ಅಲ್ಲ ಜೊತೆಯಾಗಿ. ಸ್ವಾತಂತ್ರ್ಯಕ್ಕಿಂತ ಮುನ್ನ ನಮ್ಮ ಬಿಜಾಪುರ ಜಿಲ್ಲೆಯಿಂದ ಬಾಬು ರಾವ್ ಹುಜರೆ ಎಂಬ ಹಿರಿಯರು ಶಾಸಕರಾಗಿದ್ದರು. ಆಗ ಕರ್ನಾಟಕ ರಾಜ್ಯ ನಿರ್ಮಾಣವಾಗಿರಲಿಲ್ಲ. ಬಿಜಾಪುರ ಜಿಲ್ಲೆ, ಧಾರವಾಡ, ಬೆಳಗಾವಿ, ಕಾರವಾರಗಳಂತೆ ಮುಂಬೈ ರಾಜ್ಯಕ್ಕೆ ಸೇರ್ಪಡೆಯಾಗಿತ್ತು. ಆಗ ಅಂದರೆ ೧೯೪೪ನೇ ಇಸವಿಯಲ್ಲಿ ಮುಂಬೈ ವಿಧಾನಸಭೆಗೆ ಪ್ರತಿನಿಧಿಗಳನ್ನು ಆರಿಸಿ ಕಳಿಸಬೇಕಾಗುತ್ತಿತ್ತು. ಹಾಗೆ ಮೀಸಲು ಕ್ಷೇತ್ರದಿಂದ ಗೆದ್ದು ಬಂದವರು ಬಾಬುರಾವ್ ಹುಜರೆ. ಈ ಬಾಬುರಾವ್ ಹುಜರೆ ನಮ್ಮ ಹಳ್ಳಿಯ ಪಕ್ಕದ ಹಳ್ಳಿಯವರು. ಇವರು ಮುಂಬೈ ವಿಧಾನ ಸಭಾ ಸದಸ್ಯರಾಗಿದ್ದಾಗ ಡಾ॥ ಅಂಬೇಡ್ಕರ್ ಅಲ್ಲಿ ಹೆಸರಾಂತ ವಕೀಲರಾಗಿದ್ದರು. ಆ ದಿನಗಳಲ್ಲಿ ಸಹಜವಾಗಿ ಹುಜರೆಯವರಿಗೆ ಬಾಬಾ ಸಾಹೇಬರ ಸಂಪರ್ಕ ಬಂತು. ಇಂಗ್ಲಿಷ್ ಭಾಷೆ ಗೊತ್ತಿಲ್ಲದ ಇವರಿಗೆ ಡಾ॥ ಅಂಬೇಡ್ಕರ್ ಕಾನೂನು ವಿಧಿಗಳನ್ನು ವಿವರಿಸಿ, ಸದನದಲ್ಲಿ ಮಾತನಾಡಬೇಕಾದ ವಿಷಯಗಳನ್ನು ಮರಾಠಿಯಲ್ಲಿ ಬರೆದು ಬಾಯಿಪಾಠ ಮಾಡಿ ಕಳುಹಿಸುತ್ತಿದ್ದರು. ಇಂಥ ಬಾಬುರಾವ್ ಹುಜರೆ ಬದುಕಿದ್ದಾಗ ಅವರ ಸಂಪರ್ಕ ನನಗೆ ಬಂದಿತ್ತು. ಎಪ್ಪತ್ತರ ದಶಕದ ಕೊನೆಯವರೆಗೆ ಬದುಕಿದ್ದ ಹುಜರೆ ಅವರ ಬಿಜಾಪುರದ ಮನೆಗೆ ಆಗಾಗ ನಾನು ಹೋಗುತ್ತಿದ್ದೆ. ಚರ್ಚಿಸುತ್ತಿದ್ದಾಗ ಡಾ॥ ಅಂಬೇಡ್ಕರ್ ಬಗ್ಗೆ ಹುಜರೆ ಆಗಾಗ ಭಾವುಕರಾಗಿ ಹೇಳುತ್ತಿದ್ದರು. ಕಾಂಗ್ರೆಸ್‌ನಿಂದ ಶಾಸಕರಾಗಿದ್ದ ಹುಜರೆ ಅವರಿಗೆ ಕಾಂಗ್ರೆಸ್ ವಿರೋಧಿಯಾಗಿದ್ದ ಬಾಬಾ ಸಾಹೇಬರು ಸದನದಲ್ಲಿ ಮಾತಾಡಲು ಭಾಷಣ ಬರೆದು ಕೊಡುತ್ತಿದ್ದರು.

ಆಗ ಮಾತಿನ ನಡುವೆ ನಾನು ಕಮ್ಯುನಿಸಂ

ಜೊತೆಗಿನ ಅಂಬೇಡ್ಕರ್ ಸಂಬಂಧದ ಬಗ್ಗೆ ಹುಜರೆ ಅವರನ್ನು ಪ್ರಶ್ನಿಸಿದ್ದೆ. ಆಗ ಹುಜರೆ ಅವರು ಈ ಬಗ್ಗೆ ತಾಸುಗಟ್ಟಲೆ ವಿವರಿಸಿದ್ದರು. ಬಾಬುರಾವ್ ಹುಜರೆ ಅವರಿಂದ ಬಾಬಾ ಸಾಹೇಬರ ಬಗ್ಗೆ ನಾನು ಅನೇಕ ವಿಷಯ ತಿಳಿದುಕೊಂಡೆ. ಆಗ ಅಂಬೇಡ್ಕರ್ ಹೊರಗೆ ಬಿಂಬಿಸಿದಕ್ಕಿಂತ ಹೇಗೆ ಭಿನ್ನವಾಗಿದ್ದರು ಎಂದು ನನಗೆ ಅರ್ಥವಾಯಿತು. ಈವರೆಗೆ ಡಾ॥ ಅಂಬೇಡ್ಕರ್ ಅವರ ಒಂದು ಮುಖಚಿತ್ರ ಮಾತ್ರ ವ್ಯಾಪಕವಾಗಿ ಎಲ್ಲರಿಗೆ ತಿಳಿದಿದೆ. ಡಾ॥ ಅಂಬೇಡ್ಕರ್ ಸಂವಿಧಾನ ಬರೆದರು, ಬೌದ್ಧ ಧರ್ಮಕ್ಕೆ ಮತಾಂತರ ಹೊಂದಲು ದಲಿತರಿಗೆ ಕರೆ ನೀಡಿದರು, ಸ್ವತಃ ಬೌದ್ಧ ಧರ್ಮ ಸೇರಿದ್ದರು, ಇದಿಷ್ಟೇ ಹೆಚ್ಚು ಪ್ರಚಾರಕ್ಕೆ ಬಂದಿದೆ. ಆದರೆ ಅಂಬೇಡ್ಕರ್ ಸ್ವತಂತ್ರ ಮಜ್ದೂರ್ ಪಾರ್ಟಿ ಕಟ್ಟಿದರು. ಕಮ್ಯುನಿಸ್ಟರು ಮತ್ತು ಸೋಷಲಿಸ್ಟರ ಜೊತೆ ಸೇರಿ ಚಳವಳಿಗಳನ್ನು ಸಂಘಟಿಸಿದರು ಎಂಬ ಅಂಶಗಳು ಹೆಚ್ಚು ಬೆಳಕಿಗೆ ಬಂದಿಲ್ಲ.

ಕಳೆದ ಶತಮಾನದ ಮೂವತ್ತು ನಲವತ್ತರ ದಶಕದಲ್ಲಿ ಡಾ॥ ಅಂಬೇಡ್ಕರ್ ಕಮ್ಯುನಿಸ್ಟರ ಕಿಸಾನ್ ಸಭಾ ಜೊತೆಗೆ ಸೇರಿ ಕೊಂಕಣ್ ಭಾಗದಲ್ಲಿ ಖೋತ್ ಜಮೀನುದಾರಿ ಪದ್ಧತಿ ವಿರುದ್ಧ ಹೋರಾಡಿದ ಕಮ್ಯುನಿಸ್ಟ್ ನಾಯಕ ಶಾಮರಾವ್ ಪರುಳೇಕರ್ ಆಗ ಬಾಬಾ ಸಾಹೇಬರ ಹೆಗಲಿಗೆ ಹೆಗಲು ಕೊಟ್ಟು ಹೋರಾಡಿದರು ಎಂಬ ಸಂಗತಿಯನ್ನು ಹುಜರೆ ನನಗೆ ಹೇಳಿದರು.

೧೯೩೬ರಲ್ಲಿ ಬಾಬಾ ಸಾಹೇಬರು ಸ್ವತಂತ್ರ ಮಜ್ದೂರ್ ಪಕ್ಷ ಸ್ಥಾಪಿಸಿದರು. ಎಲ್ಲಾ ಶ್ರಮಜೀವಿಗಳು ಒಂದಾಗ ಬೇಕೆಂಬುದು ಈ ಸ್ವತಂತ್ರ ಕಾರ್ಮಿಕ ಪಕ್ಷದ ಘೋಷಣೆ ಯಾಗಿತ್ತು. ಬಾಬಾ ಸಾಹೇಬರ ಸ್ವತಂತ್ರ ಮಜ್ದೂರ್ ಸಂಘವು ಕೆಂಪು ಬಣ್ಣದ ಬಾವುಟವನ್ನು ತನ್ನ ಧ್ವಜವನ್ನಾಗಿ ಸ್ವೀಕರಿಸಿತ್ತು. ಈ ಬಾವುಟದಲ್ಲಿ ಐದು ನಕ್ಷತ್ರಗಳಿದ್ದವು. ಇದನ್ನು ಕೂಡ ಹುಜರೆ ನನಗೆ ಹೇಳಿದ್ದರು. ನಂತರ ದಾಖಲೆಗಳನ್ನು ಹುಡುಕಿದಾಗ ನನಗೆ ಖಚಿತವಾಯಿತು.

ಸ್ವತಂತ್ರ ಕಾರ್ಮಿಕ ಪಕ್ಷದಿಂದ ಭೂಮಿಯ ಪ್ರಶ್ನೆಯನ್ನು ಪ್ರಧಾನವಾಗಿ ಎತ್ತಿಕೊಂಡ ಡಾ॥ ಅಂಬೇಡ್ಕರ್ ನಾಲ್ಕು ಪ್ರಮುಖ ಘೋಷಣೆಗಳನ್ನು ಮುಂದಿಟ್ಟರು. ೧) ಜಮೀನ್ದಾರಿ ಪದ್ಧತಿ ರದ್ದು ೨) ದರ್ಖಾಸ್ತು ಹಾಗೂ ಅರಣ್ಯ ಭೂಮಿಯನ್ನು ದಲಿತರಿಗೆ ಹಂಚಬೇಕು ೩) ಕೃಷಿ ಕೂಲಿಕಾರನಿಗೆ ಕನಿಷ್ಠ ವೇತನ ನಿಗದಿಯಾಗಬೇಕು ಹಾಗೂ ದುಡಿಯುವವನಿಗೆ ಎಂಟು ತಾಸುಗಳ ಕೆಲಸದ ಮಿತಿ ಇವು ಮಾತ್ರವಲ್ಲದೆ ಇನ್ನಿತರ ಅನೇಕ ಅಂಶಗಳಿದ್ದವು.

ಈ ಬೇಡಿಕೆಗಳಿಗಾಗಿ ಕಮ್ಯುನಿಸ್ಟರ ಕಿಸಾನ್‌ಸಭಾ ಜೊತೆ ಸೇರಿ ಅಂಬೇಡ್ಕರ್ ಜಂಟಿ ಹೋರಾಟಗಳನ್ನು ಸಂಘಟಿಸಿದರು. ಅಂದಿನ ಮುಂಬೈ ಸರಕಾರ ಕಾರ್ಮಿಕ ವಿರೋಧಿ ವಿಧೇಯಕ ತಂದಾಗ ಕಮ್ಯುನಿಸ್ಟ್ ನಾಯಕ ಎಸ್. ಎ. ಡಾಂಗೆ ಅವರನ್ನು ಜೊತೆಗೆ ಕರೆದುಕೊಂಡು ಚಾರಿತ್ರಿಕ ಮುಷ್ಕರ ಸಂಘಟಿಸಿದರು. ಈ ಮುಷ್ಕರದ ಮೆರವಣಿಗೆ ಮೇಲೆ ಪೊಲೀಸ್ ಗೋಲಿಬಾರ್ ನಡೆದು ಇಬ್ಬರು ಕಾರ್ಮಿಕರು ಸಾವಿಗೀಡಾದರು.

ಕಮ್ಯುನಿಸ್ಟರ ಜೊತೆ ಸೇರಿ ಅನೇಕ ಹೋರಾಟಗಳನ್ನು ಬಾಬಾ ಸಾಹೇಬರು ಸಂಘಟಿಸಿದರು. ಆದರೆ ಮಹಾರಾಷ್ಟ್ರದ ಅಂದಿನ ಕಮ್ಯುನಿಸ್ಟ್ ನಾಯಕರು ಬಾಬಾ ಸಾಹೇಬರ ಭಾವನೆಗಳಿಗೆ ಸರಿಯಾಗಿ ಸ್ಪಂದಿಸಲಿಲ್ಲ, ಬಾಲಗಂಗಾಧರ



ತಿಲಕರಂತಹ ಬಲಪಂಥೀಯ ಸನಾತನವಾದಿಗಳ ಜೊತೆ ಹೆಚ್ಚು ಒಡನಾಟ ಹೊಂದಿದ್ದರು. ಮಹಾರಾಷ್ಟ್ರದಲ್ಲಿ ಅಕ್ಷರವಂಚಿತ ಸಮುದಾಯಗಳಿಗೆ ಬೆಳಕನ್ನು ನೀಡಿದ ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ ಮತ್ತು ಶಾಹು ಮಹಾರಾಜ ಅಂತಹವರ ಕೊಡುಗೆ ಬಗ್ಗೆ ಕಮ್ಯುನಿಸ್ಟರು ಯಾಕೋ ಪ್ರಾಮುಖ್ಯತೆ ನೀಡಲಿಲ್ಲ. ಗಣೇಶ ಉತ್ಸವಗಳ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಧರ್ಮದ ಬಣ್ಣ ಬಳಿದ ಬಾಲಗಂಗಾಧರ ತಿಲಕ್ ಅವರೊಂದಿಗೆ ಡಾಂಗೆಯವರಂತಹ ಕಮ್ಯುನಿಸ್ಟ್ ನಾಯಕರು ಒಡನಾಟ ಹೊಂದಿದ್ದರು. ಆದರೆ, ಪರುಳೇಕರ್, ರಾಮಚಂದ್ರ ಮೋರೆ ಮುಂತಾದ ಕಮ್ಯುನಿಸ್ಟ್ ನಾಯಕರು ಅಂಬೇಡ್ಕರ್ ಜೊತೆಗೆ ಒಳ್ಳೆಯ ಬಾಂಧವ್ಯ ಹೊಂದಿದ್ದರು.

'ಪ್ರೊಲೆಟೇರಿಯನ್' ಎಂದು ಯುರೋಪಿಯನ್ ಸಂಬಂಧದಲ್ಲಿ ಕಾರ್ಲ್‌ಮಾರ್ಕ್ಸ್ ವ್ಯಾಖ್ಯಾನಿಸಿದ ಕಾರ್ಮಿಕ ವರ್ಗ ಭಾರತದ ಸಂದರ್ಭದಲ್ಲಿ ಜಾತಿಗಳಾಗಿ ಒಡೆದುಹೋಗಿದೆ. ಶ್ರಮಿಕರ ನಡುವಿನ ಜಾತಿ ಸಂಬಂಧಗಳು ಕೂಡ ನಾಶವಾಗಬೇಕೆಂಬುದು ಬಾಬಾ ಸಾಹೇಬರ ನಿಲುವಾಗಿತ್ತು. ಕಮ್ಯುನಿಸ್ಟ್ ಚಳವಳಿಯಲ್ಲೂ ನಾನಾ ಪಾಟೀಲ ಎಸ್. ಎಸ್. ಮಿರಾಜ್‌ಕರ್ ಅವರಂಥ ಬ್ರಾಹ್ಮಣೇತರ ನಾಯಕರು ಅಣ್ಣಾ ಬಾಪು ಸಾಠೆ, ರಾಮಚಂದ್ರ ಮೋರೆ, ಅಮರ್ ಶೇಖ್, ನಾರಾಯಣ ಸುರ್ವೆ ಅವರಂಥ ದಲಿತ ಅಲ್ಪಸಂಖ್ಯಾತ ನಾಯಕರು ಹೊರಹೊಮ್ಮಿದರು. ಆದರೆ ಭಾರತದ ಜಾತಿ ಪದ್ಧತಿಯ ವಾಸ್ತವವನ್ನು ಕಮ್ಯುನಿಸ್ಟರು ಅರ್ಥಮಾಡಿಕೊಳ್ಳಲಿಲ್ಲ. ಅಂತಲೇ ಅಂಬೇಡ್ಕರ್ ಜೊತೆಗಿನ ಜಂಟಿ ಹೋರಾಟ ಮುಂದುವರಿಯಲಿಲ್ಲ. ಆದರೆ ಅಂಬೇಡ್ಕರ್ ಸೈದ್ಧಾಂತಿಕವಾಗಿ ಕಮ್ಯುನಿಸ್ಟರಿಗೆ ಹತ್ತಿರದಲ್ಲೇ ಇದ್ದರು. ತಮ್ಮ ಜೀವನದ ಕೊನೆಯ ದಿನಗಳಲ್ಲಿ ಅವರು ಭೂಮಿಯ ರಾಷ್ಟ್ರೀಕರಣದ ಘೋಷಣೆ ಮಾಡಿದರು. ಕೈಗಾರಿಕೆಗಳು ರಾಷ್ಟ್ರದ ಸಂಪತ್ತಾಗಬೇಕೆಂದು ಹೇಳಿದರು. ಇಂಥ ಅಂಬೇಡ್ಕರ್ ನಮ್ಮನ್ನಗಲಿದ ಆರು ದಶಕದ ನಂತರ ಜಗತ್ತಿನ ಮತ್ತು ದೇಶದ ಪರಿಸ್ಥಿತಿಯಲ್ಲಿ ಸಾಕಷ್ಟು ಬದಲಾವಣೆ ಆಗಿದೆ. ಸೋವಿಯತ್ ರಷ್ಯದ ಪತನದ ನಂತರ ಹೊಸಪೀಳಿಗೆಯ ಕಮ್ಯುನಿಸ್ಟರು ಸಾಕಷ್ಟು ಬದಲಾಗಿದ್ದಾರೆ.

ಈ ಕಾಲಘಟ್ಟದಲ್ಲಿ ದಲಿತ ಸಂಘಟನೆಗಳು ಮತ್ತೆ ಭೂಮಿಯ ಪ್ರಶ್ನೆಯನ್ನು ಕೈಗೆತ್ತಿಕೊಂಡಿವೆ. ಗುಜರಾತಿನಲ್ಲಿ ಆರಂಭವಾದ ಹೋರಾಟ ಉಡುಪಿವರೆಗೆ ಬಂದಿದೆ. ಈ ಸಂದರ್ಭದಲ್ಲಿ ದಲಿತ ಪ್ರಜ್ಞೆಯ ಹೊಸ ಐಕಾನ್ ಆದ ಜಿಗ್ನೇಶ್ ಮೆವಾನಿ ಹೇಳಿದ ಮಾತು ಹೊಸ ಆಂದೋಲನದ ಮುನ್ನಡೆಯ ಬೆಳಕಾಗಬೇಕಾಗಿದೆ. 'ಚರಿತ್ರೆಯಲ್ಲಿ ಏನೇ ತಪ್ಪು ಮಾಡಿದ್ದರೂ ಕಮ್ಯುನಿಸ್ಟರು ನಮ್ಮ ಹೋರಾಟದ ನೈಜ ಸಂಗಾತಿಗಳು' ಎಂದು ಹೇಳಿದ್ದಾರೆ.

ಕಳೆದ ಶತಮಾನದ ೩೦ ಮತ್ತು ೪೦ರ ದಶಕದಲ್ಲಿ ಜೊತೆಗೂಡಿ ಸಾಗಲು ಯತ್ನಿಸಿ, ವಿಫಲಗೊಂಡಿದ್ದ ದಲಿತ ಮತ್ತು ಕಮ್ಯುನಿಸ್ಟ್ ಚಳವಳಿಗಳು ಈಗ ಮತ್ತೆ ಹತ್ತಿರ ಬಂದಿವೆ. ಹೊಸ ಪೀಳಿಗೆಯ ಕಮ್ಯುನಿಸ್ಟರು ಬಾಬಾ ಸಾಹೇಬರನ್ನು ಕಾರ್ಲ್‌ಮಾರ್ಕ್ಸ್ ಜೊತೆಗಿಟ್ಟು ಗೌರವಿಸುತ್ತಿದ್ದಾರೆ. ಸಂಘ ಪರಿವಾರದ ಮನುವಾದಿ ಫ್ಯಾಸಿಸಂ ವಿರುದ್ಧ ದೆಹಲಿಯ ಜವಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಆರಂಭವಾದ ಹೋರಾಟದಲ್ಲಿ ಕನ್ಹಯ್ಯ ಕುಮಾರ್ ಮುಂತಾದ ಸಂಗಾತಿಗಳು ಮೊಳಗಿಸಿದ ಘೋಷಣೆ : ಜೈಭೀಮ್ ಲಾಲ್ ಸಲಾಂ. ಭಾರತದ ದಮನಿತ ಜನತೆಯ ಮುನ್ನಡೆಗೆ ಇದೊಂದೇ ಉಳಿದ ದಾರಿಯಾಗಿದೆ.

**ಸನತ್‌ಕುಮಾರ ಬೆಳಗಲಿ**
ಕೇರಾಫ್. ಶ್ರೀ ಸಿದ್ಧರಾಮಪ್ಪ ಸಜ್ಜನ್, ನಂ. ೧೦–೨–೧೮೨
ಕೋರ್ಟ್ ದೇವಸ್ಥಾನ ರಸ್ತೆ, ಘಂಟೋಜಿ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್ ಹತ್ತಿರ, ಕಲಬುರಗಿ – ೫೮೫ ೧೦೨

# ಟ್ರಂಪ್ ನೀತಿಯಿಂದ ಪ್ಯಾಲಸ್ತೀನಿಯನ್ನರಿಗೆ ದ್ರೋಹ

ನೆಲೆ ಇಲ್ಲದೆ ಇದ್ದ ಯೆಹೂದ್ಯರಿಗೆ ಲಭಿಸಿದ್ದು ಇಸ್ರೇಲ್. ಅಲ್ಲಿಯೇ ನೆಲೆಯೂರಿದ್ದ ಪ್ಯಾಲಸ್ತೀನ್ ಅರಬ್ಬರಿಗೆ ಮಾತ್ರ ಇನ್ನೂ ದಕ್ಕದ ಪ್ಯಾಲಸ್ತೈನ್. ಅದು ದಕ್ಕುವ ಅವಕಾಶವೂ ಇಲ್ಲವಾಗುತ್ತಿದೆ. ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಅಪೇಕ್ಷೆಯ ಪ್ರಕಾರ. ಇಪ್ಪತ್ತು ವರ್ಷಗಳಿಂದ ಅಮೆರಿಕ ಅನುಸರಿಸುತ್ತ ಬಂದಿರುವ ಎರಡು ರಾಷ್ಟ್ರಗಳ ಇಸ್ರೇಲ್, ಪ್ಯಾಲಸ್ತೈನ್–ನಿರ್ಮಾಣದ ನೀತಿಯನ್ನು ಕೈಬಿಟ್ಟು ಇಸ್ರೇಲ್ ಒಂದನ್ನೇ ಮಾನ್ಯ ಮಾಡುವ ಯೋಜನೆ ಮಂಡಿಸಿದ್ದಾರೆ. ಟ್ರಂಪ್ ಈ ವಿಷಯವನ್ನು ಇಸ್ರೇಲ್ ಪ್ರಧಾನಿ ನೆತಾನ್ಯಹು ಇವರೊಂದಿಗೆ ಪ್ರಸ್ತಾಪ ಮಾಡಿದ್ದಾರೆ. ಆತ ಸಹಜವಾಗಿಯೇ ಇದರಿಂದ ಸಂತೋಷಪಟ್ಟಿದ್ದಾನೆ. ಏಳು ದಶಕಗಳಿಂದ ಪ್ಯಾಲಸ್ತೈನ್ ಅರಬ್ಬರು ಸ್ವತಂತ್ರ ತಾಯ್ನಾಡಿಗಾಗಿ ನಡೆಸುತ್ತ ಬಂದಿರುವ ಹೋರಾಟ ಕೈಗೂಡುವುದು ದುಸ್ತರವಾಗುತ್ತಿದೆ. ಅಧಿಕಾರ ವಹಿಸಿಕೊಂಡ ಒಡನೆಯೇ ಟ್ರಂಪ್ ಮಾಡಿದ ಮೊದಲ ಕೆಲಸ ಎಂದರೆ ಆಕ್ರಮಿತ ಪ್ರದೇಶದಲ್ಲಿರುವ ಪ್ಯಾಲಸ್ತೈನಿಯನ್ನರಿಗೆ ಅಮೆರಿಕ ನೀಡುತ್ತಿದ್ದ ೨೨೧ ಮಿಲಿಯ ಮಾನವೀಯ ನೆರವನ್ನು ಏಕಾಏಕಿ ರದ್ದುಗೊಳಿಸಿದ್ದು. ಇಸ್ರೇಲ್ ಸ್ಥಾಪನೆಯಾದಾಗಿನಿಂದ ವಿಸ್ತರಣಾ ನೀತಿಯನ್ನು ಅನುಸರಿಸುತ್ತ ಬಂದಿದೆ. ಮೂರು ಯುದ್ಧಗಳು ಈ ಪ್ರದೇಶದಲ್ಲಿ ನಡೆದಾಗಲೂ ಲಾಭವಾದ್ದು ಇಸ್ರೇಲಿಗೆ. ಆಕ್ರಮಿತ ಪ್ರದೇಶಗಳಲ್ಲಿ ಇಸ್ರೇಲ್ ಏಳುನೂರಕ್ಕೂ ಹೆಚ್ಚು ಯೆಹೂದಿ ವಸತಿಪ್ರದೇಶಗಳನ್ನು ಸ್ಥಾಪಿಸಿದೆ. ಪ್ಯಾಲಸ್ತೈನ್‌ರ ಪಾಲಿಗೆ ಇರುವುದೆಲ್ಲ ಕೊಳಚೆ ಪ್ರದೇಶಗಳೆ. ಸುಮಾರು ೬೫೦,೦೦೦ ಯೆಹೂದ್ಯರು ಬೇರೆ ಬೇರೆ ಕಡೆಗಳಿಂದ ಬಂದು ಇಸ್ರೇಲಿನಲ್ಲಿ ನೆಲೆಸಿದ್ದಾರೆ. ಸುಮಾರು ೨೫೦,೦೦೦ ಪ್ಯಾಲಸ್ತೈನಿಯನ್ನರು ನಿರಾಶ್ರಿತರಾಗಿ ವಲಸೆ ಹೋಗಿದ್ದಾರೆ ಎಂದು ವಿಶ್ವಸಂಸ್ಥೆ ಅಂದಾಜು ಮಾಡಿದೆ. ಟ್ರಂಪ್ ಅಮೆರಿಕದ ರಾಯಭಾರಿ ಕಚೇರಿಯನ್ನು ಟೆಲ್ ಅವೀವ್‌ನಿಂದ ಪ್ಯಾಲಸ್ತೈನ್‌ಗೆ ಸೇರಬೇಕಾಗಿರುವ ವಿವಾದಿತ ಜೆರೂಸಲೆಮ್‌ಗೆ ವರ್ಗಾಯಿಸಲು ನಿರ್ಧರಿಸಿದ್ದಾರೆ. ಅರ್ಥಾತ್ ಆಕ್ರಮಿತ ಪ್ರದೇಶ ವೆಸ್ಟ್ ಬ್ಯಾಂಕನ್ನು ಅಧಿಕೃತವಾಗಿ ಮಾನ್ಯ ಮಾಡುವುದೇ ಉದ್ದೇಶ.

ಮೂರು ಸಾವಿರ ವರ್ಷಗಳಷ್ಟು ಹಳೆಯ ಇತಿಹಾಸ ಹೊಂದಿರುವ ಈ ಪ್ರದೇಶದ ಹಿನ್ನೆಲೆ ರೋಚಕ. ದೊರೆ ಸಾಲೋಮನ್‌ನಿಂದ ಹಿಡಿದು ಗ್ರೀಕರು, ರೋಮನ್ನರು ಆಳ್ವಿಕೆ ನಡೆಸಿರುವ ಪ್ರದೇಶ ಇದು. ಯೆಹೂದ್ಯರು, ಅರಬ್ಬರು, ಕ್ರಿಶ್ಚಿಯನ್ನರು ಸಾಮರಸ್ಯದಿಂದ ಜೀವನ ಸಾಗಿಸುತ್ತಿದ್ದ ಪ್ರದೇಶ. ಮೊದಲನೇ ಮಹಾಯುದ್ಧದ ನಂತರ ೧೯೧೮ರಲ್ಲಿ ಈ ಪ್ರದೇಶ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು ಲೀಗ್ ಆಫ್ ನೇಷನ್ಸ್ ತೀರ್ಮಾನದಂತೆ. ಹದಿನೆಂಟನೇ ಶತಮಾನದಲ್ಲೇ ಯೆಹೂದ್ಯರು ತಾಯ್ನಾಡಿನ ಸ್ಥಾಪನೆಗಾಗಿ ಚಳವಳಿ ಪ್ರಾರಂಭಿಸಿದ್ದರು. ೨೬೦೦ ವರ್ಷಗಳ ಕಾಲ ತಮ್ಮದೇ ಆದ ತಾಯ್ನಾಡಿಲ್ಲದೆ ಅಲೆಮಾರಿಗಳಾಗಿ ಯೂರೋಪು, ಅಮೆರಿಕ ಮತ್ತು ಇತರ ಕಡೆಗಳಲ್ಲಿ ಹರಡಿಕೊಂಡಿದ್ದರು ಯೆಹೂದ್ಯರು. ಜರ್ಮನಿಯಲ್ಲಿ ಫ್ಯಾಸಿಸ್ಟರು ಅಧಿಕಾರಕ್ಕೆ ಬಂದಾಗ ಮಿಲಿಯಗಟ್ಟಲೆ ಯೆಹೂದ್ಯರು ಹಿಂಸಾಚಾರಕ್ಕೆ ಈಡಾಗಿ ಮಡಿದರು.

ಹಾಗಾಗಿ ಎರಡನೇ ಮಹಾಯುದ್ಧಾನಂತರ ಅಸ್ತಿತ್ವಕ್ಕೆ ಬಂದ ವಿಶ್ವಸಂಸ್ಥೆ ಬ್ರಿಟನ್ನಿನ ವಶದಲ್ಲಿದ್ದ ಪ್ಯಾಲಸ್ತೈನ್ ಪ್ರದೇಶವನ್ನು ಯೆಹೂದಿ ಮತ್ತು ಪ್ಯಾಲಸ್ತೈನ್ ಅರಬ್ ಭಾಗಗಳನ್ನು ಪ್ರತ್ಯೇಕಿಸಿ ಎರಡು ರಾಷ್ಟ್ರಗಳನ್ನು ಸ್ಥಾಪಿಸಲು ಶಿಫಾರಸು ಮಾಡಿತು. ಆದರೆ ಬ್ರಿಟನ್ ಮತ್ತು ಅಮೆರಿಕಗಳು ಕಿತಾಪತಿ ಮಾಡಿ, ಮಧ್ಯಪ್ರಾಚ್ಯದ ದೇಶಗಳ ಮೇಲೆ ಹಿಡಿತ ಸಾಧಿಸುವ ಉದ್ದೇಶದಿಂದ ಇಸ್ರೇಲ್ ರಾಷ್ಟ್ರವೊಂದನ್ನು ಮಾತ್ರ ಯೆಹೂದ್ಯರಿಗಾಗಿ ಸ್ಥಾಪನೆ ಮಾಡಿ ಕೈತೊಳೆದುಕೊಂಡವು; ಇಸ್ರೇಲಿಗೆ ಬೆಂಬಲವಾಗಿ ನಿಂತವು. ಅಮೆರಿಕ ಇಸ್ರೇಲನ್ನು ನ್ಯೂಕ್ಲಿಯರ್ ಶಕ್ತರಾಷ್ಟ್ರವನ್ನಾಗಿಯೂ ಮಾಡಿದೆ. ವಿಶ್ವಸಂಸ್ಥೆಯ ಭದ್ರತಾ ಸಮಿತಿಯ ಆದೇಶಗಳನ್ನು ಉಲ್ಲಂಘನೆ ಮಾಡಿದಾಗಲೆಲ್ಲ ಇಸ್ರೇಲಿಗೆ ಅಮೆರಿಕ ಬೆಂಬಲವಾಗಿ ನಿಂತಿದೆ.

ಸ್ವತಂತ್ರ ತಾಯ್ನಾಡಿನ ಸ್ಥಾಪನೆಯಿಂದ ವಂಚಿತರಾದ ಪ್ಯಾಲಸ್ತೈನ್ ಅರಬ್ಬರು 'ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ' ಎಂಬ ಸಂಘಟನೆ ಸ್ಥಾಪಿಸಿಕೊಂಡು ಹೋರಾಟ ನಡೆಸುತ್ತ ಬಂದಿದ್ದಾರೆ ಇಸ್ರೇಲ್ ಸ್ಥಾಪನೆಯಾದಾಗಿನಿಂದ. ನಾನಾ ವಿಧವಾದ ದಬ್ಬಾಳಿಕೆಗೆ ಈಡಾಗಿರುವ ಪ್ಯಾಲಸ್ತೈನಿಯನ್ನರು ಇಸ್ರೇಲಿನ ದುಂಡಾವೃತ್ತಿಗೆ ಬಲಿಯಾಗಿದ್ದಾರೆ. ವಿದೇಶಗಳಿಂದ ವಲಸೆಬಂದ ಯೆಹೂದ್ಯರನ್ನು ಅರಬ್ಬರಿಗೆ ಸೇರಬೇಕಾಗಿರುವ ಪ್ರದೇಶಗಳಲ್ಲಿ ವಸತಿಗಳನ್ನು ನಿರ್ಮಿಸಿ ನೆಲೆಗೊಳಿಸಲಾಗಿದೆ. ಹೇಳಿಕೊಳ್ಳುವುದಕ್ಕೆ ಇಪ್ಪತ್ತು ವರ್ಷಗಳ ಹಿಂದೆ ಆದ ಆಸ್ಲೋ ಒಪ್ಪಂದದ ಪ್ರಕಾರ ಸ್ವಾಯತ್ತ ಆಡಳಿತ ಪ್ರದೇಶ ಎನಿಸಿಕೊಂಡಿರುವ ಪ್ಯಾಲಸ್ತೈನ್ ಎಲ್ಲದಕ್ಕೂ ಇಸ್ರೇಲಿನ ಮೇಲೇ ಅವಲಂಬಿತವಾಗಿದೆ. ಈ ಆಸ್ಲೋ ಒಪ್ಪಂದವನ್ನು ಪ್ಯಾಲಸ್ತೈನಿಯನ್ ಮೇಲೆ ಹೇರಿದ್ದು ಕೂಡ ಅಮೆರಿಕವೆ. 'ಪ್ಯಾಲಸ್ತೈನ್ ವಿಮೋಚನಾ ಸಂಸ್ಥೆ'ಗೆ ವಿಶ್ವಸಂಸ್ಥೆಯೂ ಮಾಡಿತ್ತು. ಈಗ ಸ್ವಾಯತ್ತ ಆಡಳಿತ ಎನ್ನುವುದು ನೆಪಮಾತ್ರಕ್ಕೆ ಉಳಿದುಕೊಂಡಿದೆ. ದಿಕ್ಕು ದೆಶೆಯಿಲ್ಲದೆ ಪ್ಯಾಲಸ್ತೈನ್ ಅರಬ್ ಜನ ಕಂಗಾಲಾಗಿದ್ದಾರೆ. ಇಸ್ರೇಲ್ ಈ ಪ್ರದೇಶದಲ್ಲಿ ಪ್ರಬಲ ರಾಷ್ಟ್ರವಾಗಿ ಹೊಮ್ಮಿದ್ದು, ಆಕ್ರಮಿತ ಪ್ರದೇಶಗಳನ್ನು ಖಾಯಂ ಆಗಿಸಲು ಎಲ್ಲ ಕ್ರಮಗಳನ್ನು ತೆಗೆದುಕೊಂಡಿದೆ. ಅಮೆರಿಕದಲ್ಲಿ ಅಧಿಕಾರಕ್ಕೇರಿರುವ ಟ್ರಂಪ್ ನೀತಿ ಇಸ್ರೇಲಿಗೆ ಇನ್ನಷ್ಟು ಪುಷ್ಟಿ ನೀಡಿದೆ. ಪ್ಯಾಲಸ್ತೈನ್ ಅರಬ್ಬರು ನಿರಂತರವಾಗಿ ಇಸ್ರೇಲಿನ ಅಧೀನದಲ್ಲಿರಬೇಕಾದ ಪರಿಸ್ಥಿತಿ ಉಂಟಾಗಿದೆ. ಪ್ಯಾಲಸ್ತೈನ್ ಅರಬ್ಬರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳುವುದು ಜಾಗತಿಕ ಸಮುದಾಯದ ಹೊಣೆಯಾಗಿದೆ.


ಇಸ್ರೇಲ್ ದಾಳಿಗೆ ಪ್ಯಾಲಸ್ತೈನ್ ಅರಬ್ಬರ ಆಕ್ರೋಶ

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫






# ಬುದ್ಧನನ್ನು ಧ್ಯಾನಿಸುವ ಶರಣಗೌಡ





ಬದಲಾವಣೆಯತ್ತ ಮುಖಮಾಡುವವರಿಗೆಲ್ಲ ಈ ಭೂಮಿಯೊಂದು ಬೋಧಿಮರವಾದರೆ, ಬುದ್ಧ ಸದಾ ತಂಗಾಳಿಯಾಗಿ ಬೀಸುತ್ತಾನೆ. ಕಲಾವಿದರ ಪಾಲಿಗಂತೂ ಮುಗುಳ್ನಗೆಯ ಬುದ್ಧ ನಿರಂತರವಾಗಿ ಹರಿಯುವ ನೀರಿನ ಝುರಿಯಾಗಿ, ಜೀವಸೆಲೆಯಾಗಿ, ನಿಸರ್ಗದ ಸಂಕೇತವಾಗಿ, ಪ್ರೀತಿಯ ಹನಿಯಾಗಿ, ಶಾಂತಿ ಸಹನೆಯ ಸಾಕಾರ ಮೂರ್ತಿಯಾಗಿ, ಮನುಕುಲದ ಬೆಳಕಾಗಿ, ಪರಿಮಳ ಸೂಸುವ ಪುಷ್ಪವಾಗಿ ಹೀಗೆ ಹಲವು ರೂಪಗಳನ್ನು ತಳೆಯುತ್ತಾ, ಅಂತರಂಗವ ತೊಳೆದು ಮೂರ್ತ, ಅಮೂರ್ತಶೈಲಿಯಲ್ಲಿ ಅದ್ಭುತ ಚಿತ್ತಾರವಾಗಿ ಕಲಾವಿದರ ಕೈಚಳಕದಲ್ಲಿ ಅರಳುತ್ತಾನೆ.

ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದಿರುವ ಬಾಗಲಕೋಟ ಜಿಲ್ಲೆ, ಬಾದಾಮಿಯ ಭರವಸೆಯ ಯುವಕಲಾವಿದ ಶರಣಗೌಡ ಬಾಳನಗೌಡರು ಪ್ರಸ್ತುತ ಬುದ್ಧನ ಕುರಿತು ಬಲು ಧ್ಯಾನಿಸುತ್ತಾರೆ, ಅಂತರಂಗದ ಆನಂದಕ್ಕಾಗಿ ತಮ್ಮ ಕ್ರಿಯಾಶೀಲ ರೇಖೆಗಳ ಮೂಲಕ ಬುದ್ಧನನ್ನು ಭಿನ್ನ ಬಗೆಯಲ್ಲಿ ಕಟ್ಟಿಕೊಡಲು ನಿತ್ಯ ಕನವರಿಸುತ್ತಿದ್ದಾರೆ. ಸೃಜನಶೀಲ ಕಲಾವಿದ ಶರಣಗೌಡ ಬುದ್ಧನಿಗೆ ಶರಣಾಗಿ ಸೃಜಿಸುವ ರೇಖೆಗಳು ಅನನ್ಯವಾಗಿವೆ.

ಕೆ.ಬಿ.ವೀರಲಿಂಗನಗೌಡ್ರ.
ಚಿತ್ರಕಲಾ ಶಿಕ್ಷಕ. ಸಿದ್ದಾಪುರ-581355. ಉ.ಕ ಜಿಲ್ಲೆ











Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

**HOSATHU** Kannada Monthly /APRIL 2017 / ₹ 20 (No. of Pages 64) Date of Publication : 26th of every month
RNI Regd. KARKAN / 1999 / 614. Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.